

# ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ

NAAC accredited with "B+" Grade

**ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ**

ಹಾಗೂ

**ಸ್ನಾತ್ತಕೋತ್ತರ ಅಧ್ಯಯನ ಕೇಂದ್ರ**

ಜ್ಞಾನ ಗಂಗೋತ್ರಿ, ಜಿ.ಆರ್.ಹಳ್ಳಿ ಚಿತ್ರದುರ್ಗ

ಇವರ ಸಹಯೋಗದಲ್ಲಿ

# ಕನ್ನಡ ಸಾಹಿತ್ಯ ಸಂಶೋಧನೆ ಹೊಸ ಸಾಧ್ಯತೆಗಳು

ವಿಷಯ ಕುರಿತು ದಿನಾಂಕ ಜುಲೈ 6 ಮತ್ತು 7, 2024 ರಂದು ನಡೆದ
ಎರಡು ದಿನಗಳ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಮಂಡಿಸಿದ ಆಯ್ದ ಸಂಶೋಧನಾ ಲೇಖನಗಳ
ಸಂಗ್ರಹ

**ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ**

ದಾವಣಗೆರೆ ವಿಶ್ವವಿದ್ಯಾಲಯ

ಶಿವಗಂಗೋತ್ರಿ

ದಾವಣಗೆರೆ–577007

https://davangereuniversity.ac.in/

**Author Guidelines**

- Online submission of the article should be sent as an attachment only in MS word to: editor@srujani.in
- Articles should be in Kannada or English
- Article should be 4,000 - 8,000 words in length
- It should be typed in Times New Roman Font for English and Nudi 01 e Font for Kannada Article, Text type should be 12 Font size, 1.5 lines spaced.
- Covering letter declaring that the submitted article is original work of the author and is unpublished must be sent on a separate page
- Abstract of 150 words along with key words should be given on the separate sheet
- Text Organization: The main text should begin on a separate page preferably divided into separate sections such as Introduction, Materials and Methodology, main Subject of the article and conclusion.
- References must be according to APA 7th Edition guidelines.
- Visit our website for more details: www.srujani.in

MOB: +91-7411851852 and +91-9164061581

# ಸಂಚಿಕೆ ಸಂಪಾದಕರು

**ಡಾ. ವಿಜಯಕುಮಾರ ಎಚ್. ಜಿ**
ಸಹಾಯಕ ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

**ಡಾ. ಭೀಮಾಶಂಕರ ಜೋಷಿ**
ಸಹಾಯಕ ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ.

**ಡಾ. ಮಹಾಂತೇಶ ಪಾಟೀಲ**
ಸಹಾಯಕ ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

**ಹನುಮಂತಪ್ಪ ಸಿ. ಬಿ**
ಸಂಶೋಧನಾರ್ಥಿ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

**ರಾಘವೇಂದ್ರ ಕೆ. ಆರ್**
ಸಂಶೋಧನಾರ್ಥಿ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

**ರಂಗನಾಥ ಆರ್**
ಸಂಶೋಧನಾರ್ಥಿ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

**ತಿಪ್ಪೇಸ್ವಾಮಿ ಟಿ. ಆರ್**
ಸಂಶೋಧನಾರ್ಥಿ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

**ಮಂಜುಳಾ ಎಂ. ಎಲ್**
ಸಂಶೋಧನಾರ್ಥಿ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

**ತಿಪ್ಪೇಸ್ವಾಮಿ ಎಂ**
ಸಂಶೋಧನಾರ್ಥಿ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

## ಕುಲಪತಿಗಳ ಆಶಯ ನುಡಿ

ಭಾರತೀಯ ಭಾಷೆಗಳಲ್ಲಿ ಕನ್ನಡಕ್ಕೆ ತನ್ನದೇ ಆದ ವಿಶಿಷ್ಟ ಸ್ಥಾನವಿದೆ. ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗೆ ಸರಿಸುಮಾರು 2000 ವರ್ಷಗಳ ಇತಿಹಾಸವಿದೆ. ಶಾಸನ ಹಸ್ತಪ್ರತಿಗಳಲ್ಲಡಗಿರುವ ಇಂತಹ ಶ್ರೀಮಂತ ಸಾಹಿತ್ಯವನ್ನು ನಮ್ಮ ಪೂರ್ವಿಕರು ಸಂಶೋಧಿಸಿ ಪ್ರಕಟಿಸುವ ಮೂಲಕ ನಮಗೆ ಸಾಹಿತ್ಯ ಸುಧೆಯ ಸವಿಯನ್ನುಣಿಸಿದ್ದಾರೆ; ಇದರೊಂದಿಗೆ ಸಾಹಿತ್ಯ ಸಂಶೋಧನೆಯ ವಿಧಿ ವಿಧಾನಗಳನ್ನು ನಮಗೆ ತಿಳಿಸಿ ಕೊಟ್ಟಿದ್ದಾರೆ. ಸಾಹಿತ್ಯ ಹೃದಯಗಮ್ಯವಾದರೆ, ಸಾಹಿತ್ಯ ಸಂಶೋಧನೆಯು ಬುದ್ಧಿಗಮ್ಯವಾಗಿದೆ. ಸಾಹಿತ್ಯ ಸುಲಿದ ಬಾಳೆ ಹಣ್ಣಾದರೆ, ಸಾಹಿತ್ಯ ಸಂಶೋಧನೆ ತೊಗಟೆ ಚಿಪ್ಪುಗಳಿಂದ ಕೂಡಿದ ತೆಂಗಿನಕಾಯಿಯಾಗಿದೆ. ಸಾಹಿತ್ಯ ಅನುಭವ ಪ್ರಧಾನವಾದರೆ, ಸಾಹಿತ್ಯ ಸಂಶೊಧನೆ ಬುದ್ಧಿಪ್ರಧಾನವಾಗಿದೆ. ಬೌದ್ಧಿಕ ಕಾಳಜಿ, ತಾತ್ವಿಕ ಚಿಂತನೆಯ, ಕಲ್ಪಕತೆಯ ಮೂಲಕ ವಾಸ್ತವಿಕತೆಯ ಮೂಸೆಯಲ್ಲಿ ಘಟನೆಗಳನ್ನಿಟ್ಟ ಸಂಶೋಧಕನು ಅವುಗಳನ್ನು ಬಗೆ ಬಗೆಯ ಅವತಾರಗಳನ್ನಾಗಿ ತೋರಿಸುತ್ತಾನೆ. ಸಾಹಿತಿ ತನ್ನ ಪ್ರಜ್ಞಾ ಪಾತಳಿಯಲ್ಲಿ ಬದುಕಿನ ನಿಗೂಢಗಳನ್ನು ಕಲಾತ್ಮಕವಾಗಿ ಪುನರ್ ಸೃಷ್ಟಿ ಮಾಡುವ ಮೂಲಕ ತಾನು ಕಂಡು ಅದನ್ನು ಇತರರಿಗೂ ಕಾಣುವಂತೆ ಮಾಡುತ್ತಾನೆ. ಸಂಶೋಧಕನು ತಿಲದೊಳಗಿನ ತೈಲದಂತೆ, ಕಾಷ್ಟದೊಳಗಿನ ಅಗ್ನಿಯಂತೆ, ಹಾಲಿನೊಳಗಿನ ತುಪ್ಪದಂತೆ, ನೆಲದ ಮರೆಯ ನಿಧಿಯಂತೆ ಬೆಳಗಿಸಿ ಅದರೊಳಗಡಗಿರುವ ನಿಜಾಂಶವನ್ನು ಜನರಿಗೆ ತಿಳಿಸುವ ಮೂಲಕ ಪುನರ್ ಸೃಷ್ಟಿಕರ್ತನೆನಿಸಿಕೊಳ್ಳುತ್ತಾನೆ. ಮೂಲ ಜ್ಞಾನವನ್ನು ವ್ಯವಸ್ಥಿತ ರೀತಿಯಲ್ಲಿ ಊಹೆ ಸಂಭಾವ್ಯಗಳ ಮೂಲಕ ಸಾದರಪೂರ್ವಕವಾಗಿ ಪ್ರಿಯ ಮತ್ತು ಅಪ್ರಿಯ ಸತ್ಯವನ್ನಾಗಿಸುತ್ತ ಹೋಗುತ್ತಾನೆ. ಈ ರೀತಿಯಾಗಿ ಹಿಂದಿನ, ಮುಂದಿನ ಹೊರಗಿನ, ಒಳಗಿನ ಎಲ್ಲಾ ಅಂಶಗಳನ್ನು ಕೆದಕಿ ನಿಶ್ಚಿತ ನಿರ್ಣಯಗಳನ್ನು ಸುಂದರ ಶೈಲಿಯಲ್ಲಿ ಎದುರಿಗಿಡುವ ಕಷ್ಟಸಾಧ್ಯವಾದ ಪ್ರಯತ್ನವೇ ಸಾಹಿತ್ಯ ಸಂಶೋಧನೆ.

ಹೊಸ ಹೊಸ ಸಾಹಿತ್ಯ ಪ್ರಕಾರಗಳು ಜನ್ಮತಳೆದಂತೆ ನವೀನ ರೀತಿಯ ಸಂಶೋಧನಾ ಕಾರ್ಯಗಳತ್ತ ನಾವು ವಾಲಬೇಕಾಗುತ್ತದೆ. ನವನವೋನ್ಮೇಶಶಾಲಿನಿಯಾದ ಈ ಸಾಹಿತ್ಯ ಹಾಗೂ ಸಂಶೋಧನೆಯ ಹೊಸ ಹೊಳಹುಗಳನ್ನು ನಾವು ಅರಿಯಬೇಕಾಗಿದೆ. ಇದರ ಬಗ್ಗೆ ಹೆಚ್ಚಿನ ಜ್ಞಾನ ತಿಳಿವಳಿಕೆಯ ಅವಶ್ಯಕತೆಯನ್ನು ಮನಗಂಡ ನಮ್ಮ ದಾವಣಗೆರೆ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗದ ಸರ್ವ ಪ್ರಾಧ್ಯಾಪಕರು ಹಾಗೂ ಸಂಶೋಧನಾ ವಿದ್ಯಾರ್ಥಿಗಳು ಸೇರಿಕೊಂಡು ಚಿತ್ರದುರ್ಗದ ಸ್ನಾತಕೋತ್ತರ ಕೇಂದ್ರದಲ್ಲಿ "ಕನ್ನಡ ಸಾಹಿತ್ಯ ಸಂಶೋಧನೆಯ ಹೊಸ ಸಾಧ್ಯತೆಗಳು" ಎಂಬ ಶೀರ್ಷಿಕೆಯಡಿ ಎರಡು ದಿನಗಳ ರಾಷ್ಟ್ರೀಯ ವಿಚಾರ ಸಂಕಿರಣವನ್ನು ಆಯೋಜಿಸಿರುವುದು ಸ್ತುತ್ಯರ್ಹವಾಗಿದೆ. ಈ ವಿಚಾರ ಸಂಕಿರಣಕ್ಕೆ ವಿವಿಧ ವಿಶ್ವವಿದ್ಯಾಲಯಗಳ ಹಲವಾರು ಪ್ರಾಧ್ಯಾಪಕರು, ಸಂಶೋಧನಾರ್ಥಿಗಳು, ವಿದ್ಯಾರ್ಥಿಗಳು ತಮ್ಮ ಜ್ಞಾನ ಮಂಥನದಿಂದ ಕಡೆದು ಕಳುಹಿಸಿರುವ ಸಂಶೋಧನಾ ಲೇಖನಗಳನ್ನು ಒಂದೆಡೆ ಕ್ರೋಡೀಕರಿಸಿ ಪುಸ್ತಕ ರೂಪದಲ್ಲಿ ವಿಚಾರ ಸಂಕಿರಣದ ದಿನದಂದೇ ಆ ಪುಸ್ತಕವನ್ನು ಲೋಕಾರ್ಪಣೆಗೊಳಿಸಿ ಸರ್ವರ ಕೈ ಸೇರುವಂತೆ ಮಾಡುತ್ತಿರುವ ಈ ನಿಮ್ಮ ಕಾರ್ಯ ಶ್ಲಾಘನೀಯವಾದುದು.

ಈ ಪುಸ್ತಕವು ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ, ವಾಚಕರಿಗೆ ತುಂಬ ಉಪಯುಕ್ತವಾಗಿದ್ದು ಸಾಹಿತ್ಯ ಹಾಗೂ ಸಾಂಸ್ಕೃತಿಕ ವಲಯಕ್ಕೆ ಒಂದು ವಿಶಿಷ್ಟ ಕೊಡುಗೆಯಾಗಿದೆ. ಇಂತಹ ಕೊಡುಗೆಗೆ ಕಾರಣೀಕರ್ತರಾಗಿ ಅತೀವ ಶ್ರದ್ಧೆ ಹಾಗೂ ಸತತ ಪರಿಶ್ರಮವಹಿಸಿದ ಕನ್ನಡ ಅಧ್ಯಯನ ವಿಭಾಗದ ಅಧ್ಯಕ್ಷರಿಗೂ, ಸಂಪಾದಕ ಮಂಡಳಿಯ ಸರ್ವ

ಸದಸ್ಯರಿಗೂ, ಸಂಶೋಧನಾ ವಿದ್ಯಾರ್ಥಿಗಳಿಗೂ ವಿಶ್ವವಿದ್ಯಾನಿಲಯದ ಪರವಾಗಿ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಹಾಗೆಯೇ ಈ ಲೇಖನಗಳನ್ನು ವಿಶೇಷ ಸಂಚಿಕೆಗಳ ರೂಪದಲ್ಲಿ ಅಚ್ಚುಕಟ್ಟಾಗಿ ಮುದ್ರಿಸಿ ಹೊರತಂದು ಕನ್ನಡದ ವಿದ್ವತ್ ಲೋಕಕ್ಕೆ ಅರ್ಪಿಸಿದ ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವಲಪ್‌ಮೆಂಟ್ ಜರ್ನಲ್‌ನ ಪ್ರಕಾಶಕರನ್ನು ಸಹ ಅಭಿನಂದಿಸುತ್ತೇನೆ. ಇವರೆಲ್ಲರ ಪರಿಶ್ರಮದ ಫಲವಾಗಿ ರೂಪುಗೊಂಡ ಈ ವಿಶೇಷ ಸಂಚಿಕೆಗಳ ಸವಿಯನ್ನು ಕನ್ನಡ ಸಾರಸ್ವತಲೋಕ ಪ್ರೀತಿಯಿಂದ ಸ್ವೀಕರಿಸಿಲಿ, ಕನ್ನಡ ಅಧ್ಯಯನ ವಿಭಾಗವು ಜ್ಞಾನಾತ್ಮಕ ವಲಯದತ್ತ ಇನ್ನೂ ಹೆಚ್ಚಿನ ಯಶಸ್ಸನ್ನು ಸಾಧಿಸಲಿ ಎಂದು ಹಾರೈಸುತ್ತೇನೆ.

**ಪ್ರೊ. ಬಿ. ಡಿ. ಕುಂಬಾರ**
ಕುಲಪತಿಗಳು
ದಾವಣಗೆರೆ ವಿಶ್ವವಿದ್ಯಾನಿಲಯ
ದಾವಣಗೆರೆ

# ಸಂಪಾದಕರ ನುಡಿ

ಕನ್ನಡ ಸಾಹಿತ್ಯ ಮತ್ತು ಸಂಶೋಧನೆಗಳು ಇಂದು ಬಹುಶಿಸ್ತೀಯ ನೆಲೆಯಲ್ಲಿ ವಿಸ್ತರಿಸಿಕೊಂಡಿವೆ. ಸಾಹಿತ್ಯ ನಿಂತ ನೀರಲ್ಲ, ಅದು ನಿತ್ಯ ನೂತನವಾಗಿ ಪ್ರವಹಿಸುತ್ತಲೇ ಸಾಗಿ ಬಂದಿದೆ. ಹಾಗಾಗಿ ಅಂದಂದಿನ ಕಾಲಕ್ಕೆ ತಕ್ಕಂತೆ ಆಲೋಚನೆಗಳು, ಅಭಿರುಚಿಗಳು, ಆಯ್ಕೆಗಳು ಬದಲಾಗುತ್ತದೆ. ಬದಲಾದ ಕಾಲಕ್ಕೆ ತಕ್ಕಂತೆ, ನಮ್ಮ ಸಾಹಿತ್ಯವೂ ಸಹ ಸಮಕಾಲೀನ ಸಂವೇದನೆಗಳನ್ನು ಸ್ವೀಕರಿಸಿಕೊಂಡು ಸಾಗುತ್ತವೆ. ಸಾಹಿತ್ಯ, ಸಂಸ್ಕೃತಿ ಕುರಿತ ಸಂಶೋಧನೆಗಳು ಕೂಡ ಇಂದು ಹಲವು ನೆಲೆಯಲ್ಲಿ ವಿಸ್ತರಿಸಿಕೊಂಡಿವೆ. ನಮ್ಮ ಶೈಕ್ಷಣಿಕ ವಲಯದ ಸಂಶೋಧನೆಗಳು ಇಂದು ತೀವ್ರಗತಿಯಲ್ಲಿ ನಡೆಯುತ್ತಿವೆ. ಇವುಗಳಲ್ಲಿ ಗಟ್ಟಿಯಾದವುಗಳೆಷ್ಟು, ಜಾಳಾದವುಗಳೆಷ್ಟು ಎಂಬುದನ್ನು ನಿಕರವಾಗಿ ಯಾವ ಮಾನದಂಡದಿಂದಲೂ ಗುರುತಿಸಲು ಸಾಧ್ಯವಾಗುತ್ತಿಲ್ಲ. ಇಂದಿನ ವರ್ತಮಾನದ ತುರ್ತುಗಳು ಈ ರೀತಿಯ ಸನ್ನಿವೇಶಗಳನ್ನು ರೂಪಿಸಿವೆ. ಆದ್ದರಿಂದ 21 ನೇ ಶತಮಾನದ ಸಾಹಿತ್ಯ ಸಂಶೋಧನೆಗಳು ಎತ್ತ ಸಾಗುತ್ತಿದೆ ಎಂಬುದನ್ನು ಕಂಡುಕೊಳ್ಳುವ ಅನಿವಾರ್ಯತೆ ನಮಗೀಗ ಎದುರಾಗಿದೆ. ವಿಶ್ವವಿದ್ಯಾಲಯಗಳಲ್ಲಿ ಇಂದು ಸ್ವಲ್ಪಮಟ್ಟಿನ ಗುಣಮಟ್ಟದ ಸಂಶೋಧನೆಗಳನ್ನು ನಿರೀಕ್ಷಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ನಮ್ಮ ವಿಶ್ವವಿದ್ಯಾನಿಲಯದಿಂದ ಇಂಥದೊಂದು ಪ್ರಯೋಗಕ್ಕೆ ನಾವು ಮುಂದಾಗಿದ್ದೇವೆ. ಕನ್ನಡ ಸಾಹಿತ್ಯ–ಸಂಶೋಧನೆಯ ಹೊಸ ಸಾಧ್ಯತೆಗಳನ್ನು ಕುರಿತ ಹಾಗೆ ಎಂಬ ಹೊತ್ತಿಗೆಯನ್ನು ದಾವಣಗೆರೆ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗದಿಂದ ಹೊರತರಲು ಯೋಜಿಸಲಾಗಿದೆ.

ನಮ್ಮ ಕನ್ನಡ ಸಾಹಿತ್ಯವನ್ನು ಪ್ರಾಚೀನ, ಮಧ್ಯಕಾಲೀನ, ಆಧುನಿಕ ಕನ್ನಡ ಸಾಹಿತ್ಯವೆಂದು ಮೂರು ಮುಖ್ಯ ನೆಲೆಯಲ್ಲಿ ವಿಭಾಗಿಸಿಕೊಂಡಿದ್ದರೂ, ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಾವ್ಯ, ಸಣ್ಣಕಥೆ, ಕಾದಂಬರಿ, ನಾಟಕ, ಪ್ರಬಂಧ ಸಾಹಿತ್ಯ, ಪ್ರವಾಸ ಸಾಹಿತ್ಯ, ಅಂಕಣ ಬರಹ, ಜೀವನ ಚರಿತ್ರೆ, ಆತ್ಮಕಥೆ, ವಿಮರ್ಶೆ ಹೀಗೆ ಹಲವು ವಿಶಿಷ್ಟ ಬಗೆಯ ಸಾಹಿತ್ಯ ರೂಪಗಳನ್ನು ಕಾಣಬಹುದು. ಇಷ್ಟೊಂದು ವೈವಿಧ್ಯಮಯವಾಗಿರುವ ಕನ್ನಡ ಸಾಹಿತ್ಯ ಹೊಸ ಸಂಶೋಧನಾ ಸಾಧ್ಯತೆಗಳಿಗೆ ತನ್ನನ್ನು ತಾನು ತೆರೆದುಕೊಂಡಿದೆ. ಹಾಗಾಗಿ ಸಮೃದ್ಧವಾದ, ವಿದ್ವತ್‌ಪೂರ್ಣವಾದ ಕನ್ನಡ ಸಾಹಿತ್ಯವನ್ನು ಇಂದಿನ ಹೊಸ ಸಾಧ್ಯತೆಗಳ ಓರೆಗಲ್ಲಿಗೆ ಹಚ್ಚುವ ಪ್ರಯತ್ನಗಳು ನಡೆಯುತ್ತಿವೆ. ಈ ಪ್ರಯತ್ನದ ಫಲವಾಗಿ ನಾವು ನಮ್ಮ ವಿಭಾಗದಿಂದ ಸಂಶೋಧನಾ ಲೇಖನಗಳನ್ನು ಆಹ್ವಾನಿಸಿದೆವು. ಇದಕ್ಕೆ ಸ್ಪಂದಿಸಿದ ಕನ್ನಡದ ಸಹೃದಯರು, ಪ್ರಾಧ್ಯಾಪಕರು, ಸಂಶೋಧನಾರ್ಥಿಗಳು, ಸ್ನಾತಕೋತ್ತರ ವಿದ್ಯಾರ್ಥಿಗಳು, ಸಾಹಿತ್ಯಾಸಕ್ತರು 50 ಕ್ಕೂ ಅಧಿಕ ವಿದ್ವತ್‌ಪೂರ್ಣ ಲೇಖನಗಳನ್ನು ಕಳುಹಿಸಿದ್ದಾರೆ. ವಿವಿಧ ವಯೋಮಾನದ, ವಿವಿಧ ಕ್ಷೇತ್ರದ, ವಿವಿಧ ಅಭಿರುಚಿಯುಳ್ಳ ಲೇಖಕರ ಲೇಖನಗಳನ್ನು ಇಲ್ಲಿ ಸಂಗ್ರಹಿಸಿರುವುದರಿಂದ ಈ ಕೃತಿಯೂ ಹೊಸ ಆಲೋಚನೆ ಹಾಗೂ ಸಂಶೋಧನೆಗಳಿಗೆ ದಾರಿ ಮಾಡಿ ಕೊಡುತ್ತದೆ ಎಂಬ ಭರವಸೆ ಈ ಕೃತಿಯ ಹಿಂದಿದೆ. ಪ್ರಾಚೀನದಿಂದ ಹಿಡಿದು ಪ್ರಸ್ತುತದವರೆಗಿನ ಎಲ್ಲಾ ಬಗೆಯ ಸಾಹಿತ್ಯವನ್ನು ಇದರಲ್ಲಿ ಸಂಗ್ರಹಿಸಲಾಗಿದೆ. ಈ ಕೃತಿ ವೈಚಾರಿಕ, ವೈಧಾನಿಕ, ವೈಜ್ಞಾನಿಕ, ಜ್ಞಾನ, ಪರಂಪರೆಯನ್ನು ಸೃಷ್ಟಿಸುವಲ್ಲಿ ಸಹಕಾರಿಯಾಗಬಲ್ಲದು.

ಇಂಥದೊಂದು ಬೃಹತ್ ಆಲೋಚನೆಯನ್ನು ಹೊತ್ತು ನಡೆದಾಗ ನಮ್ಮ ಕನಸಿನ ಸಸಿಗೆ ನೀರೆರೆದು ಪೋಷಿಸಿದ ನಮ್ಮ ವಿಶ್ವವಿದ್ಯಾನಿಲಯದ ಮಾನ್ಯ ಕುಲಪತಿಗಳಾದ ಪ್ರೊ. ಬಿ. ಡಿ. ಕುಂಬಾರ ಅವರಿಗೆ ಅನಂತ ಕೃತಜ್ಞತೆಗಳು. ಈ ಸಂಚಿಕೆಗಳನ್ನು ಹೊರತರಲು ತುಂಬು ಮನಸ್ಸಿನಿಂದ ಸಹಕರಿಸಿದ ನಮ್ಮ ವಿಶ್ವವಿದ್ಯಾನಿಲಯದ ಆಡಳಿತ

ಕುಲಸಚಿವರಾದ ಪ್ರೊ. ಯು. ಎಸ್. ಮಹಾಬಲೇಶ್ವರ್ ಅವರಿಗೆ, ಪರೀಕ್ಷಾಂಗ ಕುಲಸಚಿವರಾದ ಪ್ರೊ. ಸಿ. ಕೆ. ರಮೇಶ್ ಅವರಿಗೆ, ಹಣಕಾಸು ಅಧಿಕಾರಿಗಳಾದ ಶ್ರೀ ದ್ಯಾಮನಗೌಡ್ರ ಮುದ್ದನಗೌಡ್ರ ಅವರಿಗೂ ತುಂಬು ಹೃದಯದ ಕೃತಜ್ಞತೆಗಳು.

ರಾಷ್ಟ್ರೀಯ ವಿಚಾರ ಸಂಕಿರಣ ಆಯೋಜಿಸಿ ಇಂಥದೊಂದು ಕೃತಿ ಪ್ರಕಟವಾಗಲು ಚಾಲಕ ಶಕ್ತಿಯಾಗಿ ನಮ್ಮನ್ನು ಪ್ರೋತ್ಸಾಹಿಸಿದ ಪ್ರೊ. ಬರಗೂರು ರಾಮಚಂದ್ರಪ್ಪ, ಪ್ರೊ. ಮಲ್ಲೇಪುರಂ ಜಿ ವೆಂಕಟೇಶ, ಪ್ರೊ.ಬಸವರಾಜ ಕಲ್ಗುಡಿ, ಪ್ರೊ. ಶಿವಾನಂದ ಕೆಳಗಿನಮನಿ, ಪ್ರೊ. ಜಿ. ಪ್ರಶಾಂತ ನಾಯಕ, ಪ್ರೊ. ಬಿ. ಎಂ. ಪುಟ್ಟಯ್ಯ, ಪ್ರೊ.ಜೆ. ಕರಿಯಪ್ಪ ಮಾಳಿಗೆ,ಪ್ರೊ.ಎ.ಬಿ,ರಾಮಚಂದ್ರಪ್ಪ, ಪ್ರೊ. ಹೆಚ್. ಶಶಿಕಲಾ, ಡಾ. ನೆಲ್ಲಿಕಟ್ಟೆ ಎಸ್. ಸಿದ್ದೇಶ, ಡಾ. ಗೀತಾ ವಸಂತ, ಡಾ.ತಾರೀಣಿ ಶುಭದಾಯಿನಿ, ಡಾ. ಹಾ. ಮಾ. ನಾಗಾರ್ಜುನ ಮುಂತಾದ ವಿದ್ವಾಂಸರಿಗೆ ನಮ್ಮ ಅಧ್ಯಯನ ವಿಭಾಗದ ಪರವಾಗಿ ವಿಶೇಷ ಧನ್ಯವಾದಗಳು.

ಏಕಕಾಲಕ್ಕೆ 50 ಲೇಖನಗಳನ್ನು ಸಂಗ್ರಹಿಸಿ, ಪ್ರಕಟಿಸುವ ಮಹತ್ ಕಾರ್ಯದಲ್ಲಿ ಅವಿರತವಾಗಿ ನಮ್ಮೊಟ್ಟಿಗೆ ಶ್ರಮಿಸಿದ ನಮ್ಮ ಕನ್ನಡ ಅಧ್ಯಯನ ವಿಭಾಗದ ಅಧ್ಯಕ್ಷರಾದ ಡಾ.ಜಯರಾಮಯ್ಯ, ವಿ., ಸಹೊದ್ಯೋಗಿ ಮಿತ್ರರುಗಳಾದ ಡಾ.ಹೆಚ್.ವಿಶ್ವನಾಥ್., ಪ್ರೊ. ಜೋಗಿನಕಟ್ಟೆ ಮಂಜುನಾಥ್., ಡಾ.ಮಲ್ಲಿಕಾರ್ಜುನ., ಕೆ. ಡಾ.ಬಸವರಾಜ್,ಬಿ., ಡಾ.ಶಾಂತರಾಜು.ಹೆಚ್.ವಿ., ಇವರೆಲ್ಲರಿಗೂ ಕೃತಜ್ಞತೆಗಳು. ಈ ವಿಶೇಷ ಸಂಚಿಕೆಗಳ ಪ್ರಕಟಣೆಯ ಸಂಪೂರ್ಣ ಜವಾಬ್ದಾರಿ ಹೊತ್ತು ನಾಡಿನಾದ್ಯಂತ ಸಂಪರ್ಕ ಸಾಧಿಸಿ, ಲೇಖನಗಳನ್ನು ಸಂಗ್ರಹಿಸಿ, ಹಗಲು–ರಾತ್ರಿ ಕಾರ್ಯ ನಿರ್ವಹಿಸಿ, ಅದರ ಯಶಸ್ಸಿನ ಸಂಪೂರ್ಣ ಹಕ್ಕುದಾರರು, ಪ್ರೀತಿಯ ಸಂಶೋಧನಾ ಮಿತ್ರರೂ ಆದ ಹನುಮಂತಪ್ಪ. ಸಿ.ಬಿ., ರಾಘವೇಂದ್ರ. ಕೆ.ಆರ್., ನಾಗರಾಜ. ಎಸ್., ವೆಂಕೋಬ ತಳವಾರ., ಹರೀಶ. ಕೆ.ಜೆ., ಮಂಜುಳಾ. ಎಂ.ಎಲ್., ರಂಗನಾಥ. ಆರ್., ತಿಪ್ಪೆಸ್ವಾಮಿ. ಟಿ.ಆರ್., ವಸಂತಕುಮಾರ. ಓ., ಸಚಿನ್. ಜಿ.ಹೆಚ್., ಸಂತೋಷ ಕುಮಾರ. ಬಿ.ಪಿ., ಅಶ್ವಿನಿ. ಬಿ.ಆರ್ ಮುಂತಾದವರಿಗೆ ಕೃತಜ್ಞತೆಗಳು. ಹಾಗೆಯೇ ಈ ಲೇಖನಗಳನ್ನು ವಿಶೇಷ ಸಂಚಿಕೆಗಳ ರೂಪದಲ್ಲಿ ಅಚ್ಚುಕಟ್ಟಾಗಿ ಮುದ್ರಿಸಿ ಹೊರತಂದು ಕನ್ನಡದ ವಿದ್ವತ್ ಲೋಕಕ್ಕೆ ಅರ್ಪಿಸಿದ ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ ಅಂಡ್ ಡೆವಲಪ್‌ಮೆಂಟ್ ಜರ್ನಲ್‌ನ ಪ್ರಕಾಶಕರಿಗೂ ಸಹ ಕೃತಜ್ಞತೆಗಳು.

**– ಸಂಪಾದಕ ಮಂಡಳಿ**

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 1-10
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಮಠದ ಹೋರಿ : ಸಮಕಾಲೀನ ಸಂವೇದನೆಗಳು

**ಡಾ. ವಿಜಯ ಕುಮಾರ್ ಎಚ್. ಜಿ**
ಸಹಾಯಕ ಪ್ರಾಧ್ಯಾಪಕರು, ಡಾ. ಎಂ. ಚಿದಾನಂದಮೂರ್ತಿ ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ.

***Abstract:***
*ಹನುಮಂತ ಹಾಲಗೇರಿ 21ನೇ ಶತಮಾನದ ಪ್ರಸಿದ್ಧ ದಲಿತ ಕಥೆಗಾರರಲ್ಲಿ ಒಬ್ಬರು. ಇವರ ಕಥೆಗಳು ಕಾಲ್ಪನಿಕವಾಗಿರದೆ ಅನುಭವ ಕಥೆಗಳಾಗಿವೆ. ಇವರ ಕೆಂಗುಲಾಬಿ ಕಾದಂಬರಿ ದೇವದಾಸಿ ಪದ್ಧತಿಯ ಕರಾಳ ಮುಖದ ವಾಸ್ತವ ಚಿತ್ರಣದೊಂದಿಗೆ ಹೆಚ್ಚು ಚರ್ಚೆಗೆ ಒಳಗಾಗಿದೆ. ಹಾಗೆಯೇ ಇವರ ಮಠದ ಹೋರಿ ಕಥಾಸಂಕಲನವೂ ಸಹ ಈ ಸಾಲಿಗೆ ಸೇರುತ್ತದೆ. ಹಾಲಗೇರಿ ಅವರು ಕಥೆಗಾರರಾಗಿ, ಪತ್ರಕರ್ತರಾಗಿ, ಸಾಮಾಜಿಕ ಹೋರಾಟಗಾರರಾಗಿಯೂ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಹಳ್ಳಿಯ ಬಡತನ, ಜಾತಿ–ಮತ, ಕೋಮುವಾದ, ಸ್ತ್ರೀ ದೌರ್ಜನ್ಯ ಮುಂತಾದವುಗಳ ಬಗ್ಗೆ ಒಟ್ಟು ಹತ್ತು ಕಥೆಗಳಿವೆ. ಉತ್ತರ ಕರ್ನಾಟಕದ ಭಾಷೆ ಮತ್ತು ಸತ್ವ ಈ ಕತೆಗಳ ವಿಶೇಷವಾಗಿದೆ.*

***Keywords:*** *ಕನ್ನಡ ಸಾಹಿತ್ಯ, ದಲಿತ ಸಾಹಿತ್ಯ, ಹನುಮಂತ ಹಾಲಗೇರಿ, ಮಠದ ಹೋರಿ, ಕೆಂಗುಲಾಬಿ.*

**ಪೀಠಿಕೆ**

ಹಾಲಗೇರಿಯವರ ಮಠದ ಹೋರಿ 10 ಕಥೆಗಳನ್ನು ಒಳಗೊಂಡ ಕಥಾಸಂಕಲನ. ಇಲ್ಲಿನ ಕಥೆಗಳೆಲ್ಲವೂ ಆಧುನೀಕರಣದಿಂದ ಗ್ರಾಮೀಣ ಬದುಕಿನಲ್ಲಾದ ಪಲ್ಲಟಗಳನ್ನು ಸೆರೆ ಹಿಡಿದಿವೆ. ಇದರ ಜೊತೆಗೆ ಬದಲಾದ ಈ ಹೊಸ ಶತಮಾನದಲ್ಲಿ ದಲಿತರ ಬದುಕು, ಹೋರಾಟದ ಹಾದಿ ಎತ್ತಕಡೆ ಸಾಗುತ್ತಿವೆ ಎಂಬುದನ್ನು ಸೂಕ್ಷ್ಮವಾಗಿ ಗುರುತಿಸಿದ್ದಾರೆ. ಹಾಲಗೇರಿಯವರ ಕಥೆಗಳಲ್ಲಿ ಬಾಗಲಕೋಟೆಯ ದಟ್ಟ ಪ್ರಾದೇಶಿಕತೆಯನ್ನು ಗುರುತಿಸಬಹುದು. ಅಲ್ಲಿನ ಭಾಷೆ, ಸಂಸ್ಕೃತಿ, ಜೀವನ ವಿಧಾನ, ಉಡುಗೆ–ತೊಡುಗೆ, ಆಚಾರ–ವಿಚಾರ, ನಂಬಿಕೆ ಮುಂತಾದ ಹಲವು ವಿಷಯಗಳು ಇವರ ಕಥೆಗೆ ಜೀವತುಂಬಿ ಪ್ರಾಣ ಪ್ರತಿಷ್ಠಾಪಿಸಿವೆ. ಇವುಗಳ ಜೊತೆಗೆ ವರ್ತಮಾನದ ಸಮಸ್ಯೆಗಳನ್ನ ತಮ್ಮ ಕಥೆಯ ವಸ್ತುಗಳಾಗಿ ಬಳಸಿಕೊಂಡಿರುವುದರಿಂದ ಇವರ ಕಥೆಗಳು ಹೊಸ ಶತಮಾನದ ಹೊಸ ಸಂವೇದನೆಗಳನ್ನು ಸಮರ್ಥವಾಗಿ ಧ್ವನಿಸುತ್ತವೆ. ಇವರ ಕಥೆಗಳಲ್ಲಿ ಬರುವ ಸನ್ನಿವೇಶಗಳು ದಿನನಿತ್ಯ ನಮ್ಮ ಕಣ್ಣ ಮುಂದೆ ನಡೆಯುವಂತಹವುಗಳು. ಕಥೆಗಳಲ್ಲಿ ಬರುವ ಪಾತ್ರಗಳೂ ಅಷ್ಟೇ, ನಮ್ಮ ದೈನಂದಿನ ಆಪ್ತೇಸ್ಟರೇ ಆಗಿರುತ್ತಾರೆ.

ಹಾಲಗೇರಿಯವರ ಬಹುತೇಕ ಕಥೆಗಳು ಗ್ರಾಮೀಣ ಬದುಕಿನಲ್ಲಾಗುತ್ತಿರುವ ಪಲ್ಲಟಗಳನ್ನು ಕುರಿತು ಮಾತನಾಡುತ್ತವೆ. ಈ ಪಲ್ಲಟಗಳಿಗೆ ಕಾರಣಗಳನ್ನು ಗುರುತಿಸುತ್ತವೆ. ಆದರೆ ಪ್ರಸ್ತುತ ವರ್ತಮಾನದಲ್ಲಿ ಈ ಪಲ್ಲಟಗಳನ್ನು ಎದುರಿಸಲಾಗದೆ,

***Please cite this article as:*** ವಿಜಯ ಕುಮಾರ್ ಎಚ್.ಜಿ. (2024). ಮಠದ ಹೋರಿ: ಸಮಕಾಲೀನ ಸಂವೇದನೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವಲಪ್‌ಮೆಂಟ್,* 3(3), 1–10

ಪ್ರತಿಭಟಿಸಲಾಗದೆ, ಅವುಗಳೊಂದಿಗೆ ಹೊಂದಾಣಿಕೆಯ ರಾಜಿ ಮಾಡಿಕೊಂಡು, ಬದುಕು ಸಾಗಿಸುವ ಗ್ರಾಮೀಣರ ಚಿತ್ರಣಗಳು ಕಥೆಯ ಅಂತ್ಯದಲ್ಲಿ ಕಾಣಸಿಗುತ್ತವೆ. ಆಧುನಿಕತೆ ಈ ಶತಮಾನದ ಸೌಹಾರ್ದಯುತ, ಸಾಮರಸ್ಯದ, ಸಹಬಾಳ್ವೆಯನ್ನು ಕಿತ್ತುಕೊಂಡು, ಆತಂಕ ತಲ್ಲಣಗಳ ನಡುವೆ ಬದುಕು ಸವೆಸುವಂತಹ ಸಂಧಿಗ್ಧತೆಗಳನ್ನು ನಿರ್ಮಿಸಿರುವುದನ್ನು ಹಾಲಗೇರಿಯವರ ಕಥೆಗಳು ಚಿತ್ರಿಸುತ್ತವೆ. ಇವರ ಕಥೆಗಳನ್ನು ಮುಖ್ಯವಾಗಿ ನಾಲ್ಕು ನೆಲೆಯಲ್ಲಿ ವಿಶ್ಲೇಷಿಸಬಹುದು. ಜಾತಿಯ ನೆಲೆ, ಅಭಿವೃದ್ಧಿ ನೆಲೆ, ಧಾರ್ಮಿಕ ನೆಲೆ, ಸಾಂಸ್ಕೃತಿಕ ನೆಲೆ ಎಂಬುದಾಗಿ ವಿಭಾಗಿಸಿಕೊಳ್ಳಬಹುದು.

ಹಾಲಗೇರಿ ಅವರು ಉತ್ತರ ಕರ್ನಾಟಕದ ತೀರಾ ಹಿಂದುಳಿದ ಜಿಲ್ಲೆಯ ದಮನಿತ ಸಮುದಾಯದಿಂದ ಬಂದವರು. ಹಾಗಾಗಿ ಅವರ ಕಥೆಗಳು ಸಮಕಾಲೀನ ದಲಿತ ಸಮುದಾಯದ ಸಂವೇದನೆಗಳನ್ನು ಅತ್ಯಂತ ಸಮರ್ಥವಾಗಿ ನಿರೂಪಿಸಲು ಸಾಧ್ಯವಾಗಿದೆ. ಕಳೆದ ಶತಮಾನದ 70–80–90ರ ದಶಕದ ದಲಿತ ಸಮುದಾಯದ ಶೋಷಣೆ, ಪ್ರತಿಭಟನೆ, ಹೋರಾಟಗಳ ಸ್ವರೂಪವೇ ಬೇರೆ. ಇಂದಿನ ಹೊಸ ಶತಮಾನದ ದಲಿತರ ಸಂವೇದನೆಗಳೇ ಬೇರೆ. ಕಳೆದ ಶತಮಾನದಲ್ಲಿ ಮೊದಲ ತಲೆಮಾರಿನ ದಲಿತರು ಶಿಕ್ಷಣ ಕ್ಷೇತ್ರಕ್ಕೆ ಕಾಲಿಟ್ಟು ಶೋಷಣೆಯ ವಿರುದ್ಧ ಪ್ರತಿಭಟಿಸಿದವರು. ಕಾನೂನಿನ ಅಡಿಯಲ್ಲಿ ತಮಗೆ ರಕ್ಷಣೆ ಇದೆ ಎಂದು ಜಾಗೃತರಾಗಿ ಅನಕ್ಷರಸ್ಥ ಸಮುದಾಯಗಳಿಗೂ ಈ ಜಾಗೃತ ಪ್ರಜ್ಞೆಯನ್ನು ವಿಸ್ತರಿಸಿದವರು. 21ನೇ ಶತಮಾನದಲ್ಲಿ ಬಹುತೇಕ ದಲಿತರು ಅಕ್ಷರಸ್ಥರಾಗಿದ್ದು, ತಮ್ಮ ರಕ್ಷಣೆಯ ಕಾನೂನುಗಳನ್ನು ತಿಳಿದವರು. ಕಳೆದ ಶತಮಾನಕ್ಕೆ ಹೋಲಿಸಿದರೆ ಈ ಶತಮಾನದಲ್ಲಿ ಜಾತಿಯ ದೌರ್ಜನ್ಯಗಳು ಸ್ವಲ್ಪ ಮಟ್ಟಿಗೆ ಕಡಿಮೆಯಾಗಿವೆ ಎಂದು ಭಾವಿಸಬಹುದು. ಆದರೆ ದಲಿತರ ಮೇಲಿನ ಶೋಷಣೆಗಳು ಸಂಪೂರ್ಣವಾಗಿ ನಿಂತು ಹೋಗಿರುವುದಿಲ್ಲ. ಇಂದಿನ ದಲಿತ ಸಮುದಾಯಗಳು ಶೋಷಣೆಗಳ ವಿರುದ್ಧ ಕಾನೂನಿನ ಮೊರೆ ಹೋಗಿ ರಕ್ಷಣೆ ಪಡೆಯುತ್ತಿದ್ದಾರೆ. ಶೋಷಕ ವರ್ಗಗಳು ಇಂದು ನ್ಯಾಯಾಂಗ ವ್ಯವಸ್ಥೆಗೆ ಹೆದರಿಕೊಂಡು ಕೂತಿವೆ. ದಲಿತರು ಸಂಘಟಿತರಾಗಿದ್ದು ಶೋಷಣೆಯ ವಿರುದ್ಧ ಒಗ್ಗಟ್ಟಾಗಿ ಸಂಘ–ಸಂಸ್ಥೆಗಳ ಮೂಲಕ, ಪ್ರತಿಭಟನೆ ಹೋರಾಟಗಳ ಮೂಲಕ, ಶೋಷಕ ವರ್ಗಗಳ ದಬ್ಬಾಳಿಕೆಯನ್ನು ಹತ್ತಿಕ್ಕಿವೆ.

'ಮೂಕದ್ಯಾವ್ರು', 'ಕೇರಿಯ ಗಾಯಕ್ಕೆ ಕೆಂಡದ ಮುಲಾಮು', 'ಡೈರಿ ಹಾಲಿಗೆ ಹುಳಿ ಬಿತ್ತು', 'ಸಂವಿಧಾನ ಮತ್ತು ರಣಹದ್ದು' ಕಥೆಗಳು ಜಾತಿ ವ್ಯವಸ್ಥೆ ಕೇಂದ್ರವಾಗಿರುವಂತಹ ಕಥೆಗಳು. ನಗರ ಜೀವನದಲ್ಲಿ ಇಂದು ಜಾತಿ ವ್ಯವಸ್ಥೆ ಅಷ್ಟೊಂದು ಮುಖ್ಯ ಸಮಸ್ಯೆಯಾಗಿ ಕಾಣಿಸಿಕೊಳ್ಳುವುದಿಲ್ಲ. ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಇದರ ಕರಿನೆರಳಿನಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಿಲ್ಲ. ಎಷ್ಟೇ ವಿದ್ಯಾವಂತರಾದರು ವೈಚಾರಿಕತೆ, ವೈಜ್ಞಾನಿಕತೆ, ಆಧುನಿಕತೆಗಳಿಗೆ ತಮ್ಮನ್ನು ತಾವು ಎಷ್ಟೇ ತೊಡಗಿಸಿಕೊಂಡರೂ ಜಾತಿಯ ಸಂಕೋಲೆಗಳಿಂದ ಬಿಡುಗಡೆ ದೊರೆತಿಲ್ಲ. ಗ್ರಾಮೀಣ ಭಾಗದಲ್ಲಿ ಈಗಲೂ ಇದು ಬೂದಿ ಮುಚ್ಚಿದ ಕೆಂಡದಂತೆ ಗೌಣವಾಗಿರುವುದನ್ನು ಹಾಲಗೇರಿ ಅವರ ಕಥೆಗಳು ವ್ಯಕ್ತಪಡಿಸುತ್ತವೆ.

'ಮೂಕದ್ಯಾವ್ರು' ಕಥೆಯಲ್ಲಿ ದಲಿತ ಸಂಗೀತಗಾರನೊಬ್ಬನ ದುರಂತ ಬದುಕಿನ ಚಿತ್ರಣವಿದೆ. ಪ್ರತಿಭೆ ಯಾರ ಸ್ವತ್ತಲ್ಲ, ಕಲಿತವರ ಸ್ವತ್ತು. ಪ್ರತಿಭೆಗೆ ಯಾವ ಜಾತಿ ಕುಲಗಳ ಹಂಗಿಲ್ಲ. ದಲಿತರ ಶೇಷ್ಯಾ ಬಾಲ್ಯದಿಂದ ತತ್ವಪದಗಳನ್ನು ಕೇಳುತ್ತಾ ಹಾಡುತ್ತಾ ಬೆಳೆದವನು. ಪರ ಊರಿನಲ್ಲಿ ಮೇಲ್ವರ್ಗದ ಭಜನೆ ಮೇಳಗಳು ನಡೆದಾಗ ಸ್ಟೇಜ್ ಹತ್ತಿ ಹಾಡಿ ಎಲ್ಲರಿಂದಲೂ ಪ್ರಶಂಸೆ ಪಡೆದು ಗ್ರಾಮದ ಗೌರವಕ್ಕೆ ಕಾರಣನಾದನು. ಆದರೆ ಸ್ವಂತ ಊರಿನಲ್ಲಿ ಶೇಷ್ಯಾನಿಗೆ ಆ ಗೌರವ ಸ್ಥಾನ ಸಿಗುವುದಿಲ್ಲ. ಏಕೆಂದರೆ ಶೇಷ್ಯಾ ದಲಿತನಾಗಿದ್ದ ಕಾರಣದಿಂದ ಅವನ ಪ್ರತಿಭೆಗೆ ತಕ್ಕ ಪುರಸ್ಕಾರಗಳು ದೊರೆಯುವುದಿಲ್ಲ. ಇದನ್ನು

ಪ್ರಶ್ನಿಸಿದ್ದಕ್ಕಾಗಿ ಊರಿನ ಮೇಲ್ವರ್ಗದವರಿಗೂ, ಪ್ರಗತಿಪರ ದಲಿತ ಯುವಕರ ನಡುವೆ ಮನಸ್ತಾಪ ಗಲಾಟೆಗಳಾಗಿ ಶೇಷ್ಯಾ ಬದುಕಿ ಉಳಿದಿದ್ದು ಹೆಚ್ಚು ಅನ್ನುವ ಹಾಗಾಗುತ್ತದೆ. ಇಂದು ನಗರ ಭಾಗದಲ್ಲಿ ಪ್ರತಿಭಾವಂತರಿಗೆ ಜಾತಿ ಸಮಸ್ಯೆಯಾಗಿ ಕಾಡುವುದಿಲ್ಲ. ಆದರೆ ಗ್ರಾಮೀಣ ಭಾಗದ ಸಂಪ್ರದಾಯಬದ್ಧ ಮನಸ್ಥಿತಿಗಳು ಇನ್ನೂ ಬದಲಾಗಿಲ್ಲ. ಅಲ್ಲಿ ಇನ್ನೂ ಜಾತಿ ವ್ಯವಸ್ಥೆ ಆಚರಣೆಯಲ್ಲಿದೆ. ದಲಿತರು ಯಾವುದೇ ಕ್ಷೇತ್ರದಲ್ಲಿ ಪ್ರತಿಭಾವಂತರೆನಿಸಿಕೊಂಡರೂ ಸಹ ಜಾತಿಯ ಕಾರಣಕ್ಕೆ ಅವರು ನಿರ್ಲಕ್ಷಕ್ಕೆ ಒಳಗಾಗುತ್ತಾರೆ. ಇದು ಎಲ್ಲಾ ಗ್ರಾಮಗಳಲ್ಲಿ ಕಾಣಬರುವ ಸಾಮಾನ್ಯ ದೃಶ್ಯ. ಇದನ್ನು ಹಾಲಗೇರಿ ಅವರು ತಮ್ಮ ಕಥೆಯಲ್ಲಿ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಈ ಕಥೆಯ ಎರಡನೇ ಭಾಗದಲ್ಲಿ ಇದಕ್ಕೆ ಸಾಂಸ್ಕೃತಿಕ ಪ್ರತಿರೋಧವನ್ನು ಒಡ್ಡಿರುವುದನ್ನು ಗಮನಿಸಬಹುದು.

ದಲಿತ ಕೇರಿಯ ಜನ ಮೇಲ್ವರ್ಗದ ಬಸವಣ್ಣ ದೇವರಿಗೆ ಪ್ರತಿಯಾಗಿ ದಲಿತರ ಶೇಷ್ಯಾನ ನೇತೃತ್ವದಲ್ಲಿ ದುರ್ಗವ್ವ ಮರುಗವ್ವ ದೇವತೆಯರ ಆರಾಧನೆ ಪ್ರಾರಂಭಿಸುವರು. ಮೇಲ್ವರ್ಗದ ಭಜನಾ ಮೇಳಕ್ಕೆ ಪ್ರತಿಯಾಗಿ ದಲಿತ ಕೇರಿಯವರು ಭಜನಾ ಮೇಳವನ್ನು ಕಟ್ಟುವರು. ಮೇಲ್ವರ್ಗದ ಬಸವನ ದೇವರ ಎತ್ತಿಗೆ ಪ್ರತಿಯಾಗಿ ದಲಿತರು ಆಕಳ ಮಣಕವನ್ನು ದೇವರ ಎತ್ತಾಗಿ ಬಳಸಿಕೊಳ್ಳುವುದು ಪರ್ಯಾಯ ಸಂಸ್ಕೃತಿಯ ಪ್ರತೀಕವಾಗಿದೆ. 21ನೇ ಶತಮಾನದಲ್ಲಿ ಮೇಲ್ವರ್ಗಗಳು ಸಾಂಸ್ಕೃತಿಕ, ಧಾರ್ಮಿಕ ಕ್ಷೇತ್ರಗಳಿಂದ ದಲಿತ ಸಮುದಾಯವನ್ನು ಹೊರಗಿಟ್ಟರೆ, ಆ ಮೇಲ್ವರ್ಗಗಳ ಸಂಸ್ಕೃತಿಗೆ ಪರ್ಯಾಯವಾಗಿ ದಲಿತರು ತಮ್ಮ ಸಂಸ್ಕೃತಿಯನ್ನು ರೂಪಿಸಿಕೊಳ್ಳುವುದನ್ನು ಕಥೆಯಲ್ಲಿ ವ್ಯಕ್ತಪಡಿಸಲಾಗಿದೆ. ಮನುಷ್ಯನಿಗೆ ಜಾತಿ ಧರ್ಮಗಳ ಬಂಧನವಿದೆ. ಪ್ರಾಣಿಗಳಿಗೆ ಇದರ ಯಾವ ಗೊಡವೆಯೂ ಇರುವುದಿಲ್ಲ. ಕಥೆಯ ಕೊನೆಯಲ್ಲಿ ದಲಿತ ಸಮುದಾಯದ ದೈವವಾದ ಆಕಳ ಮಣಕದೊಂದಿಗೆ ಮೇಲ್ವರ್ಗದವರ ದೈವವಾದ ಬಸವ ಓಡಿಹೋಗಿ ಪ್ರಣಯದಲ್ಲಿ ತೊಡಗುವುದು. ಇವುಗಳ ಪ್ರಣಯ ಜಾತಿಯ ಸಂಕೋಲೆಯನ್ನು ಮೀರುವ ಕ್ರಿಯೆಯಾಗಿದೆ. ದಲಿತ ಸಮುದಾಯ ಇಂದು ಶಿಕ್ಷಣ ಪಡೆದು ಜಾಗೃತರಾಗಿರುವುದಷ್ಟೇ ಅಲ್ಲ, ತಮ್ಮನ್ನು ಯಾವ ಸಂಸ್ಕೃತಿಯ ಅಂಶಗಳು ಸಮಾಜದ ಇತರ ವರ್ಗಗಳಿಗಿಂತ ಕೀಳು ಎಂದು ವಿಭಾಗಿಸಿವೆಯೋ, ಅಂತಹ ಕ್ಷೇತ್ರಗಳಲ್ಲಿ ತಾವು ಕೂಡ ಶ್ರೇಷ್ಠರೇ ಎಂದು ಸಾಬೀತುಪಡಿಸಿಕೊಳ್ಳಲು ಈ ರೀತಿಯ ಪರ್ಯಾಯಗಳನ್ನು ಸೃಷ್ಟಿಸಿಕೊಳ್ಳುತ್ತಿದ್ದಾರೆ.

'ಕೇರಿಯ ಗಾಯಕ್ಕೆ ಕೆಂಡದ ಮುಲಾಮು' ಎಂಬ ಕತೆ ದಲಿತರು, ದಲಿತ ನಾಯಕರಿಂದಲೇ ಹೇಗೆ ವಂಚಿತರಾಗುತ್ತಿದ್ದಾರೆ ಎಂಬ ವಾಸ್ತವಂಶವನ್ನು ಕಥಾವಸ್ತುವಾಗಿ ಹೊಂದಿದೆ. ಇಂದು ಕೆಲವು ದಲಿತ ಮುಖಂಡರುಗಳು ತಮ್ಮ ಸ್ವಾರ್ಥಕ್ಕೆ, ದುರಾಸೆಗೆಗಳಿಗೆ ಇಡೀ ಸಮುದಾಯವನ್ನು ಬಲಿ ಕೊಡುತ್ತಿರುವ ಹಲವಾರು ಪ್ರಕರಣಗಳನ್ನು ಗಮನಿಸಬಹುದು. ಕಳೆದ ಶತಮಾನದಲ್ಲಿ ದಲಿತ ಮುಖಂಡರುಗಳು ಮೊದಲ ತಲೆಮಾರಿನ ಅಕ್ಷರಸ್ಥರು ಹಾಗೂ ಹೋರಾಟಗಾರರಾಗಿದ್ದರು. ಅವರಿಗೆ ತಮ್ಮ ಶೋಷಿತ ಸಮುದಾಯಗಳ ಬಗ್ಗೆ ಅಪಾರ ಕಾಳಜಿ, ಕಳಕಳಿ ಅನುಕಂಪಗಳಿದ್ದವು. ಹಾಗಾಗಿ ಸಮುದಾಯದ ಹಿತಕ್ಕೆ ತಮ್ಮನ್ನು ತಾವು ಅರ್ಪಿಸಿಕೊಳ್ಳುತ್ತಿದ್ದರು. 21ನೇ ಶತಮಾನದ ಕೆಲವು ದಲಿತ ಮುಖಂಡರು ಈ ಬಗೆಯ ಯಾವ ಕಾಳಜಿ, ಕಳಕಳಿಗಳೂ ಉಳಿದಿಲ್ಲ. ಅವರಲ್ಲಿನ ಮಾನವೀಯತೆಯು ಸ್ವಾರ್ಥವಾಗಿ ಬದಲಾಗಿದೆ. ಹಾಗಾಗಿ ತಮ್ಮವರನ್ನೇ ಬಲಿಕೊಟ್ಟು ತಾವು ಮೇಲೆ ಬರುವ ಸಂಸ್ಕೃತಿಯನ್ನು ರೂಢಿಸಿಕೊಳ್ಳುತ್ತಿದ್ದಾರೆ. ಈ ಕಥೆಯಲ್ಲಿ ಬರುವ ಚನ್ನಪ್ಪನೆಂಬ ದಲಿತ ಮುಖಂಡ, ಪಟ್ಟಣದಲ್ಲಿ ದಲಿತ ಸಂಘಟನೆ ಸ್ಥಾಪಿಸಿಕೊಂಡು ಹಲವು ಸಾಮಾಜಿಕ ಹೋರಾಟಗಳಲ್ಲಿ ಗುರುತಿಸಿಕೊಂಡವನು. ಒಮ್ಮೆ ಊರಿಗೆ ಬಂದಾಗ ಊರಿನ ಒಂದು ಕಾರ್ಯಕ್ರಮದಲ್ಲಿ ಸ್ಟೇಜ್ ಹತ್ತಿ, ಮೇಲ್ವರ್ಗದಿಂದ

ಹಲ್ಲೆಗೆ ಒಳಗಾಗುವನು. ಚೆನ್ನಪ್ಪ ಊರಿನಲ್ಲಿ ಕೆಲವು ವಿದ್ಯಾವಂತ ಯುವಕರ ತಂಡ ಕಟ್ಟಿಕೊಂಡು ಮೇಲ್ವರ್ಗದ ವಿರುದ್ಧ ಹೋರಾಟ ಮಾಡಲು ಪ್ರೇರೇಪಿಸುವನು. ಮೇಲ್ವರ್ಗದವರ ಮೇಲೆ ಅಟ್ರಾಸಿಟಿ ಕೇಸ್ ದಾಖಲಿಸಲು ಮುಂದಾಗುವನು. ಈ ಹಂತದಲ್ಲಿ ಮೇಲ್ವರ್ಗದ ಯುವಕರು ರಾತ್ರೋರಾತ್ರಿ ದಲಿತರ ಮೇಲೆ ಹಲ್ಲೆ ನಡೆಸುವರು. ಹಲ್ಲೆಗೆ ಒಳಗಾದ ದಲಿತರು ತೀವ್ರತರ ಗಾಯಗಳಿಂದ ಆಸ್ಪತ್ರೆಗೆ ದಾಖಲಾಗಬೇಕಾಗುತ್ತದೆ. ಚೆನ್ನಪ್ಪ ತನ್ನ ಶಕ್ತಿ ಬಳಸಿ ಪತ್ರಿಕೆಗಳಲ್ಲಿ ಇದನ್ನು ದೊಡ್ಡ ಸುದ್ದಿಯಾಗಿ ಮಾಡಿಸಿ, ನೊಂದ ದಲಿತರಿಗೆ ನ್ಯಾಯ ಕೊಡಿಸಲು ಹೋರಾಡುವನು. ಕೊನೆಗೆ ಸರ್ಕಾರದ ಗಮನ ಸೆಳೆದು ಹಲ್ಲೆಗೊಳಗಾದ ದಲಿತರಿಗೆ ಪರಿಹಾರ ಕೊಡಿಸುವ ನೆಪದಲ್ಲಿ ತನ್ನ ಶ್ರಮನ್ನೆ ಮುಂದೆ ಮಾಡಿ ಪರಿಹಾರದ ಬಹುಪಾಲು ಹಣ ತನ್ನಲ್ಲೇ ಇಟ್ಟುಕೊಂಡು ಚೂರುಪಾರು ಹಣವನ್ನು ನೊಂದವರಿಗೆ ಪರಿಹಾರವಾಗಿ ನೀಡುವನು. ಇಲ್ಲಿ ಹಲ್ಲೆಗೊಳಗಾದ ದಲಿತರು ಪರಿಹಾರದ ಹಣವೂ ಇಲ್ಲದೆ, ಗ್ರಾಮಗಳಲ್ಲಿ ಕೂಲಿ ಕಂಬಳಿ ಸಿಗದೇ ಮತ್ತಷ್ಟು ಜರ್ಜರಿತರಾಗಿರುವುದನ್ನು ಕಥೆಯು ಧ್ವನಿಸುತ್ತದೆ. ಇದು ಇಂದಿನ ಹಲವು ಗ್ರಾಮಗಳಲ್ಲಿ ನಡೆಯುವ ಸಾಮಾನ್ಯ ಸಂಗತಿಯಾಗಿದೆ. ವಿದ್ಯಾವಂತ ದಲಿತ ಮುಖಂಡರು ನಗರಗಳಲ್ಲಿ ಸಂಘ–ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ಗ್ರಾಮೀಣ ಭಾಗದ ಶೋಷಿತ ದಲಿತ ಸಮುದಾಯಗಳನ್ನು ಈ ರೀತಿ ವಂಚಿಸುತ್ತಾ ಬರುತ್ತಿವೆ. ಈ ಬಗೆಯ ವಂಚಕ ಮುಖಂಡರಲ್ಲಿ ಯಾವ ಬಗೆಯ ಸೈದ್ಧಾಂತಿಕ ನಿಲುವುಗಳೂ ಇರುವುದಿಲ್ಲ ಎಂಬುದು ಈ ಕಥೆಯಲ್ಲಿ ನಿರೂಪಿತವಾಗಿದೆ.

'ಡೈರಿ ಹಾಲಿಗೆ ಹುಳಿ ಬಿತ್ತು' ಎಂಬ ಕಥೆಯೂ ಸಹ ಜಾತಿ ವ್ಯವಸ್ಥೆಯನ್ನೇ ಕೇಂದ್ರವಾಗಿ ಹೊಂದಿರುವ ಮತ್ತೊಂದು ಕಥೆ. ಗ್ರಾಮಕ್ಕೆ ಹಾಲಿನ ಡೈರಿ ಪಾಯಿಂಟ್ ಬಂದಾಗ ಮೇಲ್ವರ್ಗದ ಬಸವಣ್ಯಪ್ಪ ತನ್ನ ಮನೆಯಲ್ಲಿ ಡೈರಿ ಸ್ಥಾಪನೆಯಾಗುವಂತೆ ನೋಡಿಕೊಳ್ಳುತ್ತಾನೆ. ಇದರಿಂದ ಅಸಮಾಧಾನಗೊಂಡ ಕೆಳ ವರ್ಗದವರು ತಮ್ಮ ಕೇರಿಯಲ್ಲಿ ಡೈರಿ ಸ್ಥಾಪಿಸಲು ಪಟ್ಟು ಹಿಡಿಯುತ್ತಾರೆ. ಮೇಲ್ವರ್ಗದವರಿಗೆ ತಮಗಿಂತ ಕೆಳಸ್ಥರದ ಜನರ ಕೇರಿಗೆ ಹೋಗಿ ಹಾಲು ಹಾಕಲು ಅವರ ಕುಲ–ಮತ ಪ್ರತಿಷ್ಠೆಗಳು ಅಡ್ಡ ಬರುತ್ತವೆ. ಕೆಳವರ್ಗದ ಕೆಲ ವಿದ್ಯಾವಂತ ಪ್ರಗತಿಪರ ಯುವಕರಿಗೆ ಇದು ತಮ್ಮ ಸಮುದಾಯದ ಸ್ವಾಭಿಮಾನದ ಪ್ರಶ್ನೆಯಾಗಿ ಏರ್ಪಡುತ್ತದೆ. ಕೆಳಸ್ತರದ ಸಮುದಾಯದ ಯುವಕರಿಗೆ ತಾವು ಮತ್ತೆ ಮೇಲ್ವರ್ಗದ ಮನೆಗಳ ಮುಂದೆ ಸಾಲು ನಿಲ್ಲುವುದು ಇಷ್ಟವಿರುವುದಿಲ್ಲ. ಆದ್ದರಿಂದ ಡೈರಿ ಕಂಪನಿಯವರ ಲಾರಿ ತಡೆದು ಪ್ರತಿಭಟನೆ ಮಾಡುವರು. ಊರ ಗೌಡರ ಕುತಂತ್ರದಿಂದ ಪೊಲೀಸ್ ಸ್ಟೇಷನ್ ಮೆಟ್ಟಿಲು ಹತ್ತಬೇಕಾಗುತ್ತದೆ. ಇದರಿಂದ ಇನ್ನಷ್ಟು ಕುದಿಯ ತೊಡಗಿದ ಕೆಳವರ್ಗದ ಯುವಕರು ಸೇಡು ತೀರಿಸಿಕೊಳ್ಳಲು ಸಮಯ ಕಾಯುವರು. ಕೆಲ ಸಮಯದ ಬಳಿಕ ಡೈರಿ ನಡೆಸುತ್ತಿದ್ದ ಬಸವಣ್ಯಪ್ಪನ ಮಗಳು ಅಕ್ಕಮ್ಮಳನ್ನು ತಳವಾರ ಗೋಪಿ ಪ್ರೀತಿಸಿ ಓಡಿಸಿಕೊಂಡು ಹೋಗುವನು. ಇದರಿಂದ ಗ್ರಾಮದಲ್ಲಿ ಕೋಮು ಸೌಹಾರ್ದತೆ ಹದಗೆಟ್ಟು ಬಿಗುವಿನ ವಾತಾವರಣ ಏರ್ಪಟ್ಟು ಡೈರಿ ಮುಚ್ಚಿ ಹೋಗುವುದು.

ಈ ಕಥೆಯು ವಾಸ್ತವವಾಗಿ ಜಾತಿ ಸಂಘರ್ಷವನ್ನು ಕೇಂದ್ರವಾಗಿ ಹೊಂದಿದ್ದರು, ಬಸವಣ್ಯಪ್ಪನಂತಹ ಮುಂದುವರೆದ ಸಮುದಾಯದವರು, ಗ್ರಾಮಗಳಿಗೆ ಬರುವ ಯಾವುದೇ ಸರ್ಕಾರಿ ಸೌಲಭ್ಯಗಳು ಕೆಳಸ್ಥರದವರಿಗೆ ದಕ್ಕದಂತೆ ಹುನ್ನಾರ ಮಾಡಿ ತಮ್ಮಲ್ಲೇ ಉಳಿಸಿಕೊಳ್ಳುವುದನ್ನು ಸೂಕ್ಷ್ಮವಾಗಿ ವ್ಯಕ್ತಪಡಿಸುತ್ತದೆ. ಸಾಮಾಜಿಕವಾಗಿ, ರಾಜಕೀಯವಾಗಿ ಪ್ರಬಲವಾಗಿರುವ ಸಮುದಾಯಗಳು ಕೆಳವರ್ಗದ ಪ್ರತಿಭಟನೆಯನ್ನು ಸುಲಭವಾಗಿ ಹತ್ತಿಕುತ್ತವೆ. ಇಂದಿನ ಕೆಳಸ್ಥರದವರೂ ಸಹ ತಮ್ಮ ಸ್ವಾಭಿಮಾನವನ್ನು ಪ್ರದರ್ಶಿಸುತ್ತವೆ. ಮೇಲ್ವರ್ಗದವರ ವಂಚನೆಗಳಿಗೆ ಯಾವುದಾದರೂ

ಒಂದು ಬಗೆಯಲ್ಲಿ ಸೇಡು ತೀರಿಸಿಕೊಳ್ಳುತ್ತಲೇ ಇರುತ್ತಾರೆ. ಈ ಮೂಲಕ ಮೇಲ್ವರ್ಗದವರ ಪ್ರತಿಷ್ಠೆಗೆ ಪೆಟ್ಟು ಕೊಡುತ್ತಲೇ ಇರುತ್ತಾರೆ ಎಂಬುದನ್ನು ಕಥೆಯು ಚಿತ್ರಿಸಿದೆ. ಶೀರ್ಷಿಕೆಯೇ ಹೇಳುವಂತೆ ಡೈರಿ ಹಾಲಿಗೆ ಹುಳಿ ಬಿದ್ದರೆ ಹಾಲು ಹಾಳಾಗುವಂತೆ, ಡೈರಿ ಸ್ಥಾಪನೆಗೊಂಡು ಎರಡು ಸಮುದಾಯಗಳ ನಡುವೆ ಹುಳಿಯಾಗಿ ಗ್ರಾಮದ ಸ್ವಾಸ್ಥ್ಯವನ್ನು ಹಾಳು ಮಾಡಿದೆ. ಅಂತರ್ಜಾತಿ ಪ್ರೇಮ ವಿವಾಹಗಳು ಇಂದು ನಗರದಲ್ಲಷ್ಟೇ ಅಲ್ಲದೆ ಗ್ರಾಮೀಣ ಪ್ರದೇಶದಲ್ಲಿ ಸರ್ವೇಸಾಮಾನ್ಯವಾಗಿದೆ.

'ಸಂವಿಧಾನ ಮತ್ತು ರಣಹದ್ದು' ಎಂಬ ಕಥೆಯು ರಾಜಕೀಯದ ಚದುರಂಗದಾಟಕ್ಕೆ ಸಿಕ್ಕ ದಲಿತ ಹುಡುಗನೊಬ್ಬನ ಕಥೆಯನ್ನು ಸಾದರಪಡಿಸಿದೆ. ರಾಜಕೀಯ ನಾಯಕರು ತಮ್ಮ ಅವಶ್ಯಕತೆಗಳಿಗೆ ಅನುಗುಣವಾಗಿ ಸ್ವಾರ್ಥ ಸಾಧನೆಗಾಗಿ ದಲಿತರನ್ನು ಬಳಸಿಕೊಂಡು ಅನಂತರ ಅವರನ್ನು ನಿರ್ಲಕ್ಷಿಸುವುದು ಹೊಸದೇನಲ್ಲ. ಈ ಬಗೆಯ ಹಲವು ಘಟನೆಗಳು ದಿನನಿತ್ಯ ನಡೆಯುತ್ತಲೇ ಇರುತ್ತವೆ. ಈ ಕಥೆಯಲ್ಲಿ ಬರುವ ಭೀಮ್ಯ ಎಂಬ ಹುಡುಗ ಒಳ್ಳೆಯ ಹಾಡುಗಾರ ಇವನ ಪ್ರತಿಭೆಯನ್ನೇ ತನ್ನ ಚುನಾವಣಾ ಲಾಭಕ್ಕಾಗಿ ಬಾಲಪ್ಪಗೌಡ ಬಳಸಿಕೊಳ್ಳುತ್ತಾನೆ. ಭೀಮ್ಯಾನ ಅಜ್ಜಿಗೆ ಹಣದ ಆಸೆ ತೋರಿಸಿ ಅವನಿಗೆ ಒಳ್ಳೆಯ ಎರಡು ಜೊತೆ ಬಟ್ಟೆ ಕೊಡಿಸಿ ತನ್ನ ಚುನಾವಣಾ ಪ್ರಚಾರಕ್ಕೆ ಬಳಸಿಕೊಳ್ಳುತ್ತಾನೆ. ಒಮ್ಮೆ ಆಕಸ್ಮಿಕವಾಗಿ ಟ್ರ್ಯಾಕ್ಟರ್‌ನ ಗಾಲಿಗೆ ಬಿದ್ದು ಕಾಲು ಮುರಿದು ಹೋಗುತ್ತದೆ. ಬಾಲಪ್ಪ ಗೌಡನ ಕಡೆಯವರು ಆರಂಭದಲ್ಲಿ ಆಸ್ಪತ್ರೆಗೆ ಸೇರಿಸಿ ಅನಂತರ ಆ ಕಡೆ ತಲೆ ಸಹ ಹಾಕುವುದಿಲ್ಲ. ಕೊನೆಗೆ ಅಜ್ಜಿಯೇ ಅಲ್ಲಿ ಇಲ್ಲಿ ಸಾಲ ಮಾಡಿ ಮೊಮ್ಮಗನನ್ನು ಮನೆಗೆ ಕರೆದುಕೊಂಡು ಬರುತ್ತಾಳೆ. ಈ ವಿಷಯ ತಿಳಿದ ವಿರೋಧ ಪಕ್ಷಗಳೂ ಸಹ ಈ ದಲಿತ ಹುಡುಗನಿಗೆ ಆದ ಅನ್ಯಾಯದ ವಿರುದ್ಧ ನ್ಯಾಯ ಕೊಡಿಸುವ ಭರವಸೆ ನೀಡಿ, ಕೊನೆಗೆ ಅವರು ತಮ್ಮ ಎದುರಾಳಿಯನ್ನು ಚುನಾವಣೆಯಲ್ಲಿ ಸದೆಬಡೆಯುವ ಉದ್ದೇಶದಿಂದ ಆ ಹುಡುಗನನ್ನು ತಮ್ಮ ಸ್ವಾರ್ಥ ರಾಜಕೀಯಕ್ಕೆ ಬಳಸಿಕೊಳ್ಳುವರು. ಯಾರಿಂದಲೂ ತನಗಾದ ಅನ್ಯಾಯಕ್ಕೆ ನ್ಯಾಯ ಸಿಗದೇ ಹಾಡುಗಾರ ಭೀಮ್ಯಾ, ಕುಂಟ ಭೀಮ್ಯಾ ಆಗಿ ಹೊಟ್ಟೆಪಾಡಿಗೆ ಸಣ್ಣದೊಂದು ಗೂಡಂಗಡಿಯನ್ನು ನಡೆಸುವನು. ಅಜ್ಜಿಗೆ ತನ್ನ ಮೊಮ್ಮಗ ಓದಿ ಸೈನ್ಯ ಸೇರಿ ಕೈತುಂಬ ಸಂಬಳ ತರುವ ಅಧಿಕಾರಿಯಾಗುತ್ತಾನೆ ಎಂಬ ಆಸೆ ಕನಸಾಗಿಯೇ ಉಳಿಯುತ್ತದೆ. ಭೀಮ್ಯಾನ ಸ್ಥಾನದಲ್ಲಿ ಮೇಲ್ವರ್ಗದ ಹುಡುಗನಿದ್ದಿದ್ದರೆ ಈ ಕಥೆಯ ಸ್ವರೂಪವೇ ಬದಲಾಗುತ್ತಿತ್ತು. ಭೀಮ್ಯ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಯಾವ ಬಲವೂ ಇಲ್ಲದವನು. ಆದ್ದರಿಂದ ಇವನಿಗೆ ಆದ ಶೋಷಣೆಗಳಿಗೆ ಯಾವುದೇ ಪರಿಹಾರ ದೊರೆಯುವುದಿಲ್ಲ.

ಚುನಾವಣೆಯ ಸಂದರ್ಭದಲ್ಲಿ ರಾಜಕೀಯ ನಾಯಕರು ಸುಳ್ಳು ಭರವಸೆ ಆಶ್ವಾಸನೆಗಳಿಂದ ಜನರನ್ನು ವಂಚಿಸುವುದು ಸಾಮಾನ್ಯವಾಗಿದೆ. ಅದರ ಜೊತೆಗೆ ಏನೂ ಅರಿಯದ ಇಂಥ ಮುಗ್ಧ, ಬಡ, ದಲಿತರನ್ನು ವಂಚಿಸುವುದು ಇನ್ನೂ ದುರಂತ. ದಲಿತರು ಸಣ್ಣ ಸಣ್ಣ ಆಸೆ ಆಮಿಷಗಳಿಗೆ ಒಳಗಾಗಿ ತಮ್ಮ ಬದುಕನ್ನು ನಾಶ ಮಾಡಿಕೊಳ್ಳುವುದನ್ನು ಈ ಕಥೆಯಲ್ಲಿ ವ್ಯಕ್ತಪಡಿಸಲಾಗಿದೆ. ಸಂವಿಧಾನ, ಪ್ರಜಾಪ್ರಭುತ್ವ ವ್ಯವಸ್ಥೆಗೆ ದಾರಿ ಮಾಡಿಕೊಟ್ಟಿದೆ. ಪ್ರಜೆಗಳಿಂದ ಆರಿಸಿ ಬರುವ ಪ್ರತಿನಿಧಿಗಳು ಸಂವಿಧಾನದ ಆಶಯಗಳಿಗೆ ಬದ್ಧವಾಗಿ ಕಾರ್ಯನಿರ್ವಹಿಸದೆ, ಬಡ ಮುಗ್ದ ಜನತೆಯನ್ನು ಕಿತ್ತು ತಿನ್ನುವ ರಣಹದ್ದುಗಳಾಗಿ ಕಾಡುತ್ತಿದ್ದಾರೆ ಎಂಬುದನ್ನು ಈ ಕಥೆ ಸೂಕ್ಷ್ಮವಾಗಿ ವ್ಯಕ್ತಪಡಿಸಿದೆ.

'ಹಾದರ ಕಾಯಕದ ಪುಣ್ಯಸ್ತ್ರೀ' ಕಥೆಯು ವರ್ತಮಾನದ ಹಲವು ಜ್ವಲಂತ ಸಮಸ್ಯೆಗಳಿಗೆ ಹಿಡಿದ ಕೈಗನ್ನಡಿಯಾಗಿದೆ. ದಲಿತ ಕುಟುಂಬವೊಂದು ತಮ್ಮಲ್ಲಿರುವ ಸ್ವಲ್ಪ ಭೂಮಿಯಲ್ಲಿ ಕೊಳವೆಭಾವಿಯನ್ನು ಹಾಕಿಸಿ ತೋಟ ಮಾಡಿ ನಾಲ್ಕು ಜನರಂತೆ ಬದುಕು ಕಟ್ಟಿಕೊಳ್ಳುವ ಮಹಾದಾಸೆಯನ್ನು

ಇಟ್ಟುಕೊಂಡಿರುತ್ತದೆ. ತಿಪ್ಪನೆಂಬ ದಲಿತ ವ್ಯಕ್ತಿಯೊಬ್ಬ ಒಡವೆ, ದನ, ಕರು, ಕೂಲಿಯಿಂದ ಸಂಪಾದಿಸಿದ ಹಣ, ಜೊತೆಗೆ ಸಾಲ ಸೂಲ ಮಾಡಿ ಬೋರ್ವೆಲ್ ಕೊರೆಸಿ ನೀರಾವರಿ ಶುರು ಮಾಡುತ್ತಾನೆ. ಅವನ ಅದೃಷ್ಟ ಕೆಟ್ಟು ಬೋರ್ವೆಲ್ ಹಾಳಾಗುತ್ತದೆ. ಅದನ್ನು ಮತ್ತೆ ಸರಿ ಮಾಡಿಸಲು ಊರ ಸಾಹುಕಾರರ ಹತ್ತಿರ ಜಮೀನು ಅಡಮಾನ ಇಟ್ಟು ಪ್ರಯತ್ನಿಸುತ್ತಾನೆ. ಆದರೂ ಅವನ ಪ್ರಯತ್ನಕ್ಕೆ ಫಲ ಸಿಗುವುದಿಲ್ಲ. ಸಾಲಗಾರನಾದ ತಿಪ್ಪ ಹೊಲದಲ್ಲಿ ಬೆಳೆಗಳಿಗೆ ಹೊಡೆಯುವ ಔಷಧಿ ಸೇವಿಸಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಇಂದು ವಿವಿಧ ಕಾರಣಗಳಿಗೆ ರೈತರ ಆತ್ಮಹತ್ಯೆಗಳು ದಿನನಿತ್ಯ ನಡೆಯುತ್ತವೆ. ಸಾಲದ ಬಾಧೆ, ಬರಗಾಲ ಮುಂತಾದವುಗಳು ರೈತರ ಆತ್ಮಹತ್ಯೆಗೆ ಮುಖ್ಯ ಕಾರಣಗಳು. ಅವುಗಳನ್ನು ಕಥೆಯಲ್ಲಿ ಗುರುತಿಸಲಾಗಿದೆ. ಇದರ ನಂತರದ ಭಾಗದಲ್ಲಿ ತಿಪ್ಪನ ಕುಟುಂಬ ಸಾಹುಕಾರನ ಸಾಲ ತೀರಿಸಿ ಜಮೀನು ಬಿಡಿಸಿಕೊಳ್ಳುವ ಉದ್ದೇಶದಿಂದ ದುಡಿಯಲು ಮುಂಬೈ ನಗರದ ಕಡೆ ವಲಸೆ ಹೋಗುವರು. ಅಲ್ಲಿ ಅಕ್ಕವ್ವ ಒಬ್ಬ ಮೇಸ್ತ್ರೀಯ ಕುತಂತ್ರಕ್ಕೆ ಬಲಿಯಾಗಿ ವೇಶ್ಯೆಯಾಗಿ ಮುಂಬೈನ ಕೆಂಪು ದೀಪದ ದಂಧೆಗೆ ಮಾರಾಟವಾಗುವ ಕರುಣಾಜನಕ ಕಥೆಯನ್ನು ಹೃದಯಸ್ಪರ್ಶಿಯಾಗಿ ಕಟ್ಟಿಕೊಡಲಾಗಿದೆ. ಹಲವು ಬಡ ದಲಿತ ಹೆಣ್ಣು ಮಕ್ಕಳು, ನಗರಗಳಲ್ಲಿ ವೇಶ್ಯೆಯಾಗಿ ಬದುಕುವುದಕ್ಕೆ ಈ ರೀತಿಯ ಹಲವು ಕಾರಣಗಳಿರುತ್ತವೆ ಎಂಬುದನ್ನು ಕಥೆ ವ್ಯಕ್ತಪಡಿಸಿದೆ. ಜಾತಿವ್ಯವಸ್ಥೆಯ ಕರಾಳ ಮುಖವನ್ನು ಸಹ ಇಲ್ಲಿ ಕಾಣಬಹುದು. ತಿಪ್ಪನ ಬೋರ್ವೆಲ್‌ನಲ್ಲಿ ಗಂಗೆ ಉಕ್ಕಿದಾಗ ಗಂಗಾಜಲವನ್ನು ಊರಿನ ಎಲ್ಲಾ ದೇವರುಗಳಿಗೆ ಅರ್ಪಿಸಲು ಮುಂದಾದಾಗ ದಲಿತ ದೇವರುಗಳು ಮಾತ್ರ ತಿಪ್ಪನ ಗಂಗಾಜಲದಲ್ಲಿ ಮಿಂದು ಏಳುತ್ತವೆ. ತಿಪ್ಪನ ಹೊಲದ ಗಂಗೆ ಮೇಲ್ವರ್ಗದ ದೈವಗಳಿಗೆ ಸೋಕದೆ ಆ ದೇವಾಲಯಗಳ ಮೆಟ್ಟಿಲುಗಳನ್ನು ತೊಳೆಯುತ್ತವೆ. ಇದು ಈ ನೆಲದಲ್ಲಿ ಜಾತಿವ್ಯವಸ್ಥೆ ಇನ್ನೂ ಜೀವಂತವಾಗಿರುವುದರ ಪ್ರತೀಕ. ಮಾನವರನ್ನು ಹುಟ್ಟಿನ ಜಾತಿಯಿಂದ ಗುರುತಿಸಲಾಗುತ್ತದೆ. ಪ್ರಕೃತಿಯನ್ನು ನೆಲ, ಜಲ, ಅಗ್ನಿಗಳನ್ನು ಜಾತಿಯಿಂದ ವಿಂಗಡಿಸುವುದು ಎಷ್ಟರ ಮಟ್ಟಿಗೆ ಸರಿ ಎಂಬುದನ್ನೂ ಇಲ್ಲಿ ಪ್ರಶ್ನಿಸಲಾಗಿದೆ. ಒಟ್ಟಿನಲ್ಲಿ ಹಾಲಗೇರಿ ಅವರು ಹಲವು ಸಮಕಾಲಿನ ಸಮಸ್ಯೆಗಳನ್ನು ಈ ಕಥೆಯಲ್ಲಿ ತೆರೆದಿಡುವ ಪ್ರಯತ್ನ ಮಾಡಿದ್ದಾರೆ.

ಭಾಗವ್ವ ಕಥೆಯೂ ಸಹ ವಿವಾಹದ ನಂತರದ ಅನೈತಿಕ ಸಂಬಂಧ ಕುರಿತು ಜಾತಿ ವ್ಯವಸ್ಥೆ ಕುರಿತು ಮಾತನಾಡುತ್ತದೆ. ಭಾಗವ್ವ ಕುರುಬ ಜಾತಿಗೆ ಸೇರಿದ ಹೆಣ್ಣು ಮಗಳು. ಮೂಕ ಗಂಡನೊಂದಿಗೆ ಇರುವ ಸ್ವಲ್ಪ ಜಮೀನಿನಲ್ಲಿ ಮೂರು ಹೆಣ್ಣು ಮಕ್ಕಳೊಂದಿಗೆ ಸಂಸಾರ ಮಾಡಿಕೊಂಡಿದ್ದಳು. ಪಕ್ಕದ ಹೊಲದ ಲಿಂಗಾಯತ ಶಿವಪ್ಪನ ಕಣ್ಣು ಈ ಭಾಗವ್ವನ ಮೇಲೆ ಬಿದ್ದು, ತನ್ನ ತಂತ್ರಗಾರಿಕೆಯಿಂದ ಅವಳನ್ನು ತನ್ನ ವಶ ಮಾಡಿಕೊಳ್ಳುವನು. ಇದರಿಂದ ಕುರುಬ ಜಾತಿಯವರು ಭಾಗವ್ವನನ್ನು ಜಾತಿಯಿಂದ ಹೊರಗಿಡುವವರು. ವೀರಶೈವರು ಇದನ್ನು ತಮ್ಮ ಜಾತಿಯ ಪ್ರತಿಷ್ಠೆಯಾಗಿ ನೋಡುವರು. ಗ್ರಾಮೀಣ ಭಾಗದಲ್ಲಿ ಇದು ಸಾಮಾನ್ಯ ವಿಷಯ. ಮೇಲ್ಜಾತಿಯವರು ಸಾಮಾಜಿಕವಾಗಿ ತಮಗಿಂತ ಕೆಳಸ್ಥರದಲ್ಲಿರುವ ಹೆಣ್ಣು ಮಕ್ಕಳನ್ನು ಅವರ ಬಡತನ, ಅಸಹಾಯಕತೆ ಅವರ ದೌರ್ಬಲ್ಯಗಳನ್ನು ಬಳಸಿಕೊಂಡು ಹಣ, ಒಡವೆ ಮುಂತಾದ ಆಮಿಷಗಳನ್ನು ನೀಡಿ ಅವರನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಾರೆ. ಹಾಗೆಯೇ ಭಾಗವ್ವನು ಕೂಡ ಶಿವಪ್ಪನ ಯಾವುದೋ ಆಮಿಷಕ್ಕೆ ಒಳಗಾಗಿ ಅವನೊಂದಿಗೆ ಸಂಬಂಧ ಬೆಳೆಸುವಳು. ಇದು ಅವಳ ಕುಟುಂಬದ ಮೇಲೆ ಅತ್ಯಂತ ಕೆಟ್ಟ ಪರಿಣಾಮ ಬೀರುವುದು. ಶಾಲೆಗೆ ಹೋಗುವ ಅವಳ ಹೆಣ್ಣು ಮಕ್ಕಳೂ ಸಹ ಸಾಕಷ್ಟು ಭಾರಿ ಇದರಿಂದ ಅನುಮಾನಕ್ಕೆ ಒಳಗಾಗಬೇಕಾಗುವುದು. ಮದುವೆ ವಯಸ್ಸಿಗೆ ಬಂದರೂ ಸಹ ಅವರು ಸಮಾಜದಿಂದ ಬಹಿಷ್ಕಾರಗೊಂಡಿದ್ದರಿಂದ ಅವರ ಮನೆಗೆ ಯಾವ

ಗಂಡುಗಳೂ ಸುಳಿಯುವುದಿಲ್ಲ. ಭಾಗವ್ವನ ಹಿರಿಯ ಮಗಳಲ್ಲಿ ಕಥಾನಾಯಕ ಆಕರ್ಷಿತನಾಗುತ್ತಾನೆ. ಅವನು ನೌಕರಿ ಪಡೆದ ನಂತರವೂ ತನ್ನ ಕುಟುಂಬದ ಅಪ್ಪಣೆಯನ್ನು ಮೀರಿ ಅವಳನ್ನು ವಿವಾಹವಾಗಲು ಬಯಸುವುದು ಹಾಲಗೇರಿಯವರ ಪ್ರಗತಿಪರ ನಿಲುವಾಗಿದೆ. ಕಥೆ ಹದಿಹರೆಯದವರ ಯೌವ್ವನ ಸಹಜ ಬದುಕುಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಚಿತ್ರಿಸಿದೆ. ಅದರ ಜೊತೆಗೆ ಗ್ರಾಮೀಣ ಭಾಗದಲ್ಲಿ ನಡೆಯುವ ವಿವಾಹದ ನಂತರದ ಗಂಡು–ಹೆಣ್ಣಿನ ಸಂಬಂಧವನ್ನು ಕುರಿತು ವಿವರಿಸುತ್ತದೆ. ಭಾಗವ್ವ ಶಿವಪ್ಪ ವಿವಾಹೇತರ ಸಂಬಂಧ ಹೊಂದಿದ್ದರೂ ಸಹ ಸತಿಪತಿಗಳಂತೆ ಬದುಕುತ್ತಾರೆ. ಇವರ ಈ ಪ್ರೇಮದ ವಿಷಯ ಗೊತ್ತಿದ್ದರೂ ಆರಂಭದಲ್ಲಿ ತನ್ನ ವರ್ತನೆಗಳಿಂದ ಪ್ರತಿಭಟಿಸಿದ ಮೂಕಪ್ಪ ನಂತರ ಅವರ ಸಂಬಂಧವನ್ನು ಒಪ್ಪಿಕೊಳ್ಳುವುದು ಅವನ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತದೆ. ಕಥೆ ಗ್ರಾಮೀಣ ಸಮಾಜದ ಹಲವು ಮಗ್ಗಲುಗಳನ್ನು ನಮಗೆ ಪರಿಚಯಿಸುತ್ತದೆ. ಕಥೆಗಳನ್ನು ಓದಿದಾಗ ಮೂಕಪ್ಪನ ಅಸಹಾಯಕತೆಯನ್ನು ಕಂಡು ಕರುಳು ಮರುಗುತ್ತದೆ, ಭಾಗವ್ವನ ನೆಲೆಯಲ್ಲಿ ನೋಡಿದಾಗ ಭಾಗವ್ವನದ್ದು ಸರಿಯಾದ ನಿರ್ಧಾರವಾಗುತ್ತದೆ. ಮೂಕಪ್ಪ ಅಂಗವಿಕಲನಾಗಿದ್ದರಿಂದ ಭಾಗವ್ವಳ ಎಲ್ಲ ಭಾವನೆಗಳಿಗೆ ಸ್ಪಂದಿಸಲಾರ. ಭಾಗವ್ವ ಯಾವುದೋ ಕಾರಣಕ್ಕಾಗಿ ಅಂಗವಿಕಲನನ್ನು ಮದುವೆಯಾಗಿರುವುದು ಇಲ್ಲಿ ಸ್ಪಷ್ಟ. ಭಾಗವ್ವನ ಅತೃಪ್ತ ಬಯಕೆಗಳನ್ನು ಅರ್ಥಮಾಡಿಕೊಂಡ ಶಿವಪ್ಪ ಅವಳಿಗೆ ಜೊತೆಯಾಗಯತ್ತಾನೆ. ಆಗ ಭಾಗವ್ವಳು ಸಹಜವಾಗಿಯೇ ಶಿವಪ್ಪನಿಗೆ ಮನಸೋಲುತ್ತಾಳೆ. ಶಿವಪ್ಪ ಭಾಗವ್ವಳನ್ನು ಕೊನೆಯವರೆಗೂ ಸತಿಯಾಗಿ ನಡೆಸಿಕೊಳ್ಳುತ್ತಾನೆ. ಹಾಗೆಯೇ ಭಾಗವ್ವಳೂ ಸಹ ತನ್ನನ್ನು ತಾನು ಶಿವಪ್ಪನಿಗೆ ಅರ್ಪಿಸಿಕೊಳ್ಳುತ್ತಾಳೆ. ಕಥೆಯ ಕೊನೆಯಲ್ಲಿ ಶಿವಜ್ಜನ ಸಾವಿನ ನಂತರ ಮೂಕಪ್ಪ ಶಿವಜ್ಜನ ಫೋಟೋ ತಂದು ತನ್ನ ಮನೆಯ ಗೋಡೆಗೆ ಹಾಕಿ ಪೂಜಿಸುವುದು ತನ್ನ ಅಸಹಾಯಕತೆಗಿಂತಲೂ ತನ್ನ ಅಸಮರ್ಥತೆಯನ್ನು ಒಪ್ಪಿಕೊಂಡಂತೆ. ಶಿವಜ್ಜ ತನ್ನ ಅಸಮರ್ಥತೆಯನ್ನು ನಿವಾರಿಸಿ ತನ್ನ ಕುಟುಂಬಕ್ಕೆ ಎಲ್ಲದನ್ನೂ ಒದಗಿಸುವನು ಎನ್ನುವ ಕೃತಜ್ಞತಾ ಭಾವವು ಇಲ್ಲಿ ವ್ಯಕ್ತವಾಗಿದೆ.

ಮಠದ ಹೋರಿ ಕಥೆಯು ಈ ಸಂಕಲನದ ಅತ್ಯಂತ ಸ್ವಾರಸ್ಯವಾದ ಕಥಾವಸ್ತುವನ್ನು ಹೊಂದಿದೆ. ಮಠದ ಹೋರಿಯೊಂದು ಆತ್ಮಕತೆಯ ರೂಪದಲ್ಲಿ ತನ್ನ ನೋವು, ಸಂಕಟ ಬದುಕಿನ ವಿವಿಧ ಮಜಲುಗಳನ್ನು ಹಂಚಿಕೊಳ್ಳುವಂತೆ ಕಥೆಯನ್ನು ಹೆಣೆಯಲಾಗಿದೆ. ಹಾಲಗೇರಿಯವರು ತಮ್ಮ ಕಾಲ್ಪನಿಕ ಚಿಂತನೆಗಳಿಂದ ಹೋರಿ ತನ್ನ ಬದುಕಿನ ದುರಂತ ಕಥನಗಳನ್ನು ಅತ್ಯಂತ ಕರುಣಾಜನಕವಾಗಿ ನಿವೇದಿಸಿಕೊಳ್ಳುವಂತೆ ನಿರೂಪಿಸುವ ಪ್ರಯತ್ನ ಮಾಡಿದ್ದಾರೆ. ಹೋರಿಯೊಂದು ಕೆಲವು ಹಸುಗಳು ವಯಸ್ಸಾದ ಕಾರಣಕ್ಕೆ ಮಠದಿಂದಲೇ ಕಸಾಯಿ ಖಾನೆಗೆ ಮಾರಾಟವಾಗುವ ಪ್ರಸಂಗ ಬರುತ್ತದೆ. ಮಾರಾಟವಾದ ಜಾನುವಾರುಗಳು ತಮ್ಮ ಬದುಕಿನ ದುರಂತ ಕಥೆಗಳನ್ನು ಹಂಚಿಕೊಳ್ಳುತ್ತಾ ಹೋಗುತ್ತಾರೆ. ಗ್ರಾಮೀಣ ಭಾಗದಲ್ಲಿ ಇಂದಿಗೂ ಹಸುಗಳನ್ನು, ಹೋರಿಗಳನ್ನು ದೇವರ ಹೆಸರಿನಲ್ಲಿ ಬಸವನಾಗಿ ಬಿಡುವ ಪರಿಪಾಠವಿದೆ. ಈ ರೀತಿಯ ಬಸವ, ಹಸುಗಳಿಗೆ ಗ್ರಾಮದಲ್ಲಿ ಯಾವುದೇ ನಿರ್ಬಂಧಗಳು ಇರುವುದಿಲ್ಲ. ಈ ಬಸವಗಳನ್ನು ದೈವ ಸ್ವರೂಪಿಯಾಗಿಯೇ ಗ್ರಾಮೀಣರು ಆರಾಧಿಸುತ್ತಾರೆ. ಇವುಗಳ ಸಂಖ್ಯೆ ಹೆಚ್ಚಾದಾಗ ದೇವರ ಹೆಸರಿನಲ್ಲಿ ಹರಾಜು ಹಾಕುತ್ತಾರೆ. ಇವು ದಷ್ಟಪುಷ್ಟವಾಗಿರುವುದರಿಂದ ಹರಾಜಿನಲ್ಲಿ ಶ್ರೀಮಂತರು ಹೆಚ್ಚು ಬೆಲೆ ಕೊಟ್ಟು ಕೊಂಡು ವ್ಯವಸಾಯಕ್ಕೆ ಬಳಸಿಕೊಳ್ಳುವಂತಹ ಸಾಂಸ್ಕೃತಿಕ ಆಚರಣೆಗಳು ಕಥೆ ಹೇಳುತ್ತವಾದರೂ ನಂತರ ಅವುಗಳ ಖಾಸಗಿ ಬದುಕಿನ ವಿಷಯದಲ್ಲಿ ತಿರುಗುತ್ತದೆ. ದೇವರಿಗೆ ಬಿಡುವ ಹಸುಗಳಿಗೆ ಹೆಚ್ಚು

ಸ್ವಾತಂತ್ರ್ಯವಿದ್ದರೂ ಮನೆಗಳಲ್ಲಿರುವ ಹಸುಗಳಿಗೆ ಅವುಗಳ ವೈಯಕ್ತಿಕ ಸ್ವಾತಂತ್ರ್ಯ ಕಿತ್ತು ಸಾಕುವ ಪ್ರಾಣಿ ಎಂಬ ಹಣೆಪಟ್ಟಿಯಿಂದ ಅವುಗಳಲ್ಲಿ ಸ್ವಾತಂತ್ರ್ಯ ಕಿತ್ತುಕೊಂಡು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುವುದನ್ನು ಕಥೆ ಸೂಕ್ಷ್ಮವಾಗಿ ಅಭಿವ್ಯಕ್ತಿಸಿದೆ.

ಮಠಗಳಲ್ಲಿರುವ ಗೋಶಾಲೆಗಳು ಗೋಶಾಲೆಗಳಿಂದ ದೇಶಿ ಹಸುಗಳ ಸಂತಾನವೃದ್ಧಿ, ಅಲ್ಲಿನ ಸ್ವಾಮಿಗಳಿಗೂ ಗೋವುಳಿಗೂ ಇರುವ ಅವಿನಾಭಾವಯತೆಗಳನ್ನು ಕಥೆಯಲ್ಲಿ ಚಿತ್ರಿಸಲಾಗಿದೆ. ಅಲ್ಲಿಂದ ವಯಸ್ಸಾದ ನಂತರ ವಿವಿಧ ಸಂಸ್ಥೆಗಳು ನಿರ್ವಹಿಸುವ ಗೋ ಸಂರಕ್ಷಣಾ ಶಾಲೆಗೆ ಬರುತ್ತವೆ. ಅಲ್ಲಿ ಗೋವುಗಳನ್ನು ನೋಡಿಕೊಳ್ಳುವ ವಿಧಾನಗಳು, ಅಲ್ಲಿನ ಆಹಾರ ಕ್ರಮ, ಹಾಲು ಕರೆಯುವ ಉಪಯೋಗಕ್ಕೆ ಬರುವ ಹಸುಗಳಿಗೆ ಸಿಗುವ ಪ್ರಾತಿನಿಧ್ಯ ಉಪಯೋಗಕ್ಕೆ ಬಾರದ ಗೋವುಗಳನ್ನು ನೋಡಿಕೊಳ್ಳುವ ರೀತಿಗಳನ್ನು ವ್ಯಂಗ್ಯವಾಗಿ ಚಿತ್ರಿಸಲಾಗಿದೆ. ಗೋವುಗಳು ಎಮ್ಮೆಗಳು ಎರಡೂ ಸಹ ಪೌಷ್ಟಿಕಯುಕ್ತ ಹಾಲನ್ನು ಕೊಡುತ್ತವೆ. ಆದರೆ ಸಾಂಸ್ಕೃತಿಕ ಹಾಗೂ ಧಾರ್ಮಿಕ ವಲಯಗಳಲ್ಲಿ ಗೋವುಗಳಿಗೆ ಸಿಕ್ಕ ಸ್ಥಾನಮಾನ ಎಮ್ಮೆಗಳಿಗೆ ಸಿಗುವುದಿಲ್ಲ. ಮಠಗಳಲ್ಲಿ, ಗೋಶಾಲೆಗಳಲ್ಲಿ ಎಮ್ಮೆಗಳಿಗೆ ಬಹುತೇಕ ಪ್ರವೇಶವಿರುವುದಿಲ್ಲ. ಕಸಾಯಿ ಖಾನೆಗೆ ಹೋಗುವ ಗೋವುಗಳನ್ನು ರಕ್ಷಿಸುವ ಗೋರಕ್ಷಕರು ಜೊತೆಯೇ ಇರುವ ಎಮ್ಮೆಗಳನ್ನು ರಕ್ಷಿಸುವುದಿಲ್ಲ. ಹಾಲನ್ನು ಭೂಲೋಕದ ಅಮೃತ ಎನ್ನಲಾಗುವುದು. ಈ ಅಮೃತವನ್ನು ಕರೆಯುವ ಗೋವು ಹಾಗೂ ಎಮ್ಮೆಗಳಲ್ಲಿಯೇ ಈ ರೀತಿಯ ತಾರತಮ್ಯಗಳು ಇರುವುದನ್ನು ಈ ಕತೆಯಲ್ಲಿ ಚರ್ಚಿಸಲಾಗಿದೆ.

ಹಾಲಗೇರಿ ಅವರು ಇಂದು ಅಭಿವೃದ್ಧಿಯ ಹೆಸರಿನಲ್ಲಿ ಗ್ರಾಮ, ಸಮುದಾಯಗಳು ಹೇಗೆ ಆಧುನೀಕರಣಗೊಳ್ಳುತ್ತಿವೆ, ಆ ಮೂಲಕ ಅಲ್ಲಿನ ಸಾಂಸ್ಕೃತಿಕ ಬದುಕು, ಬದುಕಿನ ಮೌಲ್ಯಗಳು ಹೇಗೆ ನಾಶಗೊಳ್ಳುತ್ತಿವೆ ಎಂಬುದನ್ನು 'ಕಾಂಕ್ರೀಟ್ ಮೊಟ್ಟೆಯ ಹಕ್ಕಿಗಳು' 'ಬೆಂಕಿ ಉಗುಳುವ ಪಂಕ' ಕಥೆಗಳು ಪ್ರಸ್ತುತಪಡಿಸಿವೆ. ಕಾಂಕ್ರೀಟ್ ಹಕ್ಕಿಯ ಮೊಟ್ಟೆಗಳು ಇಂದಿನ ರಿಯಲ್ ಎಸ್ಟೇಟ್‌ನ ಕರಾಳ ಮುಖವನ್ನು, ಅದರಿಂದ ಕಾಂಕ್ರೀಟ್ ಗೂಡುಗಳಾಗುತ್ತಿರುವ ಗ್ರಾಮೀಣ ಪರಿಸರದ ಬದುಕಿನ ಚಿತ್ರಣವನ್ನು ಕಟ್ಟಿದೆ. ಈ ಕಥೆಯಲ್ಲಿ ಬರುವ ಶ್ರಮಜೀವಿ ಕಲ್ಲಜ್ಜನು ತನ್ನ ಜಮೀನು, ಬಂಡವಾಳಶಾಹಿ ವ್ಯವಸ್ಥೆಯ ಕೈವಶವಾಗುವುದನ್ನು ವಿರೋಧಿಸುವನು. ಕಲ್ಲಜ್ಜ ಅವನ ತಂದೆ ಯಮುನಪ್ಪ ತಾಯಿ ತುಳುಸಮ್ಮರ ಹತ್ತಾರು ವರ್ಷದ ಶ್ರಮದ ಫಲ ಊರ ಹತ್ತಿರವಿರುವ ಮೂರು ಎಕರೆ ಭೂಮಿ. ಯಮುನಪ್ಪ ಊರ ಗೌಡರ ಮನೆಯಲ್ಲಿ ಸಾಯುವ ಕಾಲದವರೆಗೆ ಜೀತ ಮಾಡಿ ಹಣ ಕೂಡಿಸುವನು. ತುಳಸಮ್ಮ ಕೂಲಿನಾಲಿ ಮಾಡಿ, ಕಲ್ಲಜ್ಜ ಕುರಿ ಸಾಕಿ ಹಣವನ್ನು ಸಂಪಾದಿಸಿ ಭೂಮಿ ಕೊಳ್ಳುವರು. ತಮ್ಮ ಪೂರ್ವಜರ ಭೂಮಿಯ ಕನಸನ್ನು ಇವರು ಈಡೇರಿಸುವರು. ಭೂರಹಿತ ದಲಿತ ಕುಟುಂಬವನ್ನು ಭೂ ಒಡೆತನ ಸಂಪಾದಿಸುವ ಬಗೆಯನ್ನು ಇಲ್ಲಿ ಗಮನಿಸಬಹುದು. ಕಾಲ ಕಳೆದಂತೆ ಆಧುನಿಕತೆ ಗ್ರಾಮಗಳಿಗೂ ಕಾಲಿಟ್ಟಾಗ, ಗ್ರಾಮ ಸಮುದಾಯಗಳು ಅದರ ಕಬಂಧ ಬಾಹುಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಬಂಡವಾಳಶಾಹಿಯನ್ನು ಪೋಷಿಸುವ ಸರ್ಕಾರ, ಆ ಹಳ್ಳಿಯಲ್ಲಿ ಕಾರ್ಖಾನೆ ಸ್ಥಾಪಿಸುವುದಾಗಿ ಹೇಳಿ ರೈತರು ತಮ್ಮ ಜಮೀನನ್ನು ಸರ್ಕಾರಕ್ಕೆ ಕೊಡುವ ಪರಿಹಾರ ತೆಗೆದುಕೊಂಡು ಸರ್ಕಾರಕ್ಕೆ ಮಾರುವಂತೆ ಒತ್ತಾಯ ಹೇರತೊಡಗುವರು. ರಿಯಲ್ ಎಸ್ಟೇಟ್‌ನ ಮಧ್ಯವರ್ತಿಗಳು ಗ್ರಾಮಕ್ಕೆ ಲಗ್ಗೆ ಇಟ್ಟರು. ಶಾಂತಿಯಿಂದ ಇದ್ದ ಗ್ರಾಮ ಎರಡು ಭಾಗವಾಗುವುದು. ಇದು ಇಂದಿನ ಎಲ್ಲಾ ಹಳ್ಳಿಗಳ ಸ್ಥಿತಿಯೂ ಹೌದು. ಒಂದು ಬಣ ಕಾರ್ಖಾನೆಯನ್ನು ವಿರೋಧಿಸಿದರೆ, ಮತ್ತೊಂದು ಬಣ ಸ್ವಾಗತಿಸಿತು. ಪ್ರಗತಿಪರರು ಪರಿಸರವಾದಿಗಳು ಕಾರ್ಖಾನೆ ತೆರೆಯುವುದನ್ನು ವಿರೋಧಿಸುವರು. ಊರ ಗೌಡರು ರಾಜಕೀಯ ವ್ಯಕ್ತಿಗಳು ಮಠಾಧೀಶರು ವಿರೋಧಿಸಿ

ಪ್ರತಿಭಟನೆಯಲ್ಲಿ ಪಾಲ್ಗೊಂಡರು. ಮಾಧ್ಯಮಗಳು ಇದನ್ನು ರಾಜ್ಯ ಸುದ್ದಿಯಾಗಿ ಪ್ರಕಟಿಸಿ ಹೋರಾಟಕ್ಕೆ ಕಾವು ಕೊಟ್ಟರು. ಕೆಲ ದಿನಗಳ ನಂತರ ರಾಜಕೀಯ ಮುಖಂಡರು, ಮಠಾಧೀಶರು ಕಾರ್ಖಾನೆಯ ಸ್ಥಾಪನೆಯನ್ನು ಮಧ್ಯವರ್ತಿಗಳ ವಿವಿಧ ಆಮಿಷಗಳಿಗೆ ಒಳಗಾಗಿ ಪ್ರತಿಭಟನೆಯನ್ನು ಹಿಂಪಡೆಯವರು. ಮಾಧ್ಯಮದವರು ಅಲ್ಲಿಂದ ಕಾಲ್ಕಿತ್ತರು. ಗ್ರಾಮಸ್ಥರೆಲ್ಲರೂ ರಾಜಕೀಯ ಮುಖಂಡರ ಮಾತಿಗೆ ಮರುಳಾಗಿ ಭೂಮಿ ಮಾರಲು ಸಿದ್ಧರಾದರು. ಆದರೆ ಕಲ್ಲಜ್ಜನ ಒಳಸಂಕಟ ಹೇಳತೀರದು. ಆ ಭೂಮಿ ಪಡೆಯಲು ತನ್ನ ತಂದೆ,–ತಾಯಿ, ತಾನು ಮಾಡಿದ ತ್ಯಾಗ ಕಷ್ಟಗಳು ಕಣ್ಣ ಮುಂದೆ ಬಂದು ಗಾಂಧಿಯವರ ಉಪವಾಸ ಸತ್ಯಾಗ್ರಹದ ಅಸ್ತ್ರ ಹಿಡಿದು ಕಲ್ಲಜ್ಜ ಒಬ್ಬನೇ ಹೋರಾಟಕ್ಕೆ ಇಳಿಯುವನು. ತನ್ನ ವಂಶ ಒಳ್ಳೆಯ ಕೃಷಿ ಕುಟುಂಬವಾಗಲಿ ಎಂಬ ಕನಸು ಕಟ್ಟಿದ ಕಲ್ಲಜನಿಗೆ ಮಕ್ಕಳು ಸಹಕರಿಸಲಿಲ್ಲ. ಅವರು ಕೃಷಿ ತ್ಯಜಿಸಿ ನಗರ ಸೇರಿದ್ದರು. ಕೊನೆಗೆ ಊರ ಮುಖಂಡರು ಕಲ್ಲಜ್ಜನ ಮಕ್ಕಳಿಗೆ ಹಣದ ಆಮಿಷ ನೀಡಿ ಭೂಮಿ ಪಡೆಯುವರು. ಕಲ್ಲಜ್ಜ ಹೆಂಡತಿಯೊಂದಿಗೆ ನಗರದ ಮಗನ ಮನೆಗೆ ಸೇರಿದರು. ಭೂಮಿ ಹೋದ ಕೊರಗಿನಿಂದ ಹೆಂಡತಿಯ ಸಾವು ಕಲ್ಲಜ್ಜನನ್ನು ಮಾನಸಿಕವಾಗಿ ಇನ್ನಷ್ಟು ಕುಗ್ಗಿಸಿತು. ಕೊನೆಗೆ ತನ್ನ ಹಳ್ಳಿಗೆ ಬಂದ. ಹಳ್ಳಿ ಸಾಕಷ್ಟು ಬದಲಾಗಿತ್ತು, ಗಿಡಮರಗಳಿಂದ ಕಂಗೊಳಿಸುತ್ತಿದ್ದ ತಮ್ಮ ಕೃಷಿ ಭೂಮಿಯಲ್ಲಿ ದೊಡ್ಡ ದೊಡ್ಡ ಕಾಂಕ್ರೀಟ್ ಕಟ್ಟಡಗಳು ತಲೆ ಎತ್ತಿ ಗ್ರಾಮದ ಸ್ವರೂಪವೇ ಬದಲಾಗಿದೆ.

ತಾನು ಭೂಮಿ ಕೊಟ್ಟ ಕಾರ್ಖಾನೆಯಲ್ಲಿ ತನಗೇ ಕೆಲಸ ದೊರೆಯದಾಗುತ್ತದೆ. ಈ ಕಥೆ ಇಂದಿನ ರೈತರನ್ನು ಸರ್ಕಾರ, ರಾಜಕೀಯ ನಾಯಕರು, ಮಠಾಧೀಶರು, ಬಂಡವಾಳಶಾಹಿ ವ್ಯವಸ್ಥೆಯ ಮಧ್ಯವರ್ತಿಗಳು ಹೇಗೆ ವಂಚಿಸುತ್ತಿದ್ದಾರೆ ಎಂಬುದನ್ನು ಅನಾವರಣಗೊಳಿಸುತ್ತದೆ. ಇಂದು ಕೃಷಿ ಭೂಮಿಗಳೆಲ್ಲಾ ಕಾಂಕ್ರೀಟ್ ಕಟ್ಟಡಗಳಾಗಿ ಬದಲಾಗುತ್ತಿವೆ. ಅಭಿವೃದ್ಧಿಯ ಹೆಸರಿನಲ್ಲಿ ಸರ್ಕಾರಗಳು ವಿದೇಶಿ ಕಂಪನಿಗಳಿಗೆ ನಮ್ಮ ರೈತರ ಕೃಷಿ ಭೂಮಿಯನ್ನು ಬಲಿಕೊಡುತ್ತಿವೆ. ಒಂದು ಭೂಮಿಯನ್ನು ಕೊಳ್ಳುವ ಒಂದು ಇಡೀ ಕುಟುಂಬ ಎಷ್ಟು ತ್ಯಾಗ ಮಾಡಿರುತ್ತದೆ. ಆದರೆ ಬಂಡವಾಳಶಾಹಿ ವ್ಯವಸ್ಥೆ ಸುಲಭದಲ್ಲಿ ಈ ಶ್ರಮವನ್ನು ನುಂಗಿಬಿಡುತ್ತದೆ. ಇಲ್ಲಿ ಶೋಷಣೆಗೆ ಒಳಗಾಗುವುದು ರೈತರೇ ಆಗಿರುತ್ತಾರೆ. ಇಂದು ಕೃಷಿಯಲ್ಲಿ ತೊಡಗಿಕೊಳ್ಳುವರ ಸಂಖ್ಯೆಯೇ ತೀರಾ ವಿರಳ. ಅಭಿವೃದ್ಧಿಯ ನೆಪದಲ್ಲಿ ಕೃಷಿ ಭೂಮಿಯನ್ನು ಕಸಿದುಕೊಂಡರೆ ರೈತರು ಇನ್ಯಾವ ಉದ್ಯೋಗವನ್ನು ಮಾಡಬೇಕಾಗುತ್ತದೆ.

ಇದೇ ರೀತಿ ಭೂವಂಚಿತರಾಗಿ ತಮ್ಮ ನೆಲೆಯನ್ನು ಕಳೆದುಕೊಳ್ಳುವ ಬುಡಕಟ್ಟು ಸಮುದಾಯಗಳ ಸಂವೇದನೆಗಳನ್ನು 'ಬೆಂಕಿ ಉಗುಳುವ ಪಂಕ' ಎಂಬ ಕಥೆಯೂ ನಿರೂಪಿಸಿದೆ. ಗುಡ್ಡದ ತಪ್ಪಲಿನಲ್ಲಿ ಪಶುಪಾಲನೆಯನ್ನು ವೃತ್ತಿಯಾಗಿ ಹೊಂದಿರುವ ಗೌಳಿಗರ ಸಮುದಾಯ, ಅಭಿವೃದ್ಧಿಯ ಹೆಸರಿನಲ್ಲಿ ಸರ್ಕಾರಗಳು ಕೈಗೊಳ್ಳುವ ವಿವಿಧ ಯೋಜನೆಗಳಿಗೆ ಬಲಿಯಾಗುವುದು ಈ ಕಥೆಯ ಕೇಂದ್ರವಾಗಿದೆ. ಇದರೊಂದಿಗೆ ಆ ಸಮುದಾಯಗಳ ತಲತಲಾಂತರದಿಂದ ಬಂದ ಪೂರ್ವಿಕರ ಬದುಕು ಅವರ ನಂಬಿಕೆ, ಸಂಸ್ಕೃತಿಗಳು ಆಧುನಿಕತೆಯ ಸುಳಿಗೆ ಸಿಲುಕಿ ನಾಶವಾಗುವುದನ್ನು ಈ ಕಥೆಯು ಧ್ವನಿಸುತ್ತದೆ. ತಮ್ಮ ಪಾಡಿಗೆ ತಾವು ಗುಡ್ಡದ ತಪ್ಪಲಿನಲ್ಲಿ ಪಶುಪಾಲನೆ ಮಾಡುತ್ತಾ ಹಾಲಿನ ಮಾರಾಟದಿಂದ ಬರುವ ಆದಾಯದಲ್ಲಿ ಬದುಕು ಕಟ್ಟಿಕೊಂಡ ಬುಡಕಟ್ಟು ಗೌಳಿಗರದ್ದಾಗಿದೆ. ಇವರಿಂದ ಗುಡ್ಡಕ್ಕೆ ಆಗಲಿ, ಪರಿಸರಕ್ಕೆ ಆಗಲಿ ಯಾವ ರೀತಿಯ ತೊಂದರೆಯೂ ಆಗಿರುವುದಿಲ್ಲ. ಅವರ ನೆಮ್ಮದಿಯ ಬದುಕನ್ನು ನಾಗರಿಕ ಸಮಾಜದ ಹಿತಾಸಕ್ತಿಗೆ ಬಲಿ ಕೊಡಲಾಗುವುದು. ನಾಗರಿಕ ಸಮಾಜ ವೈಭವದ ಜೀವನಕ್ಕೆ, ಉದ್ಯಮಿಗಳ ಕೈಗಾರಿಕೆಗಳಿಗೆ, ಬಂಡವಾಳಶಾಯಿ ವ್ಯವಸ್ಥೆಗಳ ಸ್ವಹಿತಾಸಕ್ತಿಗೆ ಇಂಥ ಎಷ್ಟೋ ಬುಡಕಟ್ಟುಗಳ ಸಾಂಸ್ಕೃತಿಕ ಬದುಕು

ನಾಶಹೊಂದಿವೆ. ನಾಗರಿಕ ಜೀವನದ ಯಾವ ಗಂಧಗಾಳಿಯು ಇಲ್ಲದ ಮುಗ್ಧ ಬುಡಕಟ್ಟುಗಳ ಬದುಕು ಆಧುನಿಕತೆಯ ಪ್ರವೇಶದಿಂದ ಹೇಗೆ ಛಿದ್ರಗೊಂಡಿವೆ ಎಂಬುದನ್ನು ಹಾಲಗೇರಿಯವರು ಇಲ್ಲಿ ಗುರುತಿಸಿದ್ದಾರೆ. ತಮ್ಮ ಮೂಲ ನೆಲೆಯನ್ನು ಬಿಟ್ಟು ಬಂದ ಈ ಬುಡಕಟ್ಟುಗಳು, ನಾಗರಿಕ ಸಮಾಜಗಳಲ್ಲಿ ತಮ್ಮ ಬದುಕನ್ನು ಕಟ್ಟಿಕೊಳ್ಳಲು ಹೆಣಗಾಡುತ್ತವೆ. ಇಂಥ ಮುಗ್ಧ ಬುಡಕಟ್ಟುಗಳನ್ನು ಒಕ್ಕಲೆಬ್ಬಿಸಿ ಗಾಳೀ ಯಂತ್ರಗಳನ್ನು ಸರ್ಕಾರ ಆ ಗುಡ್ಡದಲ್ಲಿ ನಿರ್ಮಿಸುತ್ತದೆ. ಹಲವು ತಲೆಮಾರುಗಳ ಸಾಂಸ್ಕೃತಿಕ ಬದುಕು ಈ ಅಭಿವೃದ್ಧಿ ಯೋಜನೆಗಳಿಂದ ಕೊನೆಗೊಳ್ಳುವುದನ್ನು ಇಲ್ಲಿ ಗ್ರಹಿಸಬಹುದು.

ಹನುಮಂತ ಹಾಲಗೇರಿಯವರು ಅಂತಕರಣವುಳ್ಳ ಮಾನವೀಯ ಕತೆಗಾರರು. ಅವರ ಹಲವು ಕಥೆಗಳು ಮಾನವೀಯತೆಯ ನೆಲೆಗಟ್ಟಿನಲ್ಲಿಯೇ ರೂಪಗೊಂಡಿವೆ. ಹಾಲಗೇರಿಯವರು ಪ್ರಸ್ತುತದಲ್ಲಿ ಹೊಸ ಶತಮಾನದ ಹಲವು ಸಂವೇದನೆಗಳಿಗೆ ಸಾಹಿತ್ಯದ ಮೂಲಕ ಸ್ಪಂದಿಸಿದ್ದಾರೆ. ಇಂದು ಬುಡಕಟ್ಟು, ದಲಿತ, ಮಹಿಳಾ, ರೈತ ಸಮುದಾಯಗಳು ಹೇಗೆ ಶೋಷಣೆಗಳಿಗೆ ಒಳಗಾಗುತ್ತಿವೆ ಎಂಬುದನ್ನು ತಮ್ಮ ಕಥೆಗಳಲ್ಲಿ ಚಿತ್ರಿಸಿದ್ದಾರೆ. ಇದರ ಜೊತೆಗೆ ಆಧುನಿಕತೆ, ಸರ್ಕಾರದ ಯೋಜನೆಗಳು ನಮ್ಮ ಸಾಂಸ್ಕೃತಿಕ ಬದುಕಿನ ಮೇಲೆ ಬೀರುವ ಪ್ರಭಾವವನ್ನು ಗುರುತಿಸಿದ್ದಾರೆ. ವಿದ್ಯಾವಂತ ಸಮುದಾಯಗಳು ತಮ್ಮದೆ ಸಮುದಾಯಗಳನ್ನು ತಮ್ಮ ಸ್ವಹಿತಾಸಕ್ತಿಗಳಿಗೆ ಹೇಗೆ ಬಲಿಕೊಡುತ್ತಿವೆ ಎಂಬುದನ್ನು ವಿಮರ್ಶಾತ್ಮಕ ನೆಲೆಯಲ್ಲಿ ವ್ಯಕ್ತಪಡಿಸಿದ್ದಾರೆ. 21ನೇ ಶತಮಾನದ ಸಂವೇದನೆಗಳು ಕಳೆದ ಶತಮಾನದ ಸಂವೇದನೆಗಳಿಗಿಂತ ಬಿನ್ನ ಸ್ವರೂಪದಲ್ಲಿ ವ್ಯಕ್ತಗೊಂಡಿವೆ.

**ಆಕರ ಗ್ರಂಥ**


- ಹನುಮಂತ ಹಾಲಗೇರಿ. (2013). *ಮಠದ ಹೋರಿ.* ಸಹಜ ಪುಸ್ತಕ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 11-21
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಚಾರ್ಲ್ಸ್ ಬೋದಿಲೇರ್‌ನ ಪಾಪದ ಹೂಗಳು : ವಿವೇಕದ ಫಲಗಳು

**ಡಾ. ಮಹಾಂತೇಶ ಪಾಟೀಲ**
ಸಹಾಯಕ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ವಿಭಾಗ, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ.

***Abstract:***
*'ಮನುಷ್ಯ ಸದಾ ಕುಡಿದ ಸ್ಥಿತಿಯಲ್ಲಿರಬೇಕು' ಎನ್ನುವ ಚಾರ್ಲ್ಸ್ ಬೋದಿಲೇರ್ (Charles Baudelaire 1821-1867) ಫ್ರೆಂಚ್ ಕಾವ್ಯದ ಸವಕಲಾದ ಸುಕುಮಾರತೆಯ ಎದೆಯ ಮೇಲೆ ಹೊಸ ಬಗೆಯ ಕಾವ್ಯದ ಬೀಜ ಬಿತ್ತಿದವನು. ಅನೈತಿಕವಾಗಿ ಜೀವಿಸುತ್ತಲೇ ಕಾವ್ಯದ ನೈತಿಕ ರಚನೆಗಳನ್ನು ಸೃಷ್ಟಿದನು. ಆದರೆ ಅವನು ಹೇಳುವ ವಾಸ್ತವ ಲೋಕದ ಗಂಡು–ಹೆಣ್ಣು ಸಂಧಿಸುವ 'ಮುಕ್ತ ಪ್ರಪಂಚ'ವು ಧರ್ಮವಂತರಿಗೆ, ಮಡಿವಂತರಿಗೆ 'ಪಾಪದ ಹೂಗಳಂತೆ' ತೋರಿದವು. ಬೋದಿಲೇರ್ ಚಿತ್ರಿಸಿದ ಸಮಾಜದ ನಿಜಮುಖಗಳನ್ನು, ಮಾಯಕಗಳನ್ನು, ಮುಗುದೆಯರನ್ನು, ಮದಿರೆಯನ್ನು, ಧರ್ಮದ ದುರುಳತೆಯನ್ನು ಕಾವ್ಯಸತ್ಯವೆಂದು ಫ್ರೆಂಚ್ ಸಮಾಜ ಒಪ್ಪಲಿಲ್ಲ. ಹಾಗಾಗಿ ಚಾರ್ಲ್ಸ್ ಬೋದಿಲೇರ್‌ನನ್ನು ಶಾಪಗ್ರಸ್ಥ ಕವಿ(Cursed Poet)ಯೆಂದು, ಅವನ ಕಾವ್ಯವನ್ನು ಪಾಪದ ಹೂಗಳೆಂದು ಹಣೆಪಟ್ಟಿಯನ್ನು ಕಟ್ಟಲಾಯಿತು. ಪ್ರಾನ್ಸಿನ ಮಡಿವಂತ ವಿಮರ್ಶಕ ಸೇಂಟ್‌ಬೀವ್ 'ಅವಿವೇಕದ ಹೂಗಳು' ಎಂದು ಕರೆದು ತನ್ನ ಅವಿವೇಕವನ್ನು ಮೆರೆದನು.*

***Keywords:*** *ಚಾರ್ಲ್ಸ್ ಬೋದಿಲೇರ್, ಪಾಪದ ಹೂಗಳು, ಫ್ರೆಂಚ್ ಕಾವ್ಯ.*

**ಪೀಠಿಕೆ**

ಚಾರ್ಲ್ಸ್ ಬೋದಿಲೇರ್ ಫ್ರೆಂಚ್ ನವ್ಯಕವಿ. ಪಿ. ಲಂಕೇಶ್ ಅವರ 'ಪಾಪದ ಹೂಗಳು' ಕೃತಿಯ ಮೂಲಕ ಕನ್ನಡಕ್ಕೆ ಪರಿಚಯಿಸಿದರು. ಬೋದಿಲೇರ್ ಬದುಕಿದ್ದಷ್ಟೂ ದಿನವೂ ಸಂಘರ್ಷಕ್ಕೊಂಡಿದ್ದ. ಬೋದಿಲೇರ್‌ನ ಬರಹಗಳು ಸಮಕಾಲೀನ ಸಮಾಜದ ನೈತಿಕ ಪ್ರಜ್ಞೆಗೆ ಸವಾಲಾಗಿದ್ದವು. ನಶ್ವರ ವಸ್ತುಗಳನ್ನು ನಿರ್ಲಕ್ಷಿಸುತ್ತಲೇ ನಿಸರ್ಗವನ್ನು ಆಸಕ್ತಿಯಿಂದ ಅವಲೋಕಿಸುತ್ತಿದ್ದ. ಬೋದಿಲೇರ್‌ನನ್ನು ಕನ್ನಡಕ್ಕೆ ತಂದ ಲಂಕೇಶರು "ಇದು ಹಸಿರಿಲ್ಲದ, ಉಸಿರಿಲ್ಲದ, ಹೆಸರಿಲ್ಲದ ನರಕ. ಅವನ ನರಕ ನೋಡಿಯಾದರೂ ನಮ್ಮ ಓದುಗರು ಎಚ್ಚರಗೊಳ್ಳಲಿ ಎಂಬುದು ನನ್ನಾಸೆ ಎಂದು 'ಪಾಪದ ಹೂವುಗಳ'ನ್ನು ಅನುವಾದಿಸಿದ್ದರು.[1]

(1)

ಫ್ರೇಂಚ್‌ನಿಂದ ಇಂಗ್ಲಿಷಿಗೆ ಬಂದಿದ್ದ ಬೋದಿಲೇರ್‌ನನ್ನು ಪಿ.ಲಂಕೇಶರವರು 'ಅನುವಾದ ಬಾಗಿಲಿನಿಂದ' ಕನ್ನಡಕ್ಕೆ ಕರೆದುಕೊಂಡು ಬಂದರು. ಇಂಗ್ಲಿಷ್ ರೋಮ್ಯಾಂಟಿಕ್ ಕಾವ್ಯದ ಕಾಲ್ಪನಿಕ ಸೌಂದರ್ಯದ ರಸಗ್ರಹಣದಲ್ಲಿ ಮುಳುಗಿ ಹೋಗಿದ್ದ ಕಾವ್ಯಾನುವಾದಕರಿಗೆ– ವಾಸ್ತವ ಸೌಂದರ್ಯದ

[1] ಬುಕ್‌ಬ್ರಹ್ಮ ಅಂತರ್ಜಾಲ. *ಮಾಯಾ ಕನ್ನಡಿ ಕೃತಿಯ ಸಾರಾಂಶ.* https://www.bookbrahma.com/book/maayakannadi

***Please cite this article as:*** ಮಹಾಂತೇಶ ಪಾಟೀಲ. (2024). ಚಾರ್ಲ್ಸ್ ಬೋದಿಲೇರ್‌ನ ಪಾಪದ ಹೂಗಳು: ವಿವೇಕದ ಫಲಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 3(3), 11–21

ರಸನಿಮಿಷಗಳನ್ನು 'ಪಾಪದ ಹೂಗಳ' (1971) ಮೂಲಕ ತೆರೆದು ತೋರಿಸಿದರು. ಈ ಅನುವಾದ ಕನ್ನಡ ಕಾವ್ಯಾನುವಾದಕ್ಕೆ ಹೊಸ ಹರೆಯವನ್ನು ಒದಗಿಸಿತು. ಬೋದಿಲೇರ್ ಕಾವ್ಯದ ಜಲಕಣ್ಣುಗಳಿಂದ ಕಾವ್ಯ ತೇವವನ್ನು ಲಂಕೇಶರು ಪಡೆದುಕೊಂಡು 'ನೀಲು ಕಾವ್ಯದ ಅಂತಸ್ಸತ್ವವನ್ನು ಮೈದುಂಬಿಸಿದಂತೆ' ತೋರುತ್ತದೆ. ಹೊಸ ತಲೆಮಾರಿನ ಹಲವರು ಬೋದಲೇರ್‌ನ ಕಾವ್ಯಸಖಿಯನ್ನು ಸಂಧಿಸಿ, ತಮ್ಮ ಕಾವ್ಯಹುಟ್ಟುಗಳನ್ನು ಗುಟ್ಟಾಗಿ ಪಡೆದುಕೊಂಡಿರುವುದಕ್ಕೆ ನಿದರ್ಶನಗಳು ಹುಡುಕಿದರೆ ಸಿಕ್ಕಾವು. ಹೀಗೆಯೇ ಖಲೀಲ್ ಗಿಬ್ರಾನ್, ಪಾಬ್ಲೋ ನೆರೂಡಾ, ಅಮೃತಾ ಪ್ರೀತಂ, ಗುಲ್ಜಾರ್– ಮೊದಲಾದ ಕವಿಗಳು ಸಮಕಾಲೀನ ಕಾವ್ಯದಲ್ಲಿ ಕರಗಿ ಕಾವ್ಯದ ನೀರಾಗಿ ಹರಿಯುತ್ತಿದ್ದಾರೆ. ಬೇರಾಗಿ ಕನ್ನಡದೊಳು ಭರವಸೆಯಾಗಿ ಕೊನರೊಡೆಯುತ್ತಿದ್ದಾರೆ. ಹೀಗೆ ಲೋಕಕಾವ್ಯದ ಸುಖವನ್ನುಂಡು ವರ್ತಮಾನದ ಕನ್ನಡ ಕಾವ್ಯ ಮೈಮನವನ್ನು ತುಂಬಿಸಿಕೊಂಡಿದೆ.

ಪ್ರಸ್ತುತ ಸಂಕಲನದಲ್ಲಿ ಲಂಕೇಶರವರು ಬೋದಿಲೇರ್‌ನ ಜೀವನದ ಬಿಕ್ಕಟ್ಟುಗಳನ್ನು ಹಾಗೂ ಅವನ ಕಾವ್ಯದ ಸಾರವನ್ನು ಭಟ್ಟಿಯಿಳಿಸಿದ್ದಾರೆ. ಎರಡೂ ಭಾಗಗಳು ಅಷ್ಟೇ ಕಾವ್ಯಾತ್ಮಕವಾಗಿವೆ. ಅವನ ವೈಯಕ್ತಿಕ ಲೋಕ ಹಾಗೂ ಕಾವ್ಯಲೋಕದ ಮಿಡಿತವನ್ನು 'ಲಂಕೇಶ್ ಭಾಷೆ'ಯಲ್ಲಿ ದಾಖಲಿಸಿದ್ದಾರೆ. ಅದಕ್ಕೆ ಬೋದಿಲೇರ್ ಬದುಕು ಮತ್ತು ಕಾವ್ಯದ ನಡುವೆ ಅಭಿನ್ನತೆಯು ಕಾರಣ. ಈ ಅನುವಾದದ ಆರಂಭದ ಆರೇಳು ಬರಹಗಳು ಬೋದಿಲೇರ್‌ನ ಖಾಸಗಿ ಬದುಕಿನ ಚಲ್ಲಾಪಿಲ್ಲಿ ಚಿತ್ರಣಗಳ ಕೋಲಾಜ್‌ನ್ನು ಮತ್ತು ಫ್ರೇಂಚ್ ಸಾಹಿತ್ಯಲೋಕದ ಪೂರ್ವಸೂರಿಗಳನ್ನು ಅವನ ಕಾವ್ಯಸಿದ್ಧಿಯ ಎದುರಿಗಿಟ್ಟು ನೋಡುತ್ತವೆ. ಹೆಣ್ಣು, ವೈನು, ಜೂಜು, ಅಫೀಮು, ಬಡತನ, ನೋವು, ರೋಗ, ಪ್ರೇಮ ಭ್ರಷ್ಟತೆ, ಸಾಂಗತ್ಯದ ವಂಚನೆ, ಧರ್ಮದ ನೈತಿಕ ಲೊಳಲೊಟ್ಟೆ– ಇವೆಲ್ಲ ಸಂಗತಿಗಳು ಅವನನ್ನು ಹಿಂಡಿ ಹಿಪ್ಪೆಯಾಗಿಸಿದ್ದವು. ಸುಂದರ ದೇಶ ಫ್ರಾನ್ಸಿನ ಕರಾಳ ಅನುಭವಗಳನ್ನು ಪಡೆದುಕೊಂಡು ಕಾವ್ಯದಲ್ಲಿ ಎರಕ ಹೊಯ್ದನು. ತಾಯಿಯಿಂದ, ಮಲತಂದೆಯಿಂದ, ಗೆಳತಿಯರಿಂದ, ವೇಶ್ಯರಿಂದ, ಶೋಕಿ ಶ್ರೀಮಂತರಿಂದ, ನಡುಬಳುಕಿಸುವ ನಟಿಯರಿಂದ– ಕೊನೆಕೊನೆಗೆ ಫ್ರಾನ್ಸ್ ಸರ್ಕಾರದಿಂದ ಬೋದಿಲೇರ್‌ನಿಗಾಗಲಿ, ಅವನ ಕಾವ್ಯಕ್ಕಾಗಲಿ ಸಿಕ್ಕಿದ್ದು ಬರಿ– ಒಂಟಿತನ, ವಂಚನೆ, ಭ್ರಷ್ಟತೆ, ಯಾತನೆ, ಬಹಿಷ್ಕಾರ ಮತ್ತು ದಂಡನೆಗಳು. ಕವಿ ನರಕವನ್ನು ಅನುಭವಿಸಿ ಸ್ವರ್ಗೀಯವಾಗಿ ಬದುಕಿದನು. ಅವನ ಕಾವ್ಯ ಕೂಡ ಜೀವಿಸಿತು. ನಾವು 'ನೈತಿಕತೆಯ ಎಚ್ಚರಕ್ಕಾಗಿ ಮತ್ತು ಜೀವನದ ಋಜುತ್ವಕ್ಕಾಗಿ' ಬೋದಿಲೇರ್‌ನ ಕಾವ್ಯವನ್ನು ಮೊಗೆಮೊಗೆದು ಕುಡಿಯಬೇಕೆಂದು ಪಿ.ಲಂಕೇಶ ಹೇಳುತ್ತಾರೆ. ಬದುಕಿನ ಪಾಪಕೂಪದಲ್ಲಿದ್ದು, ಕಸವನ್ನು ಪಡೆದುಕೊಂಡು ರಸಾತ್ಮಕ ಕಾವ್ಯವಾಗಿಸಿದನು. ಇಲ್ಲಿ ಲೋಕದ ಹುಚ್ಚುತನಗಳೆದುರು, ಕಾವ್ಯದ ಎಚ್ಚರರಿಕೆಗಳು ನಮಗೆ ಇಷ್ಟವಾಗುತ್ತವೆ.

(2)

'ಬೋದಿಲೇರ್ ಯಾಕೆ? ಎಂದರೆ ಅವನು ಬದುಕಿನಲ್ಲಿ ತಾನು ಸೋತು, ಕಾವ್ಯದ ಮೂಲಕ ಓದುಗರನ್ನು ಎಚ್ಚರಿಸುತ್ತಾನೆ. ಜಡಗೊಂಡ ಮನಸ್ಸುಗಳನ್ನು ದಿಗ್ಭ್ರಮೆಗೊಳಿಸುವಂತೆ ಲೋಕದ ನರಕವನ್ನು ಚಿತ್ರಿಸುತ್ತಾನೆ. ದೇವರು, ಧರ್ಮ, ನೈತಿಕತೆ, ಸಂಬಂಧ, ಸುಖ, ಸಾಂಗತ್ಯಗಳ ತುಳಿತಕ್ಕೆ ಸಿಲುಕಿ ದಿಕ್ಕೆಟ್ಟವರಿಗೆ ಅವನ ಕವಿತೆಗಳು ದಾರಿದೀಪವಾಗುತ್ತವೆ. ಎದುರುಸಿರು ಬಿಡುತ್ತಲೇ, ಎದುರಿಸುವ ದಿಟ್ಟತನವನ್ನು ತಾಳುತ್ತಾನೆ, ಬಾಳುತ್ತಾನೆ. ಅಂತಹ ಕಡೆಗೆಲ್ಲಾ ಮನುಷ್ಯನೊಬ್ಬ 'ಹಿರೋಯಿಜಮ್' ಆಗುವುದನ್ನು ಬೋದಿಲೇರ್‌ನಲ್ಲಿ ಕಾಣುತ್ತೇವೆ. ಧರ್ಮ ಮತ್ತು ನೀತಿಯ ಕಟ್ಟಳೆಗಳು ಮನುಷ್ಯನನ್ನು ಬಂಧಿಸಿ ಬಿಟ್ಟಿವೆ. ಆ ಬಂಧನದ ಬಿಡುಗಡೆಗಾಗಿ ಅವನ ಕಾವ್ಯವನ್ನು ಮೊರೆಹೋದನು. ಲೋಕದ ಇರುವು ಮತ್ತು ಜೀವನದ ಅರಿವು– ಅವುಗಳ ನಡುವಿನ ದ್ವಂದ್ವಾತ್ಮಕತೆ, ಸಂಕೀರ್ಣತೆಗಳನ್ನು ಪಾಪಪ್ರಜ್ಞೆಯಿಂದ

ಅನುಭವಿಸಿದನು. ಈ ಪಾಪದ ಹೂಗಳು ಓದುಗನಿಗೆ ವಿವೇಕದ ಫಲ ಮತ್ತು ಫಲಕಗಳನ್ನು ಪರಿಚಯಿಸುಯಿಸುವುದರಿಂದ, ಕವಿ ಮತ್ತು ಕವಿತೆಗಳು ದುಃಖದಿಂದೊಡಗೂಡಿದ ದರ್ಶನವೆನಿಸುತ್ತವೆ. ಈ ಬಗೆಯ ಕಾವ್ಯ ಸಲ್ಲಾಪಕ್ಕಾಗಿ ಬೋದಿಲೇರ್ ಬೇಕೆನಿಸುತ್ತಾನೆ.

'ಪಾಪದ ಹೂಗಳು' ಪ್ರಕಟವಾದಾಗ, ಆಶಾವಾದಿಗಳ ನಡುವೆ, ಸಾವಿಗಾಗಿ ಕಾದವನು, ತುಂಬಿದ ಪಾಪದ ಬಟ್ಟಲು– ಎಂಬ ಲಂಕೇಶರ ನಿರೂಪಣೆಗಳು ಪ್ರೇಂಚ್ ಸಾಹಿತ್ಯ ಲೋಕದ ಬೋದಿಲೇರ್ ಪೂರ್ವಕಾಲ, ವರ್ತಮಾನವನ್ನು ತಾತ್ವಿಕರಿಸುತ್ತವೆ. ಅವನು ಬದುಕಿದ ಕಾಲದಲ್ಲಿ ಪ್ರಸಿದ್ಧನಾಗಿದ್ದ ಪ್ರೇಂಚ ವಿಮರ್ಶಕ ಸೇಂಟ್‌ಬೀವ್ ಪಾಪದ ಹೂಗಳನ್ನು, ಅವಿವೇಕದ ಹೂಗಳೆಂದು ಕರೆದನು. ದೊಡ್ಡ ವಿಮರ್ಶಕನಾಗಿ ಬೀವ್ ಆಡಿದಂತಹ ಅಪಮೌಲ್ಯೀಕರಣ ಮಾತುಗಳು ಸಣ್ಣತನವನ್ನು ಸಾಧಿಸುವಂತಿದ್ದವು. ಕಾವ್ಯದ ಕುರಿತು ಸಮತೂಕದ ಮಾತುಗಳನ್ನಾಡಿದ್ದರೂ, ಬದುಕಿದ್ದಾಗಲೇ ಬೋದಿಲೇರ್ ಪ್ರಾನ್ಸಿನ ದೊಡ್ಡ ಕವಿಯಾಗುತ್ತಿದ್ದನು. ಬಡಬಾಳಿನ ಕವಿಗೆ ಗುಣಗೌರವ, ಪುರಸ್ಕಾರಗಳು ಸಿಕ್ಕಬಹುದಿತ್ತು. ಸಿಗುವುದನ್ನು ಅವನು ಬಯಸಿರಲಿಲ್ಲ. ಬಯಸಿದ ಹೆಣ್ಣಾಗಲಿ, ಪ್ರೀತಿಯಾಗಲಿ ಸಿಗಲಿಲ್ಲ. ಸಿಗಬಹುದಾಗಿದ್ದ ಕಾವ್ಯಗೌರವ, ಮರ್ಯಾದೆಗಳು ಸಿಗಲಿಲ್ಲ. ಹಾಗಾಗಿ ಜನ ಅವನನ್ನು ಶಾಪಗ್ರಸ್ಥ ಕವಿಯೆಂದು ಕರೆದರು.

ಪ್ರೇಂಚ್ ರೊಮ್ಯಾಂಟಿಕ್ ಕವಿಗಳಾದ ಅಲ್ಫ್ರೆಡ್ ವಿಗ್ನಿ, ವಿಕ್ಟರ್ ಹ್ಯೂಗೋ ಹಾಗೂ ಬೋದಿಲೇರ್ ಕಾವ್ಯದ ನಡುವೆ ಇರುವ ವ್ಯತ್ಯಾಸ, ವೈರುಧ್ಯಗಳನ್ನು ಲಂಕೇಶ ಗುರುತಿಸುತ್ತಾರೆ. ವಿಗ್ನಿ ಮತ್ತು ಹ್ಯೂಗೋ ಬಡತನ, ಅನಾಥಪ್ರಜ್ಞೆ, ಸೌಂದರ್ಯ, ಸುಖ–ದುಃಖ, ನೋವು–ನಲಿವು, ಗಂಡು–ಹೆಣ್ಣಿನ ಪ್ರೇಮವನ್ನು ಕಲ್ಪಿಸಿಕೊಂಡು ಬರೆದರು. ಓದುಗರನ್ನು ಸೆಳೆತಗೊಳ್ಳುವಂತೆ ಕಾವ್ಯವನ್ನು ವರ್ಣಿಸಿದರು. ಆದರೆ ಬೋದಿಲೇರ್ ಅದೇ ವಸ್ತು–ವಿಷಯಗಳ ಕುರಿತು ಅನುಭವಿಸಿ ಬರೆದನು. ಅವುಗಳೊಳಗೆ ಮುಳಿಗೆದ್ದು ಕಟುವಾಸ್ತವನ್ನು ಕಾವ್ಯವಾಗಿಸಿದನು. ಅದರಿಂದ ಅವನ ಕಾವ್ಯ ಓದುಗರನ್ನು ಮಂತ್ರಮುಗ್ಧರನ್ನಾಗಿಸುವ ಬದಲಿಗೆ ಎಚ್ಚರಿತು. ಬದುಕಿನ ಬಗೆಗೆ ತೀವ್ರ ವಿವೇಕವನ್ನು ಹುಟ್ಟಿಸಿತು. ಈ ದೃಷ್ಟಿಯಿಂದ ಚಾರ್ಲ್ಸ್ ಬೋದಿಲೇರ್ ಆಧುನಿಕ ಕಾಲದ ಮೊದಲ ನವ್ಯಕವಿಯಾಗಿ ವಿರಾಜಮಾನನಾಗಿದ್ದನು. ಅವನಂತೆ ಬದುಕು ಮತ್ತು ಕಾವ್ಯದ ಆಶಯ ಆಕೃತಿಯಲ್ಲಿ ಸಾಮ್ಯನಾದ ಕವಿಯೆಂದರೆ ಅಮೇರಿಕದ ಎಡ್ಗರ್ ಅಲನ್ ಪೋ. ಇಬ್ಬರು ಜೀವನದ ತಹತತ, ವಿಷಮತೆ, ಚಿತ್ತ ಚಂಚಲತೆ, ಹಣಕಾಸಿನ ಮುಗ್ಗಟ್ಟು, ತಂದೆ–ತಾಯಿ, ಗೆಳೆಯ–ಗೆಳತಿಯರಿಂದ ಪ್ರೇಮವಂಚನೆ, ಯಾತನೆಗಳ ನಿವೇದನೆಗೆ ಕವಿತೆಗಳನ್ನು ಧ್ವನಿಯಾಗಿಸಿದರು. ಬೋದಿಲೇರ್ ಕಾವ್ಯದ ಸಾಮ್ಯತೆ ಮತ್ತು ವೈಷಮ್ಯತೆಗಳನ್ನು ಒಂದೇ ಭೂಮಿಕೆಯಲ್ಲಿ ವಿವೇಚಿಸುವ ಲಂಕೇಶರ ಬರವಣಿಗೆಯು ಅವರಿಗಿದ್ದ ಲೋಕಕಾವ್ಯದ ತಿಳುವಳಿಕೆಗೆ ಸಾಕ್ಷಿಯಾಗಿದೆ.

(3)

ಚಿಕ್ಕವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಂಡು ಒಂಟಿತನ ಅನುಭವಿಸಿದ್ದ ಬೋದಿಲೇರ್, ತಾಯಿ ಮತ್ತೊಂದು ಮದುವೆಯಾಗಲು ಅನಾಥನಾದನು. ಗುರುಗಳ ಕೆಂಗಣ್ಣಿಗೆ ಗುರಿಯಾಗಿ ಶಾಲೆಯಿಂದ ಹೊರಹಾಕಲ್ಪಟ್ಟ. ಕಾನೂನು ಕಾಲೇಜು ಸೇರಿ ಶ್ರೀಮಂತರ ಮಕ್ಕಳೊಡನೆ ಮೋಜು, ಜೂಜು, ಕುಡಿತ, ವೇಶ್ಯಯರ ಸಂಗ ಮಾಡುತ್ತ ಲಂಪಟನಾದನು. ಈ ನಡುವೆ ಕಲಾ ಗೆಳೆಯರ ಪರಿಚಯದಿಂದ ಒಂದಷ್ಟು ಚಿತ್ರ ವಿಮರ್ಶೆ ಬರೆದು ಹಸಿವನ್ನು ನೀಗಿಸಿಕೊಂಡನು. ಅವನ ದಿವಾಳಿಯಾದ ಬದುಕಿನಲ್ಲಿ ಜೀನ್ ದುವಲ್ ಪ್ರವೇಶಿಸಿದಳು. ಅವನ ಯೌವನದ ಕನಸುಗಳನ್ನು ಉದ್ರೇಕಿಸುತ್ತ ನಿತ್ಯ ಸಂಚಾರಿಯಾದಳು. ಅಪ್ರಾಮಾಣಿಕಳಾದ ಅವಳಿಂದ ಪ್ರೀತಿ ಮತ್ತು ಸುಖ ಪಡೆಯುವ ಬದಲಾಗಿ ಯಾತನೆ ಮತ್ತು ನೋವುಗಳನ್ನು ಭೀಕರವಾಗಿ

ಪಡೆದುಕೊಂಡನು. ಮತ್ತೊಬ್ಬಳು ಮಾರೀ ಡೌಬ್ರನ್‌ಳಿಗೆ ಆಕರ್ಷಿತನಾದ. ಅವಳು ಮತ್ತ್ಯಾರದೋ ಪಾಲಾದಳು. ಅವನ ಗಾಯಗಳು ಮತ್ತಷ್ಟು ವಿಜ್ರಂಭಿಸಿದವು. ಆತ್ಮವು ಸಾಂಗತ್ಯದ ಹಸಿವಿಗಾಗಿ ಹಂಬಲಿಸಿ ಬರಗೆಟ್ಟು ಅಲೆದಾಡುವಾಗ ಮದಾಂ ಸಬಾಸ್ಟಿಯರ್ ಪರಿಚಿತಳಾದಳು. ಅವನು ಪರವಶನಾದನು. ಅವಳಿಗಾಗಿ ಪತ್ರ ಗೀಚಿದ, ಕವಿತೆ ಬರೆದನು. 'ಹುಡುಗಿಯರು ಪ್ರೇಮದ ಪ್ರತಿಕ್ರಿಯೆ ಮತ್ತು ಒಪ್ಪಿಗೆಗೆ ತಡವಾಗಿ ಸ್ಪಂದಿಸುತ್ತಾರಂತೆ'– ಆದರೆ ತೀವ್ರವಾಗಿ ಹಂಬಲಿಸುತ್ತಿದ್ದ, ಆತ್ಮಸಂಗಾತಕ್ಕೆ ಅವಸರ ಮಾಡುತ್ತಿದ್ದ ಬೋದಿಲೇರ್‌ನಿಗೆ ಅವಳಿಗಾಗಿ ಕಾದು ಕೂಡಲಾಗಲಿಲ್ಲ. ಮತ್ತೆ ಜೀನ್ ದುವಲ್ ಹುಡುಕಿಕೊಂಡು ಅಲೆದಾಡಹತ್ತಿದನು. ತನ್ನ ಶೋಕಿ ಖರ್ಚು ನಿಭಾಯಿಸಲು ಯಾರಾರನ್ನೋ ಹುಡುಕಿಕೊಂಡು ಹೋಗುವಾಗ, ಅವನು ಅವಳನ್ನು ಅರಸಿ ಹೊರಟನು. ಆಗ ಮದಾಂ ಸಬಾಸ್ಟಿಯರ್ ಬೋದಿಲೇರ್‌ನ ಬಯಸಿ ಬಂದಳು. ಅವನಿಗೆ ಅವಳು ಸಿಗಲಿಲ್ಲ. ಇವಳಿಗೆ ಅವನೂ ಸಿಗಲಿಲ್ಲ. ಪಾಪದ ಹೂಗಳು ಸಂಕಲನದ ಆರು ಕವಿತೆಗಳಿಗೆ ನಿಷೇಧಕ್ಕೆ ಒಳಗಾಗಿ, ಮೂನ್ನೂರು ಫ್ರಾಂಕ್ ದಂಡ ವಿಧಿಸಿದಾಗ, ಆ ದಂಡ ಕಟ್ಟಲು ಮದಾಂ ನೆರವಾಗಲು ಬಂದಳು. ಸಾವಿನಡೆಗೆ ಮುಖಮಾಡಿದ್ದ ಬೋದಿಲೇರ್ ಅವಳೆಡೆಗೆ ಮುಖಮಾಡುವ ಗೋಜಿಗೆ ಹೋಗಲಿಲ್ಲ– ಹೀಗೆ ಅವನ ವೈಯಕ್ತಿಕ ಬದುಕು ಪ್ರೀತಿಯಿಂದ ವಂಚನೆಗೊಂಡಿತು. ಮರೆಯಲೆಂದು ಜೂಜು, ಅಫೀಮು, ವೈನ್, ವೇಶ್ಯಯರ ಸಂಗ ಮಾಡಿದರೂ ಕೊನೆಗೆ ಸಿಕ್ಕಿದ್ದು ದುಃಖವೇ. ಅವನಿಗೆ ಸುಖನಿಡಿದ್ದು ಕಾವ್ಯವಷ್ಟೇ. ಲಂಕೇಶರು ಅವನ ಜೀವನವನ್ನು 'ಮೋಜಿನ ಗುಂಡಿಗೆ ಬಿದ್ದು, ತುಂಬಿದ ಪಾಪದ ಬಟ್ಟಲೆಂದು' ವ್ಯಾಖ್ಯಾನಿಸುತ್ತಾರೆ.

(4)

ಪ್ರೇಂಚ್ ಕವಿ ಚಾರ್ಲ್ಸ್ ಬೋದಿಲೇರ್‌ನ ಮರಣೋತ್ತರದಲ್ಲಿ ಅವನ ಕಾವ್ಯ ಸಂಗ್ರಹಗಳನ್ನು ಐದು ಸಂಪುಟಗಳಲ್ಲಿ ಹೊರತರಲಾಗಿದೆ: Spleen and Ideal, Parisian Scenes, Wine, Flowers of Evil, Revolt- ಈ ಕಾವ್ಯಗಳಲ್ಲಿ ವೈಯಕ್ತಿಕ ಅನುಭವಗಳನ್ನು ಸಾಮಾಜಿಕಗೊಳಿಸಿದ, ಸಾರ್ವತ್ರಿಕಗೊಳಿಸಿದನು. ಜೊತೆಗೆ ಓದುಗರನ್ನು ಬೆಚ್ಚಿಬೀಳಿಸುವ, ತಲ್ಲಣಿಸುವ, ಮುಕ್ತಮುಕ್ತ ಮಾತುಗಳ ಕಾವ್ಯದ ಧಾಟಿಯು ಗಮನ ಸೆಳೆಯುವಂತಿದೆ. ಅವುಗಳು ಒಂದು ಬಗೆಯಲ್ಲದ ಹೆಣ್ಣುಗಳ ಮಾಯಕಗಳಿಂದ ಆವೃತ್ತವಾದ ಗಂಡಿನ ಬಹುಬಗೆಯ ವೇದನೆ, ನಿವೇದನೆಗಳಂತಿವೆ. ಈ ಕವಿತೆಗಳದ್ದು ಗಂಡು ಸಂವೇದನೆ. ಆದರೆ ಅದು ಪುರುಷ ರಾಜಕಾರಣ ಮಾದರಿಯದಲ್ಲ. ಅಲ್ಲಿ ಗಂಡು ಒಂದು ಜೀವ. ಹೆಣ್ಣಿನ ದೆಸೆಯಿಂದಲೇ ಸಜೀವವಾಗಿ ತೋರುವ ಜೀವ. ವೈನು, ಹೆಣ್ಣು, ಜೂಜಿನ ಸುಖವೆಂಬ ಬಿಸಿಲುಗುದುರೆ ಸವಾರಿಗಾಗಿ ಯತ್ನಿಸುವ ಹರೆಯದ ಮನಸ್ಸಿನಲ್ಲಿ ಒಂದಲ್ಲ ಒಂದು ಬಗೆಯಲ್ಲಿ ಬೋದಲೇರ್ ಕಾವ್ಯದ ಜೀವಂತ ಪಳೆಯುಳಿಕೆಗಳು ಇದ್ದಾವೆ. ಭಗ್ನ ಕನಸುಗಳು, ಪ್ರೇಮದ ವೈಫಲ್ಯಗಳು, ಪಾಪದ ತಪ್ಪೊಪ್ಪಿಗೆಗಳು, ನೈತಿಕ ಧರ್ಮ ತೇವಲುಗಳು– ಅವನ ಕಾವ್ಯದಂಗಡಿಯಲ್ಲಿ ರುಚಿ ನೋಡಲೆಂದು ಇಟ್ಟ ಸಿಹಿತಿನಿಸುಗಳಂತಿವೆ.

ಬೋದಿಲೇರ್ ಪ್ರೇಂಚ್ ಭಾಷೆಯಲ್ಲಿ ಬರೆದ 'Les Fleurs Du mal' 1857 ರಲ್ಲಿ ಪ್ರಕಟವಾಯಿತು. 1872ರಲ್ಲಿ 'Flowers of Evil' ಹೆಸರಿನಲ್ಲಿ ಇಂಗ್ಲಿಷ್‌ನಲ್ಲಿ ಅನುವಾದಗೊಂಡಿತು. ಪಿ.ಲಂಕೇಶರು 1974ರಲ್ಲಿ 'ಪಾಪದ ಹೂಗಳು' ಶೀರ್ಷಿಕೆಯಡಿಯಲ್ಲಿ ಕನ್ನಡಕ್ಕೆ ತಂದರು. ಈ ಸಂಕಲನವನ್ನು ಬರೆದಾಗ ಬೋದಿಲೇರ್‌ನಿಗಿದ್ದಂತಹ ಬಡತನದ ಸಂಕಟಗಳು ಲಂಕೇಶರಿಗಿದ್ದವು. 'ಆಗ ತುರ್ತಾಗಿ ಐನೂರು ರೂಪಾಯಿ ಬೇಕಾಗಿದ್ದರಿಂದ ಬರೆದದ್ದು' ಎಂದು ಅವರೇ ಹೇಳಿಕೊಳ್ಳುತ್ತಾರೆ. 'ಕವಿತೆ ರೊಟ್ಟಿ ಅಲ್ಲದಿರಬಹುದು. ಆದರೆ ಹಸಿವು ನೀಗಿಸುವ ಶಕ್ತಿ ಕಾವ್ಯಕ್ಕಿರುತ್ತದೆಂಬ' ಸಾಹಿತ್ಯಸತ್ಯವನ್ನು ನಾವು ನೆನಪಿಟ್ಟುಕೊಳ್ಳಬೇಕಿದೆ. ಕಣ್ಣನ್ನೆಗಾಗಿ ಕಾದ ಮನಸ್ಸಿಗೆ

ಕಣ್ಣೋಟವೊಂದು ತೃಪ್ತಿಯನ್ನು ನೀಡುವಂತೆ, ಚೆಂದದ ಕವಿತೆ ನೀಡುವ ಸಂತೃಪ್ತಿಯು ಹಸಿವನ್ನು ತಣಿಸಬಲ್ಲದು.

ವಿಮರ್ಶಕ ಸೇಂಟ್‌ಬೀವ್ 'ಪಾಪದ ಹೂಗಳು' ತೆರೆದು ನೋಡಿದಾಗ ಕಂಡಿದ್ದು: "ಅಭಿರುಚಿಯ ಕೊರತೆ, ಅಶ್ಲೀಲ ವಸ್ತುಗಳ ಗಂಭೀರವಾಗಿ ಹೇಳಹೋಗುವ ಉದ್ಧಟತನ, ಅರ್ಥವಾಗದ ಉತ್ಕಟತೆ, ಪೋಲಿಭಾವನೆಗಳ ಹಾವಳಿ, ಹೆಂಗಸು–ಹೆಂಗಸರೊಂದಿಗೆ ಮಲಗುವ ಚಿತ್ರ, ಹೆಣ್ಣು–ಗಂಡಿನ ಕಾಮಕೇಳಿಗಳು, ಉಸಿರುಗಟ್ಟಿ ಅನುಭವದ ಮಾತುಗಳು, ಅವಿವೇಕದ ವರ್ತನೆಗಳು."(ಪಾ.ಹೂ, ಪು–7) ಬೀವ್‌ನಿಗೆ ಕಾಣದೇ ಇರುವ ಏನೋ ಹೊಸತು ಓದುಗರಿಗೆ ಕಂಡಿತು. ವಿಮರ್ಶಕರು ನಿರಾಕರಿಸಿದ್ದನ್ನು, ಓದುಗರು ಸ್ವೀಕರಿಸಿದರು. ವಿಮರ್ಶಕರಿಗೆ ಕಾಣದ್ದು ಓದುಗರಿಗೆ ಕಂಡಿತು. ಬೋದಿಲೇರ್‌ನ ಕಾವ್ಯಾಭಿವ್ಯಕ್ತಿಯ ಬಗೆಗೆ ವಿಷಾದ ಪಟ್ಟುಕೊಳ್ಳುತ್ತಿದ್ದ ಮಡಿವಂತಿಕೆಯ ಪ್ರೇಂಚ್ ಸಾಹಿತ್ಯ ವರ್ಗವು, ಕಾಲಾಂತರದಲ್ಲಿ ಪ್ರೇಂಚ್ ಕಾವ್ಯಪ್ರಿಯರು ಅವನ ಕಾವ್ಯಾಸ್ವಾದವನ್ನು ಉಂಡು ಹೆಮ್ಮೆಪಟ್ಟರು.

(5)

ಬೋದಿಲೇರ್ ಕಾವ್ಯ ಕಲ್ಪನೆ ಮತ್ತು ಭಾವನಾತ್ಮಕ ಪ್ರಧಾನವಾದುದಲ್ಲ. ಅದು ಹರೆಯದ ಶುದ್ಧ ಅನುಭವದ ಎಲ್ಲ ಕಾಲಕ್ಕೂ ತಾಜಾ ಅನಿಸುವ ನಿರೂಪಣೆ. ವಾಸ್ತವತೆಯ ವಾಸನೆಯು ಅವನ ಕಾವ್ಯದಲೆಲ್ಲ ಹರಡಿಕೊಂಡಿದೆ. ಅಲ್ಲಿ ವೈಯಕ್ತಿಕ ಲೋಕ ಇರುವಂತೆ ಸಾಮಾಜಿಕ ಲೋಕವು ಇದೆ. ಸಾಮಾಜಿಕತೆ ಎನ್ನುವುದರ ಮೇಲೆ ವ್ಯಕ್ತಿನಿಷ್ಠ ನಿಲುವುಗಳು ಸವಾರಿ ಮಾಡಿವೆ. 'ಸಮಾಜ ಎಂಬುವುದು ವ್ಯಕ್ತಿಗಳ ಬಿಡಿ ಘಟಕಗಳ ಸಂರಚನೆ' ಎಂಬ ಮಾತಿಗೆ ನಿದರ್ಶನವೆಂಬಂತೆ ಬೋದಿಲೇರ್ ಕವಿತೆಗಳಿವೆ. 'ಪಾಪದ ಹೂಗಳು' ಸಂಕಲನದ ವಸ್ತು–ವಿಷಯವನ್ನು ಗಮನಿಸಿದರೆ ನಾಲ್ಕು ಬಗೆಯ ರಚನೆಗಳು ಕಾಣಸಿಗುತ್ತವೆ. ಅವೆಂದರೆ 1.ಹೆಣ್ಣಿನ ಅನನ್ಯತೆ ಮತ್ತು ಅನ್ಯೂನ್ಯತೆ, 2.ಮಾದಕತೆಯ ರೂಪಗಳು(ಜೂಜು, ವೈನು, ಅಫೀಮು ಮತ್ತು ವೇಶ್ಯೆ), 3. ಆತ್ಮ ಮತ್ತು ಮನಸ್ಸಿನ ಸಂವಾದ 4.ಕಾಲದ ಮುಖದೊಳಗೆ ಮನುಷ್ಯರ ಚಿತ್ರಗಳು. ಸಂಕಲನದಲ್ಲಿ 26 ಕವಿತೆಗಳಿವೆ. 'ಪ್ರಾರ್ಥನೆ, ಸುಗಂಧ ದ್ರವ್ಯ'–ದಂತಹ ನಾಲ್ಕಾರೂ ಸಾಲುಗಳ ಕಿರುಕಾವ್ಯದಿಂದ ಹಿಡಿದು 'ಈ ಜಗತ್ತೊಂದನ್ನು ಬಿಟ್ಟು– ಎಲ್ಲಿಗಾದರೂ'– ಹೆಣ್ಣಿನ ಕೂದಲಲ್ಲಿ ಭೂಮಿಯ ಅರ್ಧ ಭಾಗ– ಅಂತಹ ಕವಿತೆಗಳು ಎರಡು ಪುಟಗಳಷ್ಟು ವಿಸ್ತಾರವಾಗಿವೆ. ಅಲ್ಲಿನ ಕವಿತೆಗಳು ಲಯ, ಗೇಯತೆ ಮತ್ತು ಪ್ರಾಸಪ್ರಿಯತೆಗಿಂತ ಅನುಭವದ ತೀವ್ರತೆ ವಿಸ್ಮಯಕಾರಿ ನಿರೂಪಣೆ, ಧ್ವನಿಪೂರ್ಣತೆ ಹಾಗೂ ಗದ್ಯ ಬಂಧುರತೆಯಿಂದ ಹೆಚ್ಚು ಗಮನ ಸೆಳೆಯುತ್ತವೆ. ಪಿ.ಲಂಕೇಶರು 'ಬೋದಿಲೇರ್‌ನ ಕಾವ್ಯಸೂಕ್ಷ್ಮತೆಯನ್ನು ಅದೇ ರೀತಿಯಾಗಿ ಮತ್ತೊಂದು ಭಾಷೆಯಲ್ಲಿ ತರಲು ಸಾಧ್ಯವಿಲ್ಲದಿರುವುದರಿಂದ, ಬೇರೆ ಭಾಷೆಯ ಅನುವಾದಕರಂತೆ ತಾವು 'ಪದ್ಯಗಳನ್ನು ಗದ್ಯಾನುವಾದ' ಮಾಡಿರುವುದಾಗಿ ಹೇಳಿಕೊಂಡಿದ್ದಾರೆ. ಕಥನಾತ್ಮಕತೆ ಹೊರತಾಗಿ ಕಾವ್ಯವನ್ನು ಗದ್ಯಾನುವಾದಗೊಳಿಸುವ ಆದರ್ಶ ಅನುವಾದದ ಭಾಷೆಯನ್ನಿಲ್ಲಿ ಲಂಕೇಶರು ಪ್ರಯೋಗಿಸಿದ್ದಾರೆ. ಸಂಕಲನದಲ್ಲಿ ಬಳಸಿಕೊಂಡಿರುವ ರೇಖಾಚಿತ್ರಗಳು ಕವಿತೆಗಳ ಅನುಭವಗಳನ್ನು ಮತ್ತಷ್ಟು ತೀವ್ರ ಮತ್ತು ಪ್ರಖರಗೊಳಿಸಿವೆ.

ಹೆಣ್ಣಿನ ಬಗೆಗೆ ಕವಿಗಳು ಬರೆಯುವಾಗ ಅಭಿರುಚಿ ಮತ್ತು ಅನುಭವವನ್ನು ದಾಖಲಿಸುತ್ತಾರೆ. ಹಲವರ ವರ್ಣನೆಯಲ್ಲಿ ರೂಪನಿಷ್ಠತೆ, ಕೆಲವರ ನಿರೂಪಣೆಯಲ್ಲಿ ಗುಣಗ್ರಾಹ್ಯತೆಯನ್ನು ಕಾಣುತ್ತೇವೆ. ಬೋದಿಲೇರ್ ಕಾವ್ಯವು ***'ಹೆಣ್ಣಿನ ಅನನ್ಯತೆ ಮತ್ತು ಅನ್ಯೂನ್ಯತೆ'*** ತೆರೆದಿಡುತ್ತದೆ. ಅದರಲ್ಲಿ ರೂಪಶೀಲತೆಯಷ್ಟೇ ಗುಣಗ್ರಾಹಿಯು ವ್ಯಕ್ತವಾಗಿದೆ. ಈ ಕಾರಣದಿಂದ ಕವಿತೆಗಳು ಇಷ್ಟವಾಗುತ್ತವೆ. ಅಲ್ಲಿ ಬರುವ ಹೆಣ್ಣುಗಳು ನೈತಿಕತೆ, ಶೀಲ, ಪ್ರೇಮನಿಷ್ಠತೆ, ಮಡಿವಂತಿಕೆಗಳನ್ನು ಮೀರಿದವರು. ಹಾಗಾಗಿಯೇ

ಅವರು 'ಪಾಪದ ಹೂಗಳಂತೆ' 'ಕೆಸರಲ್ಲಿ ಅರಳಿದ ನೈದಿಲೆ, ಕಮಲಗಳಂತೆ' ಕಂಗೊಳಿಸುತ್ತಾರೆ. ಬೋದಿಲೇರ್ ಚಿತ್ರಿಸುವ ಗೆಳತಿಯರು, ಪ್ರಿಯತಮೆಯರು, ವೇಶ್ಯಯರು, ದಾರಿಹೋಗುವ ಸುಂದರಿಯರು– ವೈವಿಧ್ಯಮಯವಾಗಿದ್ದಾರೆ. ಈ ರಚನೆಗಳನ್ನು ಓದಿದಾಗ 'ವಯಸ್ಕರ ಕವಿತೆಗಳು' ಎನಿಸುವುದರಲ್ಲಿ ಅಚ್ಚರಿಯೆನಿಲ್ಲ. ಆದರೆ ಅಶ್ಲೀಲತೆಯ ವಾಸನೆಯು ಕವಿತೆಯ ಶಬ್ದ, ಸಾಲುಗಳಲ್ಲಿ ಸುಳಿಯದಂತೆ ಎಚ್ಚರ ವಹಿಸಲಾಗಿದೆ. ಹಾಗೆ ನೋಡಿದರೆ ಕವಿಗೆ ಶೀಲ, ಅಶ್ಲೀಲತೆಯ ವಿಂಗಡನೆಯೇ ಅಸಮರ್ಪಕ ಮತ್ತು ಅಪ್ರಬುದ್ಧ ಅನಿಸಿದಂತಿದೆ. ಕವಿ ಅರ್ಥೈಸಲಾರದ್ದನ್ನು, ಓದುಗ ಕವಿತೆಯನ್ನು ಆಡಿಕೊಳ್ಳಬಾರದಷ್ಟೇ.

ಬೋದಿಲೇರ್ ಚಿತ್ರಿಸುವ ಹೆಣ್ಣುಲೋಕವು ಎರಡು ಮಾದರಿಯಲ್ಲಿದೆ. ಮೊದಲ ಪ್ರಿಯತಮೆ ಜೀನ್ ದುವಲ್, ಮೂರನೇ ಗೆಳತಿ ಮದಾಂ ಸಬಾಸ್ಟಿಯರ್– ಬಗೆಗಿನ ಕವಿತೆಗಳು ನಿರ್ದಿಷ್ಟ ರೀತಿಯ ಹೆಣ್ಣುಗಳ ಅನಿರ್ದಿಷ್ಟ ನಿವೇದನೆ, ವೇದನೆ ಮತ್ತು ಹೆಣ್ಣು–ಗಂಡಿನ ವಾಸನೆಗಳನ್ನು ದಾಖಲಿಸುತ್ತವೆ. ಇನ್ನೊಂದು ಮಾದರಿಯ ಕಾವ್ಯದಲ್ಲಿ ಸುಂದರಿಯರು, ವೇಶ್ಯಯರು, ಮನಚುಂಬಿನಿಯರು ಕಾಣಿಸಿಕೊಳ್ಳುತ್ತಾರೆ. ಅವರ ಕುರಿತಾದ ಕಾವ್ಯಗಳು ಸಂಬಂಧೇತರವಾಗಿರುವುದರಿಂದ, ವೈಯಕ್ತಿಕ ಪರಿಧಿಯ ಮೀರಿರುವುದರಿಂದ ಆ ಕವಿತೆಗಳು ಮೊದಲನೇ ಮಾದರಿಗಿಂತ ಚೇತೋಹಾರಿಯಾಗಿವೆ. 'ಸಾರ್ವಜನಿಕ ಹೆಣ್ಣು'ಗಳನ್ನು ವರ್ಣಿಸುವಾಗ ಕವಿ ಕಣ್ಣುಗಳು ಅರಳುವುದರಿಂದ ಅಂತಹ ಕಾವ್ಯವು ವಿಸ್ತಾರವು, ವೈವಿಧ್ಯವು ಆಗಿದೆ.

'ಭಾವಚಿತ್ರ, ಸುಗಂಧ ದ್ರವ್ಯ, ದುಃಖದ ಪದ, ಮೆಚ್ಚುವ ಹೆಣ್ಣು– ಕವಿತೆಗಳು ***ಜೀನ್ ದುವಲ್*** ಕುರಿತಾಗಿವೆ. "ಬದುಕು ಮತ್ತು ಕಲೆಯನ್ನು ಕೊಲ್ಲುವ ಕಡುಕೊಲೆಗಾರ ಕಾಲನೇ, ನನ್ನ ಸುಖ–ಸಂಪತ್ತನಂಥ ಅವಳ ನೆನಪನ್ನು ಮಾತ್ರ ನೀನು ಸಾಯಿಸಲಾರೆ" (ಪು–44) ಎನ್ನುವ ಕವಿ ಕಾಲದ ಉತ್ಕಟ ಕರಾಳತೆಯನ್ನು ಮೀರಬಲ್ಲ ಅವಳ ಪ್ರೇಮ ಮತ್ತು ನೆನಪುಗಳ ಅಮರತ್ವವನ್ನು ದಾಖಲಿಸುತ್ತಾನೆ. ಸಾವು ಮತ್ತು ನೋವಿಗೆ ಎಲ್ಲವನ್ನು ಬೂದಿಯಾಗಿಸುವ ಕ್ರೂರಶಕ್ತಿಯಿದೆ. ಅವುಗಳ ಹೊಡೆತದಿಂದ ಜೀವನ ಖಾಲಿ ಅನಿಸುತ್ತದೆ. ಆ ಖಾಲಿತನದ ಖಜಾನೆಯನ್ನು ದುವಲ್‌ಳ ನೆನಪುಗಳ ದೀವಿಗೆಯಿಂದ ತುಂಬಿಕೊಳ್ಳುತ್ತಾನೆ. ಆ ಕಾರಣದಿಂದಲೇ 'ಓ ನನ್ನ ಚೈತನ್ಯವೇ' ಎನ್ನುತ್ತಾನೆ ಬೋದಿಲೇರ್. ಆ ಸಂಬೋಧನೆಯಲ್ಲಿ ಕವಿ ಹಾಗೂ ಕವಿಗೆಳತಿಯ 'ಭಾವಚಿತ್ರ'ವು ಅನಾವರಣವಾಗಿದೆ. ಪ್ರೇಮದ ಬಂಧುತ್ವವೇ ಅದರ ಗಂಧ, ಸುಗಂಧ ತತ್ವ. ಅಂತಹ ಒಲುಮೆಯನ್ನು ಕವಿಯು 'ಮಾಂತ್ರಿಕ ವಾಸನೆ'ಗೆ ಹೋಲಿಸುತ್ತಾನೆ. ಅನುರಾಗದ ವಾಸನೆ, ದೇಹದ ಗಂಧವಾಗುವ ಜೊತೆಗೆ ತೊಟ್ಟ ಉಡುಪುಗಳಿಗೂ ವಿಸ್ತಾರವನ್ನು ಪಡೆಯುವ ವಿಕ್ರಮವನ್ನು ಚಿತ್ರಿಸಲಾಗಿದೆ. "ಅವಳ ವೆಲ್ವೆಟ್, ಮಸ್ಲಿನ್ ಉಡುಪಿನ ಜೊತೆ ಬೆರೆತ ಯೌವನದ ವಾಸನೆಯಲ್ಲಿ ಉಣ್ಣೆಯ ವಾಸನೆ ಕೂಡ ಇರುತ್ತದೆ" (ಪು–55) ಎನ್ನುವ ಕವಿಯು ಒಟ್ಟು ಒಲವಿನ ವಾಸನೆಯು ಜೀವಂತ ಪರಿಮಳದಿಂದ ತುಂಬಿರುವುದನ್ನು ನಿವೇದಿಸುತ್ತಾನೆ. ಅಂತಹ ಕಡೆಗೆ ಹೆಣ್ಣು ದೇಹನಿಷ್ಠತೆಯಿಂದ ಗುಣಗೌರವದೆಡೆಗೆ ಮೇಲೆರುತ್ತಾಳೆ.

"ನಿನ್ನ ಮುಖದಿಂದ ಸುಖ ಮಾಯವಾದಾಗ ನನ್ನ ಪ್ರೇಮ ಉಕ್ಕುತ್ತದೆ. ಮತ್ತು ನಿನ್ನ ಹೃದಯ ದಿಕ್ಕೆಟ್ಟಾಗ; ನಿನ್ನ ವರ್ತಮಾನಕ್ಕೆ ಭೂತದ ಮೋಡ ಕವಿದಾಗ; ನಿನ್ನ ವಿಶಾಲ ಕಣ್ಣು ರಕ್ತದಂಥ ಬೆಚ್ಚಗಿನ ಕಣ್ಣೀರಿಂದ ತುಂಬಿಕೊಂಡಾಗ." (ಪು–56) ಎಂಬ 'ದುಃಖದ ಪದ' ಕವಿತೆ ಸಾಲುಗಳು ಅವಳಿಗಿರುವ ಅಥವಾ ಜೀವನಕ್ಕಿರುವ ಸುಖ ದುಖದ ಎರಡು ಆಕೃತಿಗಳನ್ನು ವ್ಯಾಖ್ಯಾನಿಸುತ್ತವೆ. ದುಃಖ, ವಿರಹ, ರೋಗ, ನೋವು, ಸಾವುಗಳ ಆಳದಲ್ಲಿ ಪ್ರೇಮ ಉಕ್ಕುತ್ತದೆನ್ನುತ್ತಾನೆ ಕವಿ. ನಾನು ಮತ್ತು ನೀನು ಎಂಬಲ್ಲಿ ತಾನು ದುಃಖದ ಗಂಡು ರೂಪಕವಾಗಿ, ಅವಳನ್ನು ಸುಖದ ನಿಧಿಯಾಗಿ ಹೆಣ್ಣನ್ನು

ನಿರೂಪಿಸುತ್ತಾನೆ. ಪ್ರೇಮಿಗಳ ಅಭೇದತೆಯು ಸುಖ–ದುಃಖಗಳ ಅಭೇದತೆಯನ್ನು ಸಾಂಕೇತಿಸುತ್ತದೆ. ಬೋದಿಲೇರ್‌ನ ನೆಚ್ಚಿನ ಹೆಣ್ಣಾದ ಜೀನ್ ದುವಲ್ ಸೌಂದರ್ಯ ಸಿರಿಯನ್ನು ಉಪಮೆಗಳಲ್ಲಿ ಹಿಡಿದಿಡಲೆತ್ನಿಸುತ್ತಾನೆ. "ಕಗ್ಗತ್ತಲ ರಾತ್ರಿ ನೀನು ಮೈಖೆಲೆಂಜಲೋ ಪುತ್ರಿ; ಟೈಟನ್ ದೈತ್ಯನಿಗಾಗಿ ನಿನ್ನ ವಿಚಿತ್ರ ಭಂಗಿಗಳಲ್ಲಿ ಮೋಡಿ ಹಾಕುವ ಮುತ್ತು ಹಡೆವಾಕೆ" (ಪು–58) ಕವಿಯ ಮೆಚ್ಚುವ ಹೆಣ್ಣು ಆಗಿರುವ ಅವಳ ಬಾಹ್ಯ ಐಸಿರಿಯನ್ನು ಚಿತ್ರಿಸುತ್ತಾನೆ.

ಮೇಲಿನ ನಾಲ್ಕು ಕವಿತೆಗಳ ಕೇಂದ್ರ ಜೀನ್ ದುವಲ್. ಆದರೆ ಪ್ರೇಮಿಸುವ ಯಾರ ಹೆಣ್ಣಾದರೂ ಆಗಿರಬಹುದಾದ ಸಾಧ್ಯತೆಯನ್ನು ಕವಿ ವಿವರಿಸುತ್ತಾನೆ. ಅವನು ಅವಳಿಂದ ಪಡೆದುಕೊಂಡುದಕ್ಕಿಂತ ಕಳೆದುಕೊಂಡಿದ್ದು ಹೆಚ್ಚು. ಕಳೆದುಕೊಳ್ಳುವುದು, ಕಳೆದು ಹೋಗುವುದು– ಪ್ರೀತಿಯೆಂದು ಭಾವಿಸಿದ್ದ ಕವಿಯು 'ಕಾಣೆಯಾಗದಂತೆ ಕವಿತೆ'ಯಲ್ಲಿ ಅವಳ ವ್ಯಕ್ತಿತ್ವನ್ನು ಎರಕಹೊಯ್ಯುತ್ತಾನೆ. ಮೊದಲ ಪ್ರೇಮ ಗಾಢವೂ, ತೀವ್ರವೂ ಆಗಿರುವುದರಿಂದ– ಬೋದಿಲೇರ್‌ನಿಗಿದ್ದ ಅವಳ ಮೇಲಿದ್ದ ಶುದ್ಧ ಪ್ರೇಮದ ಹಂಬಲವು, ವೈಫಲ್ಯದಲ್ಲೂ ಅಷ್ಟೇ ಪರಿಶುದ್ಧವಾಗಿದೆ. ಸಂಚಾರಿ ಸ್ವಭಾವದ ಅವಳು, ಸ್ಥಾಯಿ ಸ್ವಭಾವದ ಅವನು– ತಮ್ಮ ಪ್ರೇಮದಲ್ಲಿ ರಸನಿಮಿಷಗಳನ್ನು ಸಾರ್ಥಕಗೊಳಿಸುವಲ್ಲಿ ವಿಫಲರಾಗುತ್ತಾರೆ. 'ಪ್ರೇಮ ದಕ್ಕದೇ ಇರಬಹುದು, ಅದರ ನೆನಪು ದಕ್ಕೆ ದಕ್ಕುತ್ತದೆ'– ಎನ್ನುವುದು ಬೋದಿಲೇರ್‌ನ ವಿಷಯದಲ್ಲೂ, ಕಾವ್ಯದ ನಿಜವಾಗಿ ತೋರಿದೆ.

ಜೀನ್ ದುವಲ್‌ಳ ಗೈರಿನಲ್ಲಿ, ಅಗಲಿಕೆಯಲ್ಲಿ, ಪ್ರೇಮದಾಹದಲ್ಲಿ ಬೋದಿಲೇರ್ ಪ್ರಾನ್ಸಿನ ಸಿನಿಮಾ ನಟಿ ***ಮದಾಂ ಸಬಾಸ್ಟಿಯರ್***‌ಳನ್ನು ಅರಸುತ್ತಾನೆ. ಹಾಗಾಗಿ ಕವಿ ಅವಳನ್ನು 'ಅತ್ಯಂತ ಉಲ್ಲಾಸದ ಆಕೆಗೆ' ಎನ್ನುತ್ತ, ತನ್ನ ಪ್ರೇಮವನ್ನು 'ನಿವೇದನೆ' ಮಾಡುತ್ತಾನೆ. "ನಿನ್ನ ಶಿರ, ನಿನ್ನ ಚಲನೆ, ನಿನ್ನ ನಡಿಗೆ– ಎಲ್ಲ ಮೋಹಕ ಹೊಲದಂತಿದೆ, ಸ್ವಚ್ಛ ಆಕಾಶದಲ್ಲಿ ತಣ್ಣನೆ ಗಾಳಿಯ ಹಾಗೆ ನಗೆ ನಿನ್ನ ಮುಖದ ಮೇಲೆ ಲಾಸ್ಯವಾಡುತ್ತಿದೆ" (ಪು–46) ಕವಿತೆಯು ಹೆಣ್ಣಿನ ದೇಹಕೇಂದ್ರಿತವಾಗಿದೆ. ಆ ಕಾರಣದಿಂದ ಗಂಡಿನ ಮೋಹಕ ಮನಸ್ಸಿನ ಚಿತ್ರಣವು ಪ್ರಧಾನವಾಗಿದೆ. ದೇಹದ ಚೈತನ್ಯ ಪ್ರೇಮದ ಚೈತನ್ಯ ಕೂಡಾ ಆಗಿರುತ್ತದೆ– ಎನ್ನುವ ತರಹದ ನಿರೂಪಣೆಯನ್ನು ಕವಿಯು ಅನುಸರಿಸಿದ್ದಾನೆ. ವಯಸ್ಕ ಸಹಜ ದೇಹದಾಹ, ತೀವ್ರ ಹಂಬಲದ ಭಾವಗಳು ಕವಿತೆಯ ಭಾವವಾಗಿ ಹೊರಹೊಮ್ಮಿದೆ. "ಎಲ್ಲ ಮುರಿದು ಬೀಳುತ್ತದೆ, ಹೌದು ಪ್ರೇಮ, ಸೌಂದರ್ಯ ಎಲ್ಲವೂ ವಿಸ್ಮೃತಿಯ ಆಳಕ್ಕೆ ಸರಿದು ಹೋಗುತ್ತದೆ" (ಪು–49) ಎಂದು ಅನಿಸಿಬಿಡುತ್ತದೆ. ಮನಸ್ಸು ಕಟ್ಟುವ ಗೂಡುಗಳು, ಕಾಲದ ಬಿರುಗಾಳಿಗೆ ಸಿಲುಕಿ ಬೀಳುತ್ತವೆ. ಆದರೆ ಆ ಗೂಡು ಕೂಡಿ ಕಟ್ಟಿದ ನೆನಪುಗಳು ಕವಿಯನ್ನು ಗಾಢವಾಗಿ ಆವರಿಸಿವೆ. ಕವಿತೆಯಲ್ಲಿ ಅವು ಇಂಬು ಪಡೆದುಕೊಂಡಿವೆ. ನಟನೆಯಲ್ಲಿ ಸದಾ ಬ್ಯೂಜಿ ಆಗಿರುವ ಮದಾಂ, ಸದಾ ಪ್ರೇಮಿಸುವುದರಲ್ಲಿ ಬ್ಯೂಜಿ ಆಗಿರುವ ಬೋದಿಲೇರ್. ಅಂತಹ ವಿರುದ್ಧ ದ್ರುವಗಳಲ್ಲಿ ಪ್ರೇಮಿಸುವ ಮನಸ್ಸುಗಳು ಒಂದಾದರೂ, ದಾಹದ ದೇಹಗಳು ಒಂದಾಗುವುದಿಲ್ಲ. ಕವಿ ಪ್ರೇಮಿಯಾಗಿ ಸೋಲುತ್ತಾನೆ, ಕವಿ ಕವಿತೆಯಾಗಿ ಗೆಲ್ಲುತ್ತಾನೆ. ಕೊನೆಕೊನೆಗೆ ಪ್ರೇಮದ ಸಾಫಲ್ಯವೆಂದರೆ ಇಷ್ಟೇ ಅನಿಸಿಬಿಡುತ್ತದೆ.

ಬೆಕ್ಕು, ದಾರಿಯಲ್ಲಿ ಹಾದು ಹೋದ ಹೆಣ್ಣಿಗೆ, ಹೆಣ್ಣಿನ ಕೂದಲಲ್ಲಿ ಭೂಮಿಯ ಅರ್ಧಭಾಗ, ಸುಂದರ ಹಡಗು, ಪೂರ್ತಿ, ಇವಳು ಸೀಮೆ ಕುದುರೆ– ಕವಿತೆಗಳಲ್ಲಿ ಬರುವ ಹೆಣ್ಣುಗಳಿಗೆ ನಿರ್ದಿಷ್ಟ ವ್ಯಕ್ತಿತ್ವವಿಲ್ಲ. ಈ ಕಾರಣದಿಂದಲೇ ಈ ಕವಿತೆಗಳು ಹೆಚ್ಚು ಪ್ರಫುಲ್ಲವಾಗಿವೆ. ಹೆಣ್ಣಿನ ಚೆಲುವು, ಸೊಬಗು, ಒಲವು, ವೈಯ್ಯಾರ, ಬಿಂಕ ಬಿನ್ನಾಣ, ಸಲುಗೆ, ಸೆಳೆತ, ಸ್ಪರ್ಶ, ಮಿಲನ, ಕಂಪನ, ರಿಂಗಣ, ಮೌನ, ನಡಿಗೆ, ನಡತೆ– ಹೀಗೆ ಹೆಣ್ಣಜೀವದ ದೆಸೆಯಿಂದ ಗಂಡಿಗೆ ಒದಗಬಹುದಾದ ಅನಂತ ಸಾಧ್ಯತೆಗಳನ್ನು ಕವಿ ಮನಸ್ಸಾರೆ ಚಿತ್ರಿಸುತ್ತಾನೆ. 'ಗಂಡು ಮಾತ್ರವೇ ಹೆಣ್ಣನ್ನು

ಪರಿಪೂರ್ಣ ಮತ್ತು ಅಪೂರ್ವಮಯವಾಗಿ ಅರ್ಥಮಾಡಿಕೊಳ್ಳಬಲ್ಲ' ಎನ್ನುವುದಕ್ಕೆ ಬೋದಿಲೇರ್ ಕವಿತೆಗಳು ಸಾಕ್ಷಿ ನುಡಿಯುವಂತಿವೆ. ಬೇಲೂರು ಸಿಲಾಬಾಲಿಕೆಯರು ಕವಿತೆಗಳಾಗಿ ಅವತರಿಸಿದರೆ ಹೇಗಿದ್ದೀತು? ಎನ್ನುವುದಕ್ಕೆ ಉತ್ತರದಂತಿವೆ ಕವಿತೆಗಳು. ಪ್ರೇಮ ಸಹಜ–ಅಸಹಜ, ಸೂಕ್ಷ್ಮ–ಒರಟುತನದ ಅನುಭವಗಳು ಕಾವ್ಯವಾಗಿ ಮೈದಾಳಿವೆ. ಅಲ್ಲಿ ಕಾಣಿಸುವ ಹೆಣ್ಣುಗಳು, ಓದುಗರು ನೋಡಿರಬಹುದಾದ, ಕಾಣಬಹುದಾದ ಸುಂದರಿಯರಾಗಿದ್ದಾರೆ. ಅವರ ಚಿತ್ರಣಗಳು ನೈತಿಕ ಅನೈತಿಕತೆಗಳ ನಡುವೆ ತೂಗುತ್ತಿದ್ದರು– ಅವು ಹೆಣ್ಣುಜೀವವನ್ನು ಆಸ್ವಾದಿಸುವ ಪ್ರಾಮಾಣಿಕ ಲೌಕಿಕ ಅನುಭಾವಿಯ 'ವಯಸ್ಕರ ಕವಿತೆಗಳಂತೆ' ಕಾಣಿಸುತ್ತವೆ.

'ಬೆಕ್ಕು' ಕವಿತೆಯು ನಾಲ್ಕು ಕಾಲಿನ ಪ್ರಾಣಿಯ ಚಿತ್ರಣವಾಗಿ ಕಾವ್ಯ ಆರಂಭವಾದರೂ, ಕವಿತೆ ಬೆಳೆದಂತೆ ಆ ಬೆಕ್ಕಿಗೆ ಎರಡು ಕಾಲುಗಳು ಮೂಡುತ್ತವೆ. ಆಗ ಆ ಬೆಕ್ಕು ಕವಿಯ ಮನದೊಳಗೆ ಸುಳಿದಾಡುವ ಬೆಕ್ಕಾಗಿ ಬಿಡುತ್ತದೆ. ಹೆಣ್ಣಿನ ಗುಣಗಳನ್ನು ಬೆಕ್ಕಿನಲ್ಲಿ ಸಮೀಕರಿಸಲಾಗಿದೆ. 'ದಾರಿಯಲ್ಲಿ ಹಾದುಹೋದ ಹೆಣ್ಣಿಗೆ' ಕಾವ್ಯ ದ.ರಾ ಬೇಂದ್ರೆಯವರ 'ಒಂದೇ ಬಾರಿ ನಿನ್ನ ನೋಡಿ...' ರಚನೆಯನ್ನು ನೆನಪಿಸುತ್ತದೆ. ಕಂಡು ಕಾಣೆಯಾದ ಆ ಆಕೃತಿಯ ದೆಸೆಯಿಂದ ಕವಿಗೆ ಪುನರ್‌ಜನ್ಮ ಒದಗಿದೆ. ಕಣ್ಣೋಟಗಳು ಸಂಧಿಸಿದರೆ ಪ್ರೇಮವು ಕಾಣ್ಕೆಗೊಳ್ಳಬಹುದಾದ ಸಾಧ್ಯತೆಯನ್ನು ಕವಿತೆಯಲ್ಲಿ ನಿರೂಪಿಸಲಾಗಿದೆ. ಹೆಣ್ಣಿನ ಕೇಶಿರಾಶಿಯ ಬಗೆಗೆ ಗಂಡಿಗೆ ವಿಚಿತ್ರ ಕೂತುಹಲ ಮತ್ತು ಆಕರ್ಷಣೆ ಕೂಡ. ಹಾಗಾಗಿ ಬೋದಿಲೇರ್‌ನಿಗೆ 'ಹೆಣ್ಣಿನ ಕೂದಲಲ್ಲಿ ಭೂಮಿಯ ಅರ್ಧ ಭಾಗ' ಅನಿಸುತ್ತದೆ. ಕವಿತೆಯು ದ್ರೌಪದಿ ಸಿರಿಮುಡಿಯನ್ನು, ಜನಪದ ಕಥೆಗಳ ರೇಷ್ಮೆ ಕೂದಲಿನ ರಾಣಿಯರನ್ನು ನೆನಪಿಸುವಂತಿದೆ. ಕೂದಲಿನ ಬಗೆಗಿನ ದರ್ಶನದಲ್ಲಿ ಲೋಕಸೌಂದರ್ಯವೇ ಕಾಣಿಸುತ್ತದೆ. ಕವಿಗೆ ಕೂದಲಿನ ಮೇಲೆ ಮೋಹ, ಅದನ್ನು ಕಚ್ಚುವಲ್ಲಿಗೆ, ತಿನ್ನುವಲ್ಲಿನವರೆಗೂ ಉತ್ಕಟತೆಯನ್ನು ತಲುಪುತ್ತದೆ. ಸುಂದರ ಹಡಗು– ಕವಿತೆ ತರುಣ ಮಾಟಗಾತಿಯೊಬ್ಬಳ ಚಿತ್ರಣವಾಗಿದೆ. ಅವಳ ಲಂಗ ಮತ್ತು ಅಂಗದ ವಿವರಣೆಯಲ್ಲಿ ಕವಿತೆ ವಿಸ್ತಾರಗೊಂಡಿದೆ. ಹೆಣ್ಣಿನ ದೇಹದ ಯಾವ ಭಾಗ ಇಷ್ಟ ಎನ್ನುವ ಪ್ರಶ್ನೆಗೆ ಉತ್ತರ ರೂಪಿಯಾಗಿ 'ಪೂರ್ತಿ' ಕವಿತೆಯಿದೆ. ದೇಹದ ಒಟ್ಟು ಅವಯವಗಳ ಸಾವಯವ ಸಂಬಂಧದ ಅನನ್ಯತೆಯನ್ನು ಇಲ್ಲಿ ನಿರೂಪಿಸಲಾಗಿದೆ. 'ಇವಳು ಸೀಮೆ ಕುದುರೆ' ಕಾವ್ಯವು ದೇಹಸಿರಿಯನ್ನು ವರ್ಣಿಸುತ್ತದೆ. 'ಅವಳೊಂದು ಮದ್ದು, ಮಹಾಜಾದೂ ! ಒಟ್ಟಿನಲ್ಲಿ ಭಯಂಕರ ಸುಂದರಿ" (ಪು–71) – ಇಲ್ಲಿನ ಕವಿತೆಗಳು ಹೆಣ್ಣಿನ ದೇಹವನ್ನು ಚಿತ್ರಿಸುವಲ್ಲಿ ಪುನರಾವರ್ತನೆಯಾಗಲಿ, ಸವಕಲು ರೂಪಕಗಳಾಗಲಿ ಬಳಸಲಾರವು. ಕವಿಯ ಪ್ರತಿಯೊಂದು ಅನುಭವವು ವಿಭಿನ್ನವು, ವಿಶಿಷ್ಟವು ಆಗಿದೆ. ಹೆಣ್ಣಿನ ಪ್ರೇಮದ ಸವಿಯಿಂದ ವಂಚಿತವಾದ, ಕಡುಮೋಹಿಯ ರಸಭರಿತ ಅನುಭವ ಆಕಾಶದಲ್ಲಿ ತೇಲಾಡುವ ಮೋಡಗಳಂತೆ ಕವಿತೆಗಳ ಅನಿಸುತ್ತವೆ. ಬೋದಿಲೇರ್ ಇಷ್ಟವಾಗುವುದು ತನ್ನ ಅನುಭವಗಳ ಬೆಚ್ಚಿಬೀಳಿಸುವ ಹಾಗೆ ನಿರೂಪಿಸುವ ಕಾರಣದಿಂದಲೇ.

(6)

ಪಾಪದ ಹೂಗಳು– ಸಂಕಲನದ ಎರಡನೇ ಬಗೆಯ ರಚನೆಗಳನ್ನು ***'ಮಾದಕತೆಯ ರೂಪಗಳು'*** (ಜೂಜು, ವೈನು, ಅಫೀಮು ಮತ್ತು ವೇಶ್ಯೆ) ಎಂದು ಕರೆಯಬಹುದು. ಮನುಷ್ಯರು ಒತ್ತಡವನ್ನೋ, ವ್ಯಥೆಯನ್ನೋ, ಇನ್ನಾವುದರಿಂದಲೋ ಪಾರಾಗಲು 'ಮಾದಕ ವಸ್ತುಗಳ' ಸಹಚಾರ್ಯ ಬೆಳೆಸಿಕೊಳ್ಳುತ್ತಾರೆ. ಬಿಡುಗಡೆಗಾಗಿ ಅನುಸರಿಸಿದ ಮಾರ್ಗಗಳೇ ಕಾಲಾಂತರದಲ್ಲಿ ಬಂಧನದ ಮಹಾಮಾರ್ಗವಾಗಿ ಬಿಡುತ್ತವೆ. ವೈನಿನಂಗಡಿ, ವೇಶ್ಯಾಗ್ರಹಗಳ ಬಗೆಗೆ ಬರೆಯುವ ಕವಿಯು– ಅವುಗಳ ಸಾಮಾಜಿಕ ಸ್ವರೂಪವನ್ನು ಅನಾವರಣ ಮಾಡುತ್ತಾನೆ. ಬೋದಿಲೇರ್ ವಾಸ್ತವ ಬದುಕಿನಲ್ಲಿ ತುಂಬ

ಹತ್ತಿರದಿಂದ ವೈನು, ವೇಶ್ಯರನ್ನು ಕಂಡಿದ್ದ, ಅನುಭವಿಸಿದ್ದ; ಅಲ್ಲಿ ತಮ್ಮ ಜೀವಂತಿಕೆಯನ್ನು ಕಂಡುಕೊಳ್ಳುವ ಕೂಳರನ್ನು, ತಲೆಹಿಡುಕರನ್ನು ಗಮನಿಸಿದ್ದನ್ನು ಕವಿತೆಯ ರಂಗಮಂಟಪದಲ್ಲಿ ಪ್ರದರ್ಶಿಸುತ್ತಾನೆ. ಸಂಕಲನದಲ್ಲಿರುವ ಅಂತಹ ಕಾವ್ಯಗಳೆಂದರೆ– ಇಲ್ಲಿಂದ ದೂರದಲ್ಲಿ, ಜೂಜು. ಏಕಾಂಗಿಯ ವೈನ್ ಮತ್ತು ಸದಾ ಕುಡಿದಿರು.

ಹೆಣ್ಣಿನ ಏಕಾಂತ ಸ್ಥಳವನ್ನು ಸಾರ್ವಜನಿಕಗೊಳಿಸುವ ಚಟುವಟಿಕೆಯೆಂದರೆ ವೇಶ್ಯಾಗಾರಿಕೆ. ಹೊಟ್ಟೆ ಹಸಿವು ಮತ್ತು ದೇಹದ ಹಸಿವು– ಹೀಗೆ ಸದಾ ಉರಿಯುವ ಮನುಷ್ಯರ ಹಸಿವುಗಳ ತಣಿಸಲೆಂದು ಸೃಷ್ಟಿಸಿಕೊಂಡ ವಿಲಕ್ಷಣ ವಿಕೃತ ವೃತ್ತಿಯಿದು. ಪ್ರಾನ್ಸಿನಂತಹ ಮುಂದುವರೆದ ದೇಶಗಳಲ್ಲಿ ಅದು ಲೋಕಮಾನ್ಯ. ಕವಿ ಆ ಲೋಕವನ್ನು ಸಮಸ್ಯೆಯಾಗಿ ಚಿತ್ರಿಸುವುದಿಲ್ಲ. ಬದಲಾಗಿ ಕರಾಳತೆಯಲ್ಲೂ ಕುಶಲವಾಗಿ ಗಿರಾಕಿಗಳನ್ನು ಸೆಳೆಯುವಲ್ಲಿನ ವೃತ್ತಿಯ ನೈತಿಕತೆಯನ್ನು ಹೇಳುವುದು ಮುಖ್ಯವಾಗುತ್ತದೆ. "ನೆತ್ತಿಯಿಂದ ಕಾಲುಬೆರಳವರೆಗೆ ಅವಳ ಮೈಗೆ ಸುವಾಸನೆ ಎಣ್ಣೆ ಹಚ್ಚಿದೆ. ಮೂಲೆಯಲ್ಲಿ ಕೆಲವು ಹೂ ಮೂರ್ಛೆ ಹೋಗಿವೆ" (ಪು–40) ಮೂರ್ಛೆ ಹೋಗಿರುವ ಹೂವು– ವೇಶ್ಯೆಯ ದಯನೀಯ ಸ್ಥಿತಿಯನ್ನು ವಿಷಾದದಿಂದ ಚಿತ್ರಿಸುತ್ತದೆ. 'ಜೂಜು' ಕವಿತೆಯು ವೇಶ್ಯೆಯರ ಚಟುವಟಿಕೆಯನ್ನು ಮತ್ತು ಅಲ್ಲಿಗೆ ಬರುವ ಸೋಗುಮಾರಿ ಮೇಲ್ವರ್ಗದ ಮಂಡಿವಂತರ ಹೊಲಸುತನವನ್ನು ವಿವರಿಸುತ್ತದೆ. ಸೂಳೆಯಾಗುವಲ್ಲಿ ಬಡತನವೇ ಮೂಲ ಕಾರಣ, ಆದರೆ ಅದನ್ನು ತೆರೆಮರೆಯಲ್ಲಿ ಕಾಪಿಟ್ಟುಕೊಂಡು ಬರುವ ವರ್ಗ ಮಾತ್ರ ಶ್ರೀಮಂತರದು ಎಂಬ ನಿಲುವನ್ನು ಕವಿಯು ಇಲ್ಲಿ ತಾಳುತ್ತಾನೆ. ಈ ಎರಡು ಕವಿತೆಗಳು ಭಾರತೀಯ ಇಂಗ್ಲಿಷ್ ಕವಿ ಜಯಂತ್ ಮಹಪಾತ್ರರವರ 'ದ ಹಂಗರ್' ಕಾವ್ಯವನ್ನು ನೆನಪಿಸುತ್ತವೆ.

'ಏಕಾಂಗಿಯ ವೈನ್' ರಚನೆಯು 'ಹೆಂಗಸಿನ ಕಣ್ಣಿನ ಅಸಹಜ ನೋಟ'ದ ಚಿತ್ರಣದೊಂದಿಗೆ ಶುರುವಾಗುತ್ತದೆ. ಎರಡನೇ ಭಾಗದಲ್ಲಿ ಕತ್ತಲು ಬೆಳಕು ತಾಕುವ ತಾಣದಲ್ಲಿ ಸಂಗೀತ ಸೇರಿಕೊಳ್ಳುತ್ತದೆ. "ಓ ದ್ರಾಕ್ಷಾರಸವೇ ಅವನಿಗೆ ಆಸೆ, ತಾರುಣ್ಯ, ಜೀವ ಕೊಡುತ್ತೀ. ಎಲ್ಲಕ್ಕಿಂತ ಮೀಗಿಲಾಗಿ ಧಿಮಾಕನ್ನ. ಅತ್ಯಂತ ದರಿದ್ರರನ್ನೂ ಕಾಪಾಡಿ ದೇವರ ಸಮಾನನನ್ನಾಗಿಸುವ ಧಿಮಾಕು ಕೊಡುತ್ತೀ, ದ್ರಾಕ್ಷಾರಸ."(ಪು–43). ವೈನ್ ದೆಸೆಯಿಂದ ದರಿದ್ರನು ದೇವರ ಸಮಾನನಾಗುವ, ಅಬಲರು ಸಬಲರನ್ನು ಮೀರಿಸುವಂತಾಗುವ– ಅದರ ಶಕ್ತಿಯನ್ನು ಬೆರಗಿನಿಂದ ವಿವರಿಸಲಾಗಿದೆ. ದ್ರಾಕ್ಷಾರಸವು ಏಕಾಂತವನ್ನು, ಹೆಣ್ಣಿನ ಸಾಂಗತ್ಯವನ್ನು ಮತ್ತಷ್ಟು ರಸಾತ್ಮಕಗೊಳಿಸುವ ಸಂಗತಿಯನ್ನು ಕವಿಯು ತೆರೆದಿಡುತ್ತಾನೆ. 'ಸದಾ ಕುಡಿದಿರು' ಕಾವ್ಯವು ಕುಡಿತದ ಸೀಮಿತಾರ್ಥವನ್ನು ದಾಟಿ ಅನಂತವಾಗುತ್ತದೆ. ಬದುಕಿನಲ್ಲಿ ಎಲ್ಲವನ್ನು ಹೀರಿಕೊಂಡು ಬದುಕನ್ನು ರಸಾತ್ಮಕವಾಗಿಸಿಕೊಳ್ಳಬೇಕಾದ ಅವಶ್ಯಕತೆಯನ್ನು ಪ್ರತಿಪಾದಿಸುತ್ತದೆ. ಹಾಗಾಗಿ ಬೋದಿಲೇರ್ "ಮನುಷ್ಯ ಸದಾ ಕುಡಿದ ಸ್ಥಿತಿಯಲ್ಲಿರಬೇಕು. ಅದೊಂದೇ– ಒಂದು ಪರಿಹಾರ ಸಮಸ್ಯೆಗೆ, ಕಾಲನ ಅಸಹ್ಯ ಭಾರ ನಿನ್ನ ಭುಜಗಳನ್ನು ಮುರಿಯದಂತೆ, ನಿನ್ನ ತಲೆಯನ್ನು ತಗ್ಗಿಸದಂತೆ ನೋಡಿಕೊಳ್ಳುವುದಕ್ಕಾಗಿ, ಬಿಡದೆ ಸುಮ್ಮನೇ ಕುಡಿಯುತ್ತಿರು" (ಪು–69) ಎನ್ನುತ್ತಾನೆ. ವೈನ್, ಕಾವ್ಯ, ಋಜುತ್ವಗಳ ಕುಡಿಯಬೇಕೆಂದು ಉಲ್ಲೇಖಿಸಿ ಹೇಳುತ್ತಾನೆ. ಅಷ್ಟಕ್ಕೆ ಅವನಿಗೆ ಸಮಾಧಾನವಾಗುವುದಿಲ್ಲ. ಮತ್ತೆ 'ಯಾವುದನ್ನಾದರೂ ಕುಡಿಯಬೇಕು ಮಾತ್ರ', 'ನಿನಗೆ ಇಷ್ಟ ಬಂದದನ್ನು ಕುಡಿ'– ಸಾಲುಗಳಲ್ಲಿ 'ಕುಡಿತಕ್ಕೆ' ಅನಂತ ಅರ್ಥವನ್ನು ನೀಡುತ್ತಾನೆ. ಲೋಕದ ಒಳಿತು, ಒಲವು, ಸಿರಿ, ಸುಖ, ಸೊಬಗು, ಸೌಭಾಗ್ಯಗಳೆಲ್ಲ– ಕುಡಿತದ ದೆಸೆಯಿಂದ ಸಾಧ್ಯವಾಗುತ್ತವೆಂಬ– ಒಟ್ಟು ಬದುಕಿನ ಸಕಾರಾತ್ಮಕತೆಯನ್ನು 'ಕುಡಿತ'ದಲ್ಲಿ ಹಿಡಿದಿಡುತ್ತಾನೆ ಕವಿ. ಈ ಬಗೆಯ ಭವ್ಯತೆಯ ಅರ್ಥದಿಂದ ಕವಿತೆ

ಓದುಗರಿಗೆ ಅಚ್ಚರಿ ಮತ್ತು ಅರಿವನ್ನು ಹೆಚ್ಚಿಸುತ್ತದೆ. ಅಂತಹ ಕವಿತೆಗಳ ಕಾರಣದಿಂದ ಬೋದಿಲೇರ್ ಜಗತ್ತಿನ ಮೊದಲ ನವ್ಯ ಕವಿಯಾಗಿ ಗುರುತಿಸಿಕೊಂಡಿದ್ದನು.

(7)

ಮಾನವರು ಮೂರ್ತ ದೇಹದ ಅಮೂರ್ತ ಶಕ್ತಿಗಳೆಂದರೆ ***ಆತ್ಮ ಮತ್ತು ಮನಸ್ಸು.*** ದಾರ್ಶನಿಕರ, ಅನುಭಾವಿಗಳ, ಮನೋವಿಜ್ಞಾನಿಗಳ ನಂತರ ಅವುಗಳ ಕುರಿತಾಗಿ ಹೆಚ್ಚು ಚಿಂತನೆ ಮಾಡಿದವರು ಕವಿಗಳು. ಬೋದಿಲೇರ್ ಕವಿತೆಗಳಲ್ಲಿನ ಮನಸ್ಸು ಗಂಡಿನ ರೂಪದಲ್ಲಿ, ಆತ್ಮ ಹೆಣ್ಣಿನ ಸ್ವರೂಪದಲ್ಲಿ ಬರುತ್ತದೆ. ಮನಸ್ಸು ಮತ್ತು ಆತ್ಮದ ಸಂಭಾಷಣೆಯನ್ನು ಚಿತ್ರಿಸುವ ಕವಿತೆ– 'ಈ ಜಗತ್ತೊಂದನ್ನು ಬಿಟ್ಟು ಎಲ್ಲಿಗಾದರೂ'. ಇದು ಸಂಕಲನದ ಅತ್ಯುತ್ತಮ ರಚನೆ ಕೂಡ. ಜಗತ್ತೊಂದು ಆಸ್ಪತ್ರೆ, ರೋಗಸ್ಥಿತಿಯ ಬದುಕು. ಸುಖವಾಗಿ ಬದುಕಲು ಮಗ್ಗುಲು ಹೊರಳಿಸುವ, ಸ್ಥಳ ಬದಲಿಸುವ ಮನಸ್ಥಿತಿಯಿದೆ. ಲೋಕದ ಬೇರೆ ಬೇರೆ ಲೋಭದ, ಮೋಜಿನ ತಾಣಗಳಿಗೆ ಹೋಗೋಣವೆ? ಎಂದು ಮನಸ್ಸು ಆತ್ಮವನ್ನು ಕೇಳುತ್ತದೆ. ಆ ದೆಸೆಯಿಂದ ತನಗೆ ದೋಚಿದ್ದನ್ನು ಹೇಳುತ್ತದೆ. ಆದರೆ ಆತ್ಮ ಗಾಢ ಮೌನದಲ್ಲಿದೆ. ಈ ನಡುವೆ 'ತಾನು ಎಲ್ಲಿ ಇಲ್ಲವೋ, ಅಲ್ಲಿ ಮನಸ್ಸಿಗೆ ಸುಖಕರ ಅನಿಸುತ್ತದೆ'. ಕವಿತೆಯುದ್ದಕ್ಕೂ ಮಾತಾಡುವ ಮನಸ್ಸು, ಮಂಕಾಗಿರುವ ಆತ್ಮವು– ಕವಿತೆಯ ಕೊನೆಯಲ್ಲಿ ಆಸ್ಫೋಟಿಸಿದಂತೆ ನುಡಿಯುತ್ತದೆ: 'ಎಲ್ಲಿಗಾದರೂ ಸರಿ– ಈ ಜಗತ್ತೊಂದನ್ನು ಬಿಟ್ಟು' ಹೋಗೋಣ ಎನ್ನುತ್ತದೆ. ಈ ಸಾಲು ಗೋಪಾಲಕೃಷ್ಣ ಅಡಿಗರ 'ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೇ ಜೀವನ' ಎಂಬುದನ್ನು ನೆನಪಿಸುತ್ತದೆ. ಮನುಷ್ಯರು ಇರುವಲ್ಲಿ ಇಲ್ಲವಾಗುವ ಅಥವಾ ಇಲ್ಲದ ಲೋಕದಲ್ಲಿ ಇರುವಿಕೆಗೆ ಹಂಬಲಿಸುವುದಾದರೂ ಏಕೆ? ಎಂಬ ಪ್ರಶ್ನೆ ಮೂಡುತ್ತದೆ. ಈ ಲೋಕದ ಹೊರತಾದ ಲೋಕವೊಂದಿದೆ ಎಂಬ ಮನುಷ್ಯ ಕಲ್ಪನೆಗಳು ಸ್ವರ್ಗ, ನರಕಗಳನ್ನು ಸೃಷ್ಟಿಸಿದವು. 'ಇಲ್ಲಿರುವುದು ಸುಮ್ಮನೆ, ಅಲ್ಲಿರುವುದು ನಮ್ಮನೆ' ತರಹದ ಧರ್ಮದ ಅತಿರೇಕಗಳು ಆ ಕಲ್ಪನೆಗಳು ಫಲಶೃತಿ. ಅಂತಹ ಮನಸ್ಥಿಯನ್ನು ಅಲ್ಲಮಪ್ರಭು 'ಕೊಟ್ಟ ಕುದುರೆಯನೇರಲರಿಯದೆ ಮತ್ತೊಂದು ಕುದರೆಯ ಬಯಸುವವರು ವೀರರೂ ಅಲ್ಲ, ಧೀರರೂ ಅಲ್ಲ' ಎನ್ನುತ್ತಾರೆ. ವಾಸ್ತವ ಲೋಕದ ಅಪೇಕ್ಷೆಗಳು ಈಡೆರದೆ ಸೋತ ಬೋದಿಲೇರ್ ಮನಸ್ಸು, ಅವನ ಆತ್ಮವು ಅವಾಸ್ತವ ಲೋಕವನ್ನು ಅಪೇಕ್ಷಿಸುವುದರಲ್ಲಿ ತಪ್ಪೇನಿಲ್ಲ ಅನಿಸುತ್ತದೆ.

'ಬೇಸರ' ಕಾವ್ಯವು ನಾನು–ನೀನುಗಳ ಅಸ್ತಿತ್ವದ ಅಲುಗಾಟವನ್ನು ಚಿತ್ರಿಸುತ್ತದೆ. ನಾನು ಎಂಬ ಅಹಂ ರಾಜತ್ವ, ಐಶ್ವರ್ಯವನ್ನು ಹೊಂದಿದರೂ, ಅದು ಹೆಣ್ಣಿಗನಂತಿದೆ. ತಾರುಣ್ಯದಲ್ಲೂ ಅರಳುಮರಳು ಆವರಿಸಿದೆ. ಕವಿತೆಯಲ್ಲಿ ನಾನು ಎನ್ನುವ ಸರ್ವನಾಮವು 'ಅವನು' ಎಂಬ ಪುರುಷವಾಚಕವಾಗಿ ವ್ಯಕ್ತಗೊಂಡಿದೆ. ಮನುಷ್ಯನಿಗೆ ಮನಸ್ಸೆ ಶತ್ರುವಾಗಿರುವ ಆಯಾಮವು 'ಶತ್ರು' ಕವಿತೆಯಲ್ಲಿದೆ. ವಯಸ್ಕ ಮನಸ್ಸಿಗೆ ಸಿಡಿಲಾಘಾತಗಳು ಹೊಡೆದು ಬಸವಳಿದಿದೆ. ತನ್ನ ಸಮಾಧಿ ಸ್ಥಿತಿಯನ್ನು ಕೂಡಿಕೊಂಡಿದೆ. ಅಂತಹ ಮನಸ್ಸು ಬದುಕಿನ ರಕ್ತವನ್ನು ಹೀರಿ, ಜೀವವನ್ನು ಕರಗಿಸಿ ಬಿಡುತ್ತದೆಂದು ಕವಿ ಹೇಳುತ್ತಾನೆ. ಪ್ರೇಮದಲ್ಲಿ ವಿಫಲವಾದ ಭಾವನೆಗಳು, ಸಾಕ್ಷಾತ್ಕಾರವನ್ನು ಕಾಣದ ಯೌವನ– ಅದರಿಂದ ಬೋದಿಲೇರ್‌ನಿಗೆ ತನ್ನ ಹುಚ್ಚು ಮನಸ್ಸೆ 'ಶತ್ರು'ವೆನಿಸಿದೆ. ವೈನ್, ವೇಶ್ಯೆ, ಅಫೀಮಿನಂತಹ ಹೊರಗಿನ ಸಂಗತಿಗಳಲ್ಲಿ ಚೈತನ್ಯ, ಜೀವಂತಿಕೆಯನ್ನು ಕಾಣುವ ಕವಿಯು ತನ್ನೊಳಗಿನ ಮನಸ್ಸಿನ ಬಗ್ಗೆ ನಕಾರಾತ್ಮಕ ನಿಲುವುಗಳನ್ನು ವ್ಯಕ್ತಪಡಿಸುವುದು ಸೋಜಿಗವೆನಿಸುತ್ತದೆ.

ಬೋದಿಲೇರ್‌ನನ್ನು ಕಾಡಿದ ಸಂಗತಿಗಳಲ್ಲಿ ***'ಕಾಲ'***ವೂ ಒಂದು. ಕಾಲದ ಹರಿವು ಮನುಷ್ಯರ ಅರಿವಿಗೆ ನಿಲುಕಲಾರದು. ಆದರೆ ಕವಿಗಳು ಕಾಲದ ಕುದರೆಯನ್ನು ತಮ್ಮ ಶಬ್ದಜಾಲದಲ್ಲಿ ಹಿಡಿದಿಡುವ

ಯತ್ನವನ್ನು ಅಭಿಜಾತ ಕಾಲದಿಂದಲೂ ಮಾಡುತ್ತ ಬಂದಿದ್ದಾರೆ. ಪ್ರೇಮ ಸಂವೇದನೆಯ ಈ ಕವಿಯಲ್ಲಿ ಶರತ್ಕಾಲವು ವಿಷಾದವನ್ನು ಧ್ವನಿಸಿದರೆ, ವಸಂತವು ಸಂಭ್ರಮವನ್ನು ಸಾಕ್ಷೀಭೂತಗೊಳಿಸುತ್ತದೆ. 'ಬೆಳಗು' ಕಾವ್ಯವು ಸೂರ್ಯೋದಯದ ಗಳಿಗೆಯ ಚಟುವಟಿಕೆಯನ್ನು ದಾಖಲಿಸುತ್ತದೆ. ಲೋಕದಲ್ಲಿ ಎಷ್ಟು ಜನರಿದ್ದಾರೋ, ಅಷ್ಟೊಂದು ಬಗೆಯಲ್ಲಿ ಬೆಳಗು ಇರುವಿಕೆಯನ್ನು ಚಿತ್ರಿಸುತ್ತಾನೆ. ಜಗತ್ತಿನ ಮುಂಜಾವಿನ ಚಲ್ಲಾಪಿಲ್ಲೆಯಾದ ಚಿತ್ರಣಗಳನ್ನು ವಿವರಿಸುವಲ್ಲಿ ತೀವ್ರತೆಯಿಲ್ಲ. ದ.ರಾ ಬೇಂದ್ರೆ– ಮೂಡಲ ಮನೆ– ಕವಿತೆಯಂತೆ, ಕುವೆಂಪು– ಬಾ ಪಾಲ್ಗುಣ ರವಿ ದರ್ಶನಕೆ– ರೀತಿಯ ಸೌಂದರ್ಯ ದರ್ಶನವು ಈ ಕವಿತೆಯಲ್ಲಿಲ್ಲ. ಇಲ್ಲಿ ನಗರದ ಬೆಳಗಿನ ಚಲನವಲನಗಳನ್ನು ನಿರೂಪಿಸುವುದರಿಂದ, ಬೆಳಗು ಬೀದಿದೀಪಗಳಂತೆ ಕೃತಕವೆನಿಸಿದೆ.

ಬೆಳಗು ಕವಿತೆಗೆ ಹೋಲಿಸಿದರೆ 'ಸಂಜೆ' ಕಾವ್ಯವು ಚೇತೋಹಾರಿಯಾಗಿದೆ. ದುಡಿದು ಬಳಲಿದವರಿಗೆ, ಪುಸ್ತಕದಲ್ಲಿ ತಲೆಯಿಟ್ಟಿರುವ ಪಂಡಿತರಿಗೆ, ವೇಶ್ಯಾಗ್ರಹದತ್ತ ಧಾವಿಸುವ ತಲೆಹಿಡುಕರಿಗೆ, ಸಂಗೀತ ಕಛೇರಿಯಲ್ಲಿ ಗೊಣಗುವವರಿಗೆ, ಜೂಜಿನ ಜನರಿಗೆ, ಕನಿಕರವಿಲ್ಲದ ಕಳ್ಳರಿಗೆ– ಹೀಗೆ ಎಷ್ಟೊಂದು ಜನರೋ, ಅಷ್ಟೊಂದು ಸಂಜೆಗಳಿರುತ್ತವೆ– ಎನ್ನುವ ರೀತಿಯಲ್ಲಿ ಬೋದಿಲೇರ್ ನಿರೂಪಿಸುತ್ತಾನೆ. ಆಸ್ಪತ್ರೆಯಲ್ಲಿರುವ ರೋಗಿಗಳಿಗೆ ನೋವು ಉಲ್ಬಣಗೊಳ್ಳುವ ಸಮಯ ಕೂಡ– ಸಂಜೆಯೇ ಆಗಿದೆ. ನಗರದ ಸಂಜೆಯು ಸಮೃದ್ಧವಾಗಿರುತ್ತದೆ– ಎನ್ನುವುದಕ್ಕೆ ಈ ಕವಿತೆ ನಿದರ್ಶನದಂತಿದೆ. ದ.ರಾ ಬೇಂದ್ರೆ– 'ಮುಗಿಲ ಮಾರಿಗೆ ರಾಗ ರತಿಯ ನಂಜ ಏರಿತ್ತ, ಆಗ ಸಂಜೆ ಆಗಿತ್ತ' ಕವಿತೆಯಂತೆ ಸಂಜೆಯ ಸೌಂದರ್ಯ ದರ್ಶನವನ್ನು ಮಾಡಿಸುತ್ತದೆ. ಬೋದಿಲೇರ್‌ನ 'ಸಂಜೆ' ಕವಿತೆಯು ಆ ಸಮಯದ ಮನುಷ್ಯರ ಚಟುವಟಿಕೆಗಳನ್ನು ಹೇಳುವುದರಲ್ಲಿ ಕವಿಯು ಆಸಕ್ತವಾಗಿದ್ದಾನೆ.

ಪಾಪದ ಹೂಗಳಿಂದ ಓದುಗರು ಕಲಿಯುವುದೇನಿದೆ? ಎಂದರೆ ವಾಸ್ತವತೆಯ ಕರಾಳ ಮುಖವನ್ನು ಎದುರಿಸಿ ಬದುಕುವುದು ಕಲಿಯುವುದಿದೆ. ದಾಂಪತ್ಯ, ವಿವಾಹವೇತರ ಪ್ರೇಮದ ವಂಚನೆ, ಸೋಲುಗಳಲ್ಲೂ– ಬದುಕನ್ನು ಪ್ರೀತಿಸುವ ಪಾಠ ಕಲಿಯುವುದಿದೆ. ನೈತಿಕವೋ ಅನೈತಿಕವೋ ಒಟ್ಟಿನಲ್ಲಿ ಮನುಷ್ಯನೊಬ್ಬನ ಪ್ರಾಮಾಣಿಕ ಅನುಭವಗಳನ್ನು ಕಾವ್ಯವಾಗಿಸುವ ಕಲೆಯನ್ನು ಕಲಿಯುವುದಿದೆ. ತಾನು ಅನುಭವಿಸಿದ ನರಕದಿಂದ, ಪಾಪದ ಪುಳಕದಿಂದ ಓದುಗರನ್ನು ಎಚ್ಚರಿಸುತ್ತಾನೆ ಬೋದಿಲೇರ್. ಧರ್ಮ, ದೇವರು, ಮುಕ್ತಿ, ತತ್ವ, ಸಿದ್ಧಾಂತಗಳ ಗೋಡವೆಗಳಿಲ್ಲದ ಈ ಕಾವ್ಯವು ಶುದ್ಧ ಲೌಕಿಕವಾದುದು. ಈ ಕಾವ್ಯ ವಿದ್ವಾಂಸ ವಿಮರ್ಶಕರಿಗಾಗಿ, ಪಂಡಿತರಿಗಾಗಲಿ ಬರೆದುದಲ್ಲ. 'ಕಾವ್ಯದ ಆಸ್ವಾದಕರಿಗಾಗಿ, ಕಾವ್ಯಕ್ಕೂ ಜೀವನಕ್ಕೂ ಇರಬಹುದಾದ ಗಾಢ ಸಂಬಂಧವನ್ನು ಅನುಭವಿಸಿ ಬರೆದಂತಹ ಕವಿತೆಗಳಿವು'– ಎಂಬ ಲಂಕೇಶರ ಅಭಿಪ್ರಾಯವು ಕವಿತೆಗಳಿಗೆ ಮುಖಾಮುಖಿಯಾಗಿ, ಅವುಗಳ ಎದೆ ಮತ್ತು ದೇಹವನ್ನು ಸ್ಪರ್ಶಿಸಿದಾಗ ಸತ್ಯವೆನಿಸುತ್ತದೆ.

**ಆಕರ ಗ್ರಂಥ**


- ಚಾರ್ಲ್ಸ್ ಬೋದಿಲೇರ್. (2008). *ಪಾಪದ ಹೂಗಳು.* (ಅನು, ಲಂಕೇಶ್,ಪಿ). ಲಂಕೇಶ್ ಪ್ರಕಾಶನ.
- ಚಾರ್ಲ್ಸ್ ಬೋದಿಲೇರ್. (1872). *ಫ್ಲವರ್ಸ್ ಆ ಈವಿಲ್.* (ಅನು, ಕೀತ್ ವಾಲ್ಡ್ರಾಪ್). ವೆಸ್ಲೆಯನ್ ಯೂನಿವರ್ಸಿಟಿ ಪ್ರೆಸ್.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 22-26
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಕನ್ನಡ ಸಾಹಿತ್ಯ ಚಳವಳಿ ಮತ್ತು ಸಂವೇದನೆ

**ಡಾ. ಭೀಮಾಶಂಕರ ಜೋಷಿ ಕೂಡಲಗಿ**
ಸಹಾಯಕ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ವಿಭಾಗ, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ.

***Abstract:***
*"ವಿನಾಶ್ರಯಂ ನ ಶೋಭಂತೇ ಪಂಡಿತಾ ವನಿತಾ ಲತಾಃ" ಎಂಬ ಪ್ರಾಚೀನ ಉಕ್ತಿಯಂತೆ ಆಶ್ರಯವಿಲ್ಲದೆ ಪಂಡಿತರೂ, ವನಿತೆಯರೂ, ಲತೆಗಳೂ ಶೋಭಿಸುವುದಿಲ್ಲ. ಕನ್ನಡ ಸಾಹಿತ್ಯವನ್ನು ಸಿಂಹಾವಲೋಕನದಿಂದ ನೋಡಿದ ಪಕ್ಷದಲ್ಲಿ ಬಹುಮಟ್ಟಿಗೆ ಈ ಮಾತು ನಿಜವೆನಿಸುತ್ತದೆ. ಅರಮನೆ ಗುರುಮನೆಗಳಲ್ಲಿ ಶ್ರೀಮಂತರ ಆಶ್ರಯದಲ್ಲಿ, ಮಠ ಮಂದಿರಗಳಲ್ಲಿ, ಬಸದಿ ವಿಹಾರಗಳಲ್ಲಿ ಕನ್ನಡ ಸಾಹಿತ್ಯ ನಂದನವನವು ಸೊಂಪಾಗಿ ಬೆಳೆದು ಬಂದಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ರಾಜರು ಗ್ರಂಥ ರಚನೆಗೆ ಪ್ರೋತ್ಸಾಹ ನೀಡಿದ್ದಷ್ಟೇ ಅಲ್ಲದೆ ತಾವೂ ಸ್ವತಃ ಕಾವ್ಯರಚನೆಯನ್ನು ಮಾಡಿದ್ದಾರೆ.*

***Keywords:*** *ಕನ್ನಡ ಸಾಹಿತ್ಯ, ಸಾಹಿತ್ಯ ಚಳವಳಿ ಮತ್ತು ಸಂವೇದನೆ, ಕನ್ನಡ ಸಾಹಿತ್ಯ ಚರಿತ್ರೆ.*

**ಪೀಠಿಕೆ**

ಕನ್ನಡ ನಾಡು "ಭೂಪತಿಯು ಕವಿಯಾಗಿ ಕವಿಯು ಚಮೂಪತಿಯಾಗಿ" ಮೆರೆದಿರುವ ಹೆಮ್ಮೆಯ ನಾಡಾಗಿದೆ. ಕನ್ನಡ ನಾಡಿನ ರಾಜರು ಕವಿಗಳಾಗಿ, ಕವಿಗಳಿಗೆ ಆಶ್ರಯದಾತರಾಗಿ, ಕಾವ್ಯ ಆಸ್ವಾಧಿಸುವ ಸಹೃದಯರಾಗಿ, ಸಹೃದಯರಿಗೆ ಸಾಹಿತ್ಯ ತಲುಪಿಸುವ ಹೃದಯವಂತರಾಗಿ ಸಾರ್ಥಕ ಸೇವೆಯನ್ನು ಮಾಡಿದ್ದಾರೆ. ಆದ್ದರಿಂದಲೇ ಕನ್ನಡ ಸಾಹಿತ್ಯ ಇಂದು ಶ್ರೀಮಂತವೂ ಸಮೃದ್ಧವೂ ಆಗಿ ಬೆಳೆದಿದೆ. ಸಣ್ಣ ಪುಟ್ಟ ಪಾಳೆಯಗಾರರಿಂದ ಹಿಡಿದು ಹಿರಿಯ ಚಕ್ರವರ್ತಿಗಳವರೆಗೆ, ಕಿರಿಯ ರಾಜ್ಯಾಧಿಕಾರಿಗಳಿಂದ ಹಿಡಿದು ದಂಡನಾಯಕ, ಸಚಿವರವರೆಗೆ ಎಲ್ಲರೂ ಈ ಸಾಹಿತ್ಯ ಶಾರದೆಯ ಪೂಜೆಯಲ್ಲಿ ಮುಖ್ಯ ಪಾತ್ರವಹಿಸಿದ್ದಾರೆ. ಅನೇಕ ರಾಜವಂಶಗಳೂ, ಪಾಳೆಯಗಾರರ ವಂಶಗಳು ತಮ್ಮ ಶಕ್ತಿಗೆ ತಕ್ಕಂತೆ ಸಾಹಿತ್ಯಕ್ಕೆ ಆಶ್ರಯಕೊಟ್ಟಿವೆ. ಇವರೆಲ್ಲರೂ ಬಾಲ್ಯಾವಸ್ಥೆಲ್ಲಿದ್ದ ಕನ್ನಡವನ್ನು ಪೋಷಿಸಿ ಬೆಳೆಸಿದರು. ಕವಿ ರಾಜರ ನಡುವಣ ಸುಮಧುರ ಸಂಬಂಧ ಸಮೃದ್ಧವಾದ ಸಾಹಿತ್ಯ ಸೃಷ್ಟಿಗೆ ಸಾಕ್ಷಿಯಾಗಿದೆ. ಕವಿಗಳಿಗೆ ರಾಜಸ್ಥಾನ ಅಗತ್ಯ; ರಾಜರುಗಳ ಕೀರ್ತಿಗೆ ಕವಿಗಳು ಅನಿವಾರ್ಯ. ರಾಜರನ್ನು ಆಶ್ರಯಿಸಿ ಕವಿಗಳು ಬೆಳೆದರೆ ಕವಿಗಳಿಗೆ ಆಶ್ರಯ ಕೊಟ್ಟು ರಾಜರು ಉಳಿದರು. ರಾಜಾಶ್ರಯವನ್ನು ಪಡೆದ ಕನ್ನಡ ಸಾಹಿತ್ಯವಾಹಿನಿ ನಾನಾ ಮುಖವಾಗಿ ಹರಿದಿದೆ. ಪದ್ಯಕಾವ್ಯ, ಗದ್ಯಕಾವ್ಯ, ಚಂಪೂಕಾವ್ಯ, ಶಾಸ್ತ್ರಕಾವ್ಯ, ಹೀಗೆ ಹಲವು ವಿಧದ ಸಾಹಿತ್ಯ ಬೆಳೆದು ಬಂದಿದೆ. ಜೈನ, ವೀರಶೈವ, ಬ್ರಾಹ್ಮಣ, ಕ್ಷತ್ರಿಯ ಮೊದಲಾದ ವಿವಿಧ ಮತ, ಜಾತಿಗಳಿಗೆ ಸೇರಿದ ಕವಿಗಳು ಕಾವ್ಯಗಳನ್ನು ರಚಿಸಿದ್ದಾರೆ. ಆದ್ದರಿಂದಲೇ

***Please cite this article as:*** ಭೀಮಾಶಂಕರ ಜೋಷಿ ಕೂಡಲಗಿ. (2024). ಕನ್ನಡ ಸಾಹಿತ್ಯ ಚಳವಳಿ ಮತ್ತು ಸಂವೇದನೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್*, 3(3), 22–26

ಕನ್ನಡ ನುಡಿಯ ತೋಟ ಬಗೆ ಬಗೆಯ ಕಾವ್ಯ ಪುಷ್ಪಗಳಿಂದ ಕಂಗೊಳಿಸುತ್ತಿದೆ.

ಜೀವನವನ್ನು ಸುಗಮವಾಗಿ ಸಾಗಿಸಲು ಹಾಗೂ ಅರ್ಥೈಸಿಕೊಳ್ಳಲು ಅನುಕೂಲಕರವಾದ ಮಾರ್ಗವೇ ಸಾಹಿತ್ಯ ಅಧ್ಯಯನ. ಭಾಷೆ ಬೆಳವಣಿಗೆ ಹೊಂದಿದಂತೆಲ್ಲ ಸಾಹಿತ್ಯವೂ ಅಂಬೆಗಾಲಿಡಲು ಪ್ರಾರಂಭಿಸಿತು. ಎಲ್ಲದಕ್ಕೂ ಮೂಲ ಬುನಾದಿ ಜನಪದವೇ ಆಗಿದೆ. ಜನಪದರು ತಮ್ಮ ಮನೋರಂಜನೆಗಾಗಿ, ಆಯಾಸವನ್ನು ಪರಿಹರಿಸಿಕೊಳ್ಳಲು ದುಡಿಯುವ ಸಂದರ್ಭದಲ್ಲಿ, ಹಬ್ಬ ಹರಿದಿನಗಳಲ್ಲಿ ತಮ್ಮ ಮನಸ್ಸಿನ ಭಾವನೆಗಳನ್ನು ಹೊರಹಾಕುತ್ತಿದ್ದರು. ಯಾರೂ ಕೂಡಾ ಕುಳಿತುಕೊಂಡು ಅದಕ್ಕಾಗಿ ಸಮಯವನ್ನು ಮೀಸಲಿಟ್ಟು ಸಾಹಿತ್ಯ ರಚಿಸಿರಲಿಲ್ಲ; ಹಾಗಾಗಿ ಇದು ಮೌಖಿಕವಾಗಿ ಬೆಳೆದು ಬಂದ ಸಾಹಿತ್ಯವಾಯಿತು. ಹಾಗಾದರೆ ಕನ್ನಡ ಸಾಹಿತ್ಯದಲ್ಲಿ ಕಾವ್ಯ ರಚನೆ ಯಾವಾಗ ಆರಂಭವಾಯಿತೆಂದು ಹೇಳುವುದು ಕಷ್ಟ. ಒಂಬತ್ತನೆಯ ಶತಮಾನಕ್ಕಿಂತ ಹಿಂದಿನ ಯಾವ ಗ್ರಂಥವೂ ಇದುವರೆಗೆ ದೊರೆತಿಲ್ಲ. ಕನ್ನಡ ಸಾಹಿತ್ಯ ಕ್ರಿಸ್ತಶಕದ ಆದಿಭಾಗದಿಂದಲೇ ರಚನೆಯಾದಂತೆ ತಿಳಿದು ಬಂದರೂ ದೊರಕಿರುವ ಆಧಾರಗಳ ದೃಷ್ಟಿಯಿಂದ ಅದರ ನಿಜವಾದ ಪ್ರಾರಂಭಕ್ಕೆ ಒಂಬತ್ತು ಶತಮಾನಗಳೇ ಬೇಕಾದವು. ಈ ಕಾಲಕ್ಕಾಗಲೇ ಕನ್ನಡ ಭಾಷಾ ಸಾಹಿತ್ಯಗಳು ಚೆನ್ನಾಗಿ ಬೆಳೆದಿದ್ದವು. ನಮಗೆ ಸಿಕ್ಕಿರುವ ಮೊದಲ ಗ್ರಂಥ ಕವಿರಾಮಾರ್ಗವೇ ಇದಕ್ಕೆ ಉಲ್ಲೇಖಗಳನ್ನು ಒದಗಿಸುವುದಲ್ಲದೆ ಇದು ಲಕ್ಷಣ ಗ್ರಂಥವಾಗಿರುವುದೇ ಇದನ್ನು ದೃಢಪಡಿಸುತ್ತದೆ. ವಡ್ಡಾರಾಧನೆ ಎಂಬ ಗದ್ಯಕೃತಿಯೂ ಹಲವು ದೃಷ್ಟಿಯಿಂದ ತನ್ನ ಪರಂಪರೆಗೆ ಸಾಕ್ಷಿ ನುಡಿಯುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ 10ನೇ ಶತಮಾನವನ್ನು ವೀರಯುಗ ಎಂದು ವಿದ್ವಾಂಸರು ಕರೆದಿರುವುದಲ್ಲದೆ ಆ ಕಾಲಕ್ಕೆ ಬಂದ ಕೃತಿಗಳೆಲ್ಲವೂ ಕ್ಷಾತ್ರಧರ್ಮ ಮತ್ತು ಅದರ ಮೌಲ್ಯಗಳನ್ನು ವಿವರಿಸುತ್ತವೆ. ಈ ಕಾಲವು ಕನ್ನಡ ಸಾಹಿತ್ಯದ ಉತ್ತುಂಗ ಶಿಖರಗಳಲ್ಲಿ ಒಂದು. ಸಾಮಾನ್ಯವಾಗಿ ಇದು ಸಾಹಿತ್ಯದ ಸುವರ್ಣಯುಗವೆಂದೇ ಪ್ರಸಿದ್ಧವಾಗಿದೆ. ಈ ಕಾಲದಲ್ಲಿ ಜೈನಧರ್ಮವೇ ಪ್ರಬಲವಾಗಿದ್ದುದರಿಂದ ಉಳಿದ ಧರ್ಮಗಳೊಡನೆ ಅದರ ಸ್ಪರ್ಧೆ ಬಹುಮಟ್ಟಿಗೆ ಇರಲಿಲ್ಲ. ಕ್ಷಾತ್ರಧರ್ಮವೂ, ಧಾರ್ಮಿಕ ಚಳುವಳಿಯೂ ಈ ಶತಮಾನದ ಕಾವ್ಯಗಳ ಕಾವ್ಯಧರ್ಮವಾಗಿ ಪರಿಣಮಿಸಿದ್ದು ಈ ಕಾಲದ ಇನ್ನೊಂದು ವಿಶೇಷ. ಕನ್ನಡ–ಸಂಸ್ಕೃತಗಳ ಸುಂದರ ಸಮನ್ವಯವನ್ನು ಸಾಧಿಸಿದ ಮಾರ್ಗೀಯ ಶೈಲಿಯನ್ನು ರೂಪಿಸಿಕೊಂಡ ಈ ಕವಿಗಳು ದೇಸೀಯ ಸೊಬಗನ್ನೂ ಕಾವ್ಯದಲ್ಲಿ ಮೇಳೈಸಿದರು. ಸನ್ನಿವೇಶ, ಭಾವನೆ, ಪಾತ್ರಗಳಿಗೆ ಅನುಗುಣವಾಗಿ ಭಾಷೆಯನ್ನು ದುಡಿಸಿಕೊಂಡರು; ಅಭಿನಯಿಸಿ ತೋರಿಸಿದರು. ಹೀಗಾಗಿ ಈ ಕವಿಗಳು ಮುಂದಿನ ಶತಮಾನಗಳ ಅನೇಕ ಕವಿಗಳ ಮೇಲೆ ಪ್ರಭಾವ ಬೀರಿದರು.

12ನೇ ಶತಮಾನದಲ್ಲಿ ಅರಮನೆಯಲ್ಲಿ ಬೆಳೆದ ಸಾಹಿತ್ಯ ಜನಸಾಮಾನ್ಯರ ನಡುವೆ ಬಂದು ಚಳುವಳಿಯ ರೂಪ ಪಡೆದುಕೊಂಡಿತು. ಪಾಂಡಿತ್ಯ ಪೂರ್ಣ ಸಾಹಿತ್ಯ ಸೃಷ್ಟಿಗಿಂತ ಜನಸಾಮಾನ್ಯರಿಗೆ ಅರ್ಥವಾಗುವ ಸಂಗತಿ ಮುಖ್ಯವೆಂಬ ಧೋರಣೆ ಇವರದ್ದಾಗಿತ್ತು. ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ಹಾದಿಯನ್ನೇ ಹಾಕಿಕೊಟ್ಟರು. ಇವರ ಉದ್ದೇಶ ಮತ ಪ್ರಚಾರವೇ ಹೊರತು ಕಾವ್ಯ ರಚನೆಯಲ್ಲ. ತಮ್ಮ ಧರ್ಮ ಬೋಧನೆಯನ್ನು ವಚನಗಳೆಂಬ ಮಾಧ್ಯಮದ ಮೂಲಕ ಸಾಮಾನ್ಯ ಜನರಿಗೂ ಅರ್ಥವಾಗುವ ರೀತಿಯಲ್ಲಿ ರಚಿಸಿದರು. ಇವರಲ್ಲಿ ರಾಜಪ್ರಭುತ್ವವನ್ನೇ ಪ್ರತಿಭಟಿಸಿ ರಾಜರ ಆಸ್ಥಾನವನ್ನು ತೊರೆದವರನೇಕರಿದ್ದಾರೆ. ಇವರು ತಮ್ಮ ಬರವಣಿಗೆಯಲ್ಲಿ ಮಾನವೀಯತೆ, ಸರ್ವಸಮಾನತೆ, ಭಕ್ತಿ ಮತ್ತು ಆಧ್ಯಾತ್ಮವನ್ನು ಸಂಸ್ಥಾಪಿಸಿದರು. ಅದಕ್ಕನುಗುಣವಾಗಿ ಕಥೆ ಹಾಗೂ ಪಾತ್ರಗಳನ್ನು ಸೃಷ್ಟಿಸಿದರು.

ವಚನಕಾರರ ಕಾಲಕ್ಕೆ ಜನರ ನಡುವೆ ಬಂದ ಸಾಹಿತ್ಯ 16ನೇ ಶತಮಾನದ ದಾಸವರೇಣ್ಯರ ಕಾಲಕ್ಕೆ ಜನಸಮೂಹದ ಅಂತರಂಗವನ್ನು ರಾಗ ತಾಳಗಳ ಮುಖೇನ ಕಾಂತಾಸಮ್ಮಿತ ಭಾವದ ಮೂಲಕ ಜನರ ಹೃದಯವನ್ನು ತಟ್ಟಿತು. ಹರಿದಾಸರು ಕನ್ನಡಿಗರ ಪರಮ ಹಿತೈಷಿಗಳು; ಅವರು ಕೇವಲ ಕವಿಗಳಲ್ಲ; ಸಂಗೀತಜ್ಞರು, ದಾರ್ಶನಿಕರು. ಮೇಲಾಗಿ ಮಹಾನುಭಾವಿಗಳು. ಅಂತೆಯೇ ಅವರ ಕೀರ್ತನೆಗಳಲ್ಲಿ ಸಾಹಿತ್ಯದ ಸೌಂದರ್ಯ, ಶಾಸ್ತ್ರದ ಗಾಂಭೀರ್ಯ, ಗಾನದ ಮಾಧುರ್ಯ ಇವುಗಳ ಸುಂದರ ಸಮನ್ವಯವನ್ನು ಕಾಣಬಹುದಾಗಿದೆ. ಸಂಸ್ಕೃತದಲ್ಲಿರುವ ತತ್ವವಿಚಾರ, ಸಂಗೀತ, ಸಾಹಿತ್ಯ, ಯೋಗ ಎಲ್ಲವನ್ನೂ ಬೆಳಗು ಕನ್ನಡಕ್ಕೆ ಸಾರವತ್ತಾಗಿ ತಂದ ಬಹುಮುಖ ಪ್ರತಿಭೆ ಇವರದ್ದಾಗಿದೆ. ಶ್ರುತಿ–ಸ್ಮೃತಿ–ಪುರಾಣೇತಿಹಾಸಗಳ ಸಾರವನ್ನೆಲ್ಲ ಹೀರಿಕೊಂಡು ಭಕ್ತಿ–ಜ್ಞಾನ–ವೈರಾಗ್ಯಗಳನ್ನು ಸಮನ್ವಯಿಸಿ ಸುಲಭವಾದ ಕನ್ನಡ ಭಾಷೆಯಲ್ಲಿ ರಚಿತವಾದ ಈ ದಾಸ ಸಾಹಿತ್ಯ, ಧಾರ್ಮಿಕ ಚಳುವಳಿಯ ಮೂಲಕ ಕನ್ನಡ ಸಾಹಿತ್ಯ ಸುಧೆಯನ್ನು ಜನಸಾಮಾನ್ಯರ ಮನೆ– ಮನಗಳಿಗೆ ಮುಟ್ಟಿಸಿತು.

ಕನ್ನಡ ಸಾಹಿತ್ಯದಲ್ಲಿ ತತ್ವಪದ ಸಾಹಿತ್ಯವು ಒಂದು ವಿಶಿಷ್ಟ ಪರಂಪರೆಯನ್ನು ಹೊಂದಿದೆ. ಸಮಾಜದ ಏಳಿಗೆಗಾಗಿ ಚಳುವಳಿಯ ರೂಪದಲ್ಲಿ ಹುಟ್ಟಿಕೊಂಡ ವಚನಸಾಹಿತ್ಯ ಮತ್ತು ಭಕ್ತಿರೂಪದಲ್ಲಿ ಹುಟ್ಟಿಕೊಂಡ ದಾಸ ಸಾಹಿತ್ಯಗಳೆರಡರ ನಂತರದಲ್ಲಿ ಸಮಾಜವನ್ನು ಸೂಕ್ತ ಮಾರ್ಗಕ್ಕೆ ತರುವಲ್ಲಿ ಶ್ರಮಿಸಿದ ತತ್ತ್ವಪದ ಸಾಹಿತ್ಯದ ಕೊಡುಗೆ ಗಮನಾರ್ಹವಾದುದು. ಸಮಯೋಚಿತವಾಗಿ ಬದುಕಿನ ಪ್ರತಿಯೊಂದು ರಂಗವನ್ನು ಹೊಕ್ಕು ಅಲ್ಲಿನ ಒಳಿತು ಕೆಡಕುಗಳನ್ನು ಹುಡುಕಿ ಧೈರ್ಯದಿಂದ ಬಿಚ್ಚಿ ಎಲ್ಲವನ್ನು ನೇರವಾಗಿ ಹೇಳಿದ್ದಾರೆ. ಇವರು ತಾವು ಕಂಡ ಅಂದಿನ ಸಮಾಜವನ್ನು ವಿಮರ್ಶಿಸುತ್ತಾ ಅದನ್ನು ಸುಧಾರಿಸಲು ಪ್ರಯತ್ನಿಸಿದ್ದಾರೆ. ಹಳ್ಳಿ ಹಳ್ಳಿಗಳಲ್ಲಿ ಭಜನಾ ಪದಗಳಾಗಿ ಈ ತತ್ವಪದ ಸಾಹಿತ್ಯ ಜನಮನವನ್ನು ಸೂರೆಗೊಂಡಿತು.

ಹೊಸದಾಗಿ ಹುಟ್ಟಿಕೊಂಡ ಸಾಹಿತ್ಯ ಪ್ರಕಾರ ತನ್ನ ಹಿಂದಿನ ಸಾಹಿತ್ಯ ಸಂಪ್ರದಾಯವನ್ನು ಅಲ್ಲಗಳೆದು, ಟೀಕಿಸಿ, ಪ್ರತಿಕ್ರಿಯಿಸಿ, ಪ್ರತಿಭಟಿಸಿ, ಎದ್ದು ನಿಲ್ಲುತ್ತವೆ. ಕೆಲವು ಕಾಲ ಬಾಳುತ್ತವೆ. ಅನಂತರ ಅದೂ ಒಂದು ಸಂಪ್ರದಾಯವಾಗುತ್ತದೆ. ಹೀಗೆ ಒಂದು ಕಾಲದ ಸಾಹಿತ್ಯ ವಸ್ತು, ಶೈಲಿ, ತಂತ್ರಗಳಲ್ಲಿ ಹೊಸ ಹೊಸ ಧೋರಣೆಗಳನ್ನು ಪಡೆದು ಸಾಕಷ್ಟು ಕೃಷಿ ನಡೆದು ಅನುಕರಣೆ ಸಹಜವಾಗಿ ಹೋಗುತ್ತವೆ. ಆಗ ಅದರಲ್ಲಿಯ ನ್ಯೂನ್ಯತೆಗಳು ಸ್ಪಷ್ಟವಾಗಿ ಗೋಚರಿಸುತ್ತ ಬಂದಂತೆ ಮತ್ತೆ ಹೊಸ ಮಾರ್ಗದ ಹುಡುಕಾಟ ಪ್ರಾರಂಭವಾಗುತ್ತದೆ. ಈ ಕ್ರಿಯೆ ಸಾಹಿತ್ಯ ಸೃಷ್ಟಿಯಲ್ಲಿ ನಿರಂತರವಾಗಿರುತ್ತದೆ. ಸಾಹಿತ್ಯವು ತನ್ನ ಕಾಲ, ದೇಶ, ಪರಿಸರ ಪ್ರಭಾವಗಳಿಗನಗುಣವಾಗಿ ವಸ್ತು ತಂತ್ರ ಅಭಿವ್ಯಕ್ತಿ ಮಾಧ್ಯಮಗಳಲ್ಲಿ ಬದಲಾವಣೆ ಹೊಂದುವುದು ಸಹಜ. ಅದು ಜೀವಂತ ಸಾಹಿತ್ಯದ ಲಕ್ಷಣ ಅಂತಹ ಪ್ರಕ್ರಿಯೆ ಸಾಹಿತ್ಯ ನಿರ್ಮಿತಿಯಲ್ಲಿ ಅಪೇಕ್ಷಣಿಯ.

ಬ್ರಿಟೀಷರ ಆಗಮನದಿಂದ ಕನ್ನಡ ಸಾಹಿತ್ಯಕ್ಕೆ ಒಂದು ಬಗೆಯ ಹೊಸ ರೂಪ ಬಂದಿತು. ಹೊಸ ಹುರುಪು ಹುಟ್ಟಿತು. ಹೊಸ ಕಳೆ ಏರಿತು. ಜನತೆಯಲ್ಲಿ ಇಂಗ್ಲೀಷ ಭಾಷೆಯ ಸಂಪರ್ಕ ಸಹವಾಸ ಸಾಮಿಪ್ಯಗಳು ಹೆಚ್ಚಿದಂತೆಲ್ಲ ಕನ್ನಡ ಸಾಹಿತ್ಯವು ನಾನಾ ಮುಖವಾಗಿ ಬೆಳೆಯತೊಡಗಿತು. ಹೊಸ ಬಗೆಯ ಸಾಹಿತ್ಯದೃಷ್ಟಿ ಮೊದಲಾಯಿತು. ಇದುವರೆಗೂ ಸಂಸ್ಕೃತ ಭಾಷೆಯಿಂದ ಪರಿಪುಷ್ಟತೆಯನ್ನು ಪಡೆಯುತ್ತಿದ್ದ ಕನ್ನಡ ನುಡಿ, ಇಂಗ್ಲೀಷ ಭಾಷೆಯಿಂದ ಸ್ಫೂರ್ತಿ ಹೊಂದಲಾರಂಭಿಸಿತು. ನಾಟಕ, ಪ್ರಹಸನ, ಕಾದಂಬರಿ, ಸಣ್ಣಕತೆ, ಪ್ರಬಂಧ, ಸರಳರಗಳೆ ಮೊದಲಾದ ಹೊಸಬಗೆಯ ಸಾಹಿತ್ಯದ ವೈವಿಧ್ಯಗಳಿಗೆ ಪ್ರೋತ್ಸಾಹ ದೊರೆಯಿತು. ಇಂಗ್ಲೀಷ ಭಾಷೆಯಿಂದ ಅನೇಕ ಕೃತಿಗಳು ಅನುವಾದಿತವಾದವು. ಹಿಂದಿನಿಂದಲೂ ಸಾಹಿತ್ಯವು ಕೇವಲ ರಾಜಸ್ಥಾನಗಳಲ್ಲಿ

ಶ್ರೀಮಂತರ ಆಶ್ರಯದಲ್ಲಿ ಬೆಳೆದು ಕೆಲವಾರು ಪಂಡಿತ ವರ್ಗದ ಸ್ವತ್ತಾಗಿ ಉಳಿದಿತ್ತು. ಆದರೆ ಕಾಲ ಕಳೆದಂತೆಲ್ಲ ಈ ಸಾಹಿತ್ಯ ರಾಜಸ್ಥಾನವನ್ನು ತ್ಯಜಿಸಿ ಜನಸಾಮಾನ್ಯರೊಂದಿಗೆ ಸೇರಲು ಆರಂಭವಾಯಿತು. ಇಂಗ್ಲೀಷ ವಿದ್ಯಾಭ್ಯಾಸದ ಪರಿಚಯ ಹೆಚ್ಚು ಹೆಚ್ಚಾದಂತೆಲ್ಲ ಸಾಹಿತ್ಯವು ಹಲವಾರು ಜನರ ಸ್ವತ್ತಾಗಿ ಪರಿಣಮಿಸುವ ಗುರುತುಗಳು ಕಾಣಿಸಿಕೊಂಡವು.

ಆಧುನಿಕ ಕನ್ನಡ ಸಾಹಿತ್ಯದ ಅಭಿವೃದ್ಧಿಗೆ ಕನ್ನಡ ಚಳುವಳಿಗಳು ವಿಶೇಷ ಪ್ರಭಾವವನ್ನು ಬೀರಿವೆ. ಚಳುವಳಿಗಳ ಮೂಲಕ ಪ್ರಸ್ತುತಗೊಂಡ ಧೋರಣೆ ಸಮಕಾಲೀನ ಬರಹಗಳಲ್ಲಿ ಪಡಿಮೂಡಿ ಒಂದು ಪ್ರತ್ಯೇಕ ಅಧ್ಯಯನದ ವಿಷಯವಾಗಿಯೇ ರೂಪುಗೊಳ್ಳುವುದನ್ನು ಹೊಸಗನ್ನಡ ಸಾಹಿತ್ಯದ ಬೆಳವಣಿಗೆಯ ಹಂತಗಳಲ್ಲಿ ಗುರುತಿಸಿದ್ದೇವೆ. ಸಾಮಾಜಿಕ ಸಮಕಾಲೀನ ಎಚ್ಚರ ಕೃತಿಗಳಲ್ಲೂ ವ್ಯಕ್ತವಾಗುತ್ತಾ ಬಂದಿರುವುದಕ್ಕೆ ನವೋದಯ, ಪ್ರಗತಿಶೀಲ, ನವ್ಯ ಹಾಗೂ ದಲಿತ ಬಂಡಾಯ ಸಾಹಿತ್ಯಗಳೇ ಸಾಕ್ಷಿಯಾಗಿವೆ.

ನವೋದಯ ಸಾಹಿತ್ಯದಲ್ಲಿ ಪ್ರಕೃತಿಯ ವರ್ಣನೆ, ಪ್ರೀತಿಯ ಸ್ಪಂದನ, ಸಾಮಾಜಿಕ ಪ್ರತಿಕ್ರಿಯೆ, ನಾಡಿನ ಹಾಗೂ ರಾಷ್ಟ್ರದ ಸ್ಥಿತಿ– ಗತಿಗಳ ವರ್ಣನೆ ಮತ್ತು ಪರಂಪರೆಯ ಅಗ್ಗಳಿಕೆ ಇತ್ಯಾದಿಗಳು ಬಹಳಷ್ಟು ಜಾಗವನ್ನು ಆಕ್ರಮಿಸಿವೆ. ವೈಯಕ್ತಿಕ ವೈಶಿಷ್ಟ್ಯಗಳ ಮೊತ್ತವೇ ನವೋದಯದ ಸ್ಥೂಲ ಸ್ವರೂಪ ಎಂದು ಹೇಳಬಹುದು. ಪ್ರಗತಿಶೀಲ ಸಾಹಿತ್ಯದಲ್ಲಿ ಪರಂಪರೆಯ ಗೊಡ್ಡು ಸಂಪ್ರಾದಯಗಳನ್ನು ಧಿಕ್ಕರಿಸಿ ವೈಜ್ಞಾನಿಕ ಸತ್ಯವನ್ನು ಸ್ಥಿರೀಕರಿಸಿದರು. ಧರ್ಮ, ದೇವರು ಜಾತಿಗಳ ಹೆಸರಿನಲ್ಲಿ ನಡೆಯುವ ಶೋಷಣೆಯನ್ನು ಧಿಕ್ಕರಿಸಿ ಧರ್ಮವನ್ನು ವೈಚಾರಿಕ ಹಿನ್ನಲೆಯಲ್ಲಿ ವಿವರಿಸಿದರು. ಕಲೆಗಾಗಿ ಕಲೆ ಎನ್ನುವ ವಾದವನ್ನು ತಳ್ಳಿಹಾಕಿ ಆ ಸ್ಥಾನದಲ್ಲಿ ಬದುಕಿಗಾಗಿ ಕಲೆ ಎನ್ನುವ ದೃಷ್ಟಿಯನ್ನು ಖಚಿತಗೊಳಿಸಿದರು. ನವ್ಯ ಸಾಹಿತ್ಯ ಪಾಶ್ಚಾತ್ಯ ಆಧುನಿಕ ತಾತ್ವಿಕ ಚಿಂತನೆಗಳಾದ ಅಸ್ತಿತ್ವವಾದ, ಅಸಂಗತವಾದಗಳನ್ನು ರೂಢಿಸಿಕೊಂಡು ಬೆಳೆಯಿತು. ವಾಸ್ತವಿಕ ಅಸ್ತಿತ್ವ ಬಾಹ್ಯ ಜಗತ್ತಿನಲ್ಲಿರದೆ ಮನುಷ್ಯನ ಪ್ರಜ್ಞೆಯಲ್ಲಿದೆ ಎಂಬುದನ್ನು ಸಾರಿತು. ದಲಿತ ಸಾಹಿತ್ಯದಲ್ಲಿ ಕಲೆಗಾರಿಕೆಗಿಂತಲೂ ವಾಸ್ತವ ಬದುಕಿನ ಬರ್ಬರತೆ ಕಾಣುತ್ತದೆ. ಕಲೆಗಾರಿಕೆಯೇ ಸಾಹಿತ್ಯವಲ್ಲ ಬದುಕು ಸತ್ಯ ಎಂಬುದನ್ನು ಸಾರಿತು. ಅಸ್ಪ್ರಶ್ಯತೆ, ದಾಸ್ಯತನ, ವಿಷಮತೆ, ದುಃಖ ಇತ್ಯಾದಿಗಳನ್ನು ಧಿಕ್ಕರಿಸುವ ಪ್ರಜ್ಞೆ ದಲಿತ ಸಾಹಿತ್ಯದಲ್ಲಿ ಕಂಡುಬರುತ್ತದೆ.

ಸಮಾಜವೆಂದರೆ ಒಂದು ತೆರನಾದ ಆಚಾರ, ವಿಚಾರ, ನಂಬಿಕೆ, ನಡವಳಿಕೆಯುಳ್ಳ ಜನರ ಒಂದು ಸಮೂಹ. ಈ ಸಮೂಹ ಅಂದಿನ ಜನತೆಯ ಮನೋಭಾವಕ್ಕನುಗುಣವಾಗಿ ಪರಿಸರದ ಪ್ರಭಾವದ ಪರಿಣಾಮವಾಗಿ ಆಯಾ ಕಾಲದ ಮೌಲ್ಯಗಳಿಗನುಗುಣವಾಗಿ ರೂಪಿತಗೊಳ್ಳುತ್ತದೆ. ಮನುಷ್ಯ ಸಮಾಜಜೀವಿ. ಮನುಷ್ಯನನ್ನು ಬಿಟ್ಟು ಸಮಾಜವಿಲ್ಲ; ಸಮಾಜ ಬಿಟ್ಟು ಮನುಷ್ಯನಿಲ್ಲ. ಇವು ಪರಿಸರ ಪೂರಕವಾದ ಸಂಬಂಧಗಳು ಸ್ಥಗಿತಗೊಂಡ ಸಮಾಜಕ್ಕೆ ಚಾಲನೆ ನೀಡಬೇಕಾದರೆ ಅದರ ಮೂಲ ಚೂಲಗಳನ್ನು ಜಾಲಾಡಬೇಕಾಗುತ್ತದೆ. ಈ ಕಾರ್ಯಕ್ಕೆ ಸಾಹಿತ್ಯವು ಸಮರ್ಥ ಮಾಧ್ಯಮವಾಗುತ್ತದೆ. ಸಾಹಿತ್ಯ ಜೀವನದ ಪ್ರತಿಬಿಂಬ ಎನ್ನುವಂತೆ ಕಲೆಯನ್ನು ಅಳವಡಿಸಿಕೊಂಡ ಕವಿಗಳು ಸಾಮಾನ್ಯವಾಗಿ ಸಮಕಾಲೀನ ಸಮಾಜದ ಪ್ರತಿನಿಧಿಯಾಗುತ್ತಾರೆ. ತತ್ಕಾಲದ ಸಾರ್ವಕಾಲಿಕ ಅಂಶಗಳನ್ನು ಗಮನಿಸಿ ಸಾಹಿತ್ಯ ರೂಪದಲ್ಲಿ ಬರೆಯುವುದು ಸಹಜವಾಗಿರುತ್ತದೆ.

ಒಟ್ಟಿನಲ್ಲಿ ಪ್ರಾಚೀನ ಕಾಲದಿಂದಲೂ ಇಲ್ಲಿಯವರೆಗೆ ಅವ್ಯಾಹತವಾಗಿ ಹರಿದು ಬಂದ ಕನ್ನಡ ಸಾಹಿತ್ಯವು ಆಯಾ ಕಾಲದ ಸಂದರ್ಭ ಸನ್ನಿವೇಶಗಳನ್ನು ಗಮನದಲ್ಲಿಟ್ಟುಕೊಂಡು ವಿಶೇಷ ಚಳುವಳಿಗಳ ಮೂಲಕ ಹೊಸ ಹೊಸ ವಿಚಾರಗಳನ್ನು ಅಭಿವ್ಯಕ್ತಿಸಿ ಜನಜಾಗೃತಿಯನ್ನುಂಟು ಮಾಡುವಲ್ಲಿ ಮಹತ್ತರ ಪಾತ್ರವನ್ನು ವಹಿಸಿದೆ ಎಂದು ಹೇಳಬಹುದು.

**ಆಕರ ಗ್ರಂಥಗಳು**


- ಆಶಾಕುಮಾರಿ ಪಿ.ಬಿ. (2011). *ಕನ್ನಡ ಸಾಹಿತ್ಯ ಮೊದಲ ಹೆಜ್ಜೆ.* ಚೇತನ ಬುಕ್‌ಹೌಸ್.
- ಮಾಧವ ಪೆರಾಜೆ. (2017). *ಪಂಪಪೂರ್ವಯುಗದ ಕನ್ನಡ ಕವಿಗಳು.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ಮುಗುಳಿ, ರಂ.ಶ್ರೀ. (2014). *ಕನ್ನಡ ಸಾಹಿತ್ಯಚರಿತ್ರೆ.* ಗೀತಾ ಬುಕ್‌ಹೌಸ್.
- ರಾಗೌ. (2015). *ಪ್ರಾಚೀನ ಕಾವ್ಯಚಿಂತನ.* ಕನ್ನಡ ಪುಸ್ತಕ ಪ್ರಾಧಿಕಾರ.
- ವೆಂಕಟರಾಮಪ್ಪ ಕೆ. (1960). *ಕನ್ನಡ ಸಾಹಿತ್ಯ.* ಮೈಸೂರು ವಿಶ್ವವಿದ್ಯಾಲಯ

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 27-29
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ದಾವಣಗೆರೆ ಜಿಲ್ಲೆಯ ಸ್ಥಳನಾಮಗಳಲ್ಲಿ ಬರುವ ವಾರ್ಗಿಕಗಳು

**ರೂಪೇಶ್ ಕುಮಾರ್ ಆರ್**
ಸಹಾಯಕ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ವಿಭಾಗ, ದಾವಣಗೆರೆ ವಿಶ್ವವಿದ್ಯಾನಿಲಯ
ಸ್ನಾತಕೋತ್ತರ ಅಧ್ಯಯನ ಕೇಂದ್ರ ಜಿ.ಆರ್.ಹಳ್ಳಿ ಚಿತ್ರದುರ್ಗ

**Abstract:**

*ಮಾನವ ತನ್ನ ಅನಿಸಿಕೆ ಅಭಿಪ್ರಾಯ ಹಾಗೂ ಆಲೋಚನೆಗಳನ್ನು ಇತರರಿಗೆ ವ್ಯಕ್ತಪಡಿಸಲು ಇರುವಂತಹ ಸಾಧನವೇ ಭಾಷೆ. ಸಾಹಿತ್ಯಕ್ಕೆ ಭಾಷೆಯೇ ಮೂಲ ತಳಹದಿ. ಭಾಷೆಯಿಲ್ಲದೆ ಸಾಹಿತ್ಯ ರಚನೆ ಸಾಧ್ಯವೆ ಇಲ್ಲ. ಭಾಷೆ ಸಾಹಿತ್ಯದ ಜೀವನಾಡಿ. ಭಾಷೆ ಸತ್ತ ಮರುದಿನವೇ ಸಾಹಿತ್ಯದ ಜೀವನಕ್ಕೂ ಕೊನೆ. ಸಾಹಿತ್ಯಕ್ಕೆ ಸಂಬಂಧಿಸಿದ ಎಲ್ಲಾ ಕಾರ್ಯಗಳು ಭಾಷೆಯ ಮೂಲಕವೇ ನಡೆಯುತ್ತದೆ. ಸಾಹಿತ್ಯದ ಒಂದು ಭಾಗವಾಗಿರುವ ಸ್ಥಳನಾಮಗಳ ಅಧ್ಯಯನಕ್ಕೂ, ಭಾಷೆಯ ಅಧ್ಯಯನಕ್ಕೂ ನಿಕಟ ಸಂಬಂಧವಿದೆ. ಸ್ಥಳನಾಮಗಳ ಅಧ್ಯಯನವೆಂದರೆ ಒಂದರ್ಥದಲ್ಲಿ ಭಾಷೆಯ ಅಧ್ಯಯನವೇ ಆಗಿದೆ. ಸ್ಥಳನಾಮಗಳ ಶೋಧನೆಗೆ ತೊಡಗುವ ಸಂಶೋಧಕನಿಗೆ ಭಾಷೆಯ ವಿವಿಧ ಮಗ್ಗಲುಗಳನ್ನು ಸ್ಪರ್ಶಿಸಿ, ಪದರ, ಪದರುಗಳನ್ನು ತೆರೆದು ನೋಡಿದಂತೆ ಕೆಲವು ಸೂಕ್ಷ್ಮ ಒಳನೋಟಗಳ ಮೂಲಕ ಮಹತ್ವದ ಮಾಹಿತಿಯು ದೊರೆಯುತ್ತದೆ. ಹೀಗಾಗಿ ಸ್ಥಳನಾಮಶಾಸ್ತ್ರ ಮತ್ತು ಭಾಷಾಶಾಸ್ತ್ರ ಒಂದಕ್ಕೊಂದು ಅವಿನಾಭಾವ ಸಂಬಂಧ ಪಡೆದ ವಿಷಯಗಳಾಗಿವೆ. ಪ್ರಸ್ತುತ ಲೇಖನದಲ್ಲಿ ದಾವಣಗೆರೆ ಜಿಲ್ಲೆಯ ಸ್ಥಳನಾಮಗಳಲ್ಲಿ ಬರುವ ವಾರ್ಗಿಕಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.*

**Keywords:** *ಸ್ಥಳನಾಮಶಾಸ್ತ್ರ, ದಾವಣಗೆರೆ ಜಿಲ್ಲೆ, ಸ್ಥಳನಾಮಗಳು, ಭಾಷಾಶಾಸ್ತ್ರ, ವಾರ್ಗಿಕ.*

## ಪೀಠಿಕೆ

ಭಾಷಾ ವಿಜ್ಞಾನಿಗಳು ಊರ ಹೆಸರುಗಳನ್ನು ನಿರ್ದಿಷ್ಟ ಮತ್ತು ವಾರ್ಗಿಕ ಎಂಬ ಎರಡು ಘಟಕಗಳಲ್ಲಿ ಅಧ್ಯಯನ ಮಾಡುವುದಿದೆ. ಸಾಮಾನ್ಯವಾಗಿ ಊರ ಹೆಸರುಗಳು ಎರಡಕ್ಕಿಂತ ಹೆಚ್ಚು ಘಟಕಗಳನ್ನು ಹೊಂದಿರುತ್ತವೆ. ಅವು ವಿಶಿಷ್ಟದ ಹಿಂದೆ ವಿಶೇಷಣ ಅಥವಾ ಯಾವುದೋ ವಿಷಯ ಸೂಚಕ ಪದಗಳಾಗಿ ಸೇರಿಕೊಂಡಿರುತ್ತವೆ. ಹೀಗೆ ಸೇರಿಕೊಂಡಿರುವುದನ್ನು ನಿರ್ದಿಷ್ಟವೆಂದೇ ಪರಿಗಣಿಸುವುದುಂಟು. ಇಂತಹ ಕ್ರಮವನ್ನೆ ಇಲ್ಲಿ ಅನುಸರಿಸಲಾಗಿದೆ. ನಿರ್ದಿಷ್ಟವೆಂದರೆ ವಿಶಿಷ್ಟ ಎಂದರ್ಥ ಅಂದರೆ ಯಾವುದಾದರೂ ವಿಷಯವನ್ನು ಒಳಗೊಂಡಂತಹದ್ದು, ವಾರ್ಗಿಕ ಎಂದರೆ ಊರುಗಳ ಹೆಸರುಗಳ ಉತ್ತರಾರ್ಧ ಘಟಕ. ಇದರಲ್ಲಿ ಊರು, ಹಳ್ಳಿ, ಪುರ, ಗ್ರಾಮ, ನಗರ, ಕಲ್ಲು, ಕೆರೆ, ಮಡಿ, ಪಟ್ಟಣ, ಕೋಟೆ, ಕುಪ್ಪೆ ಈ ಮುಂತಾದ ಘಟಕಗಳಲ್ಲಿ ಒಂದನ್ನೊಳಗೊಂಡು ಕೊನೆಗೊಳ್ಳುವಂತಹವು. ನಿರ್ದಿಷ್ಟ ಮತ್ತು ವಾರ್ಗಿಕ ಇವೆರಡು ಪ್ರತ್ಯೇಕ ಆಕೃತಿಮಾಗಳೇ. ಈ ಆಕೃತಿಮಾಗಳು ಸ್ಥಳನಾಮ ಅಧ್ಯಯನಕ್ಕೆ ಮಹತ್ವದ ಕೊಡುಗೆಯಾಗುತ್ತದೆ. ಭಾಷಿಕ ದೃಷ್ಟಿಯಿಂದ ದಾವಣಗೆರೆ ಜಿಲ್ಲೆಯಲ್ಲಿ ಬರುವ

***Please cite this article as:*** ರೂಪೇಶ್ ಕುಮಾರ್. ಆರ್. (2024). ದಾವಣಗೆರೆ ಜಿಲ್ಲೆಯ ಸ್ಥಳನಾಮಗಳಲ್ಲಿ ಬರುವ ವಾರ್ಗಿಕಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 27–29

ಸ್ಥಳನಾಮಗಳಲ್ಲಿ ಬಳಕೆಯಾಗಿರುವ ವಾರ್ಗಿಕಗಳನ್ನು ಒಂದೊಂದಾಗಿ ಪರಿಶೀಲನೆಗೆ ಒಳಪಡಿಸಲಾಗಿದೆ.

**ಊರ್–ಊರು**

ಈ ವಾರ್ಗಿಕ ಅಚ್ಚ ದ್ರಾವಿಡ ಮೂಲದ್ದು, ಹಾಗಾಗಿ ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಮತ್ತು ಇತರ ದ್ರಾವಿಡ ಭಾಷೆಗಳಾದ ಕೊಂಡ, ತೋಡ, ಕೊಡವ, ಕೊಲಾಮಿ, ನಾಯ್ಕಿ ಭಾಷೆಗಳಲ್ಲೂ ಇದು ವ್ಯಾಪಕವಾಗಿ ಬಳಕೆಯಾಗಿರುವುದನ್ನು ದ್ರಾವಿಡ ಭಾಷೆಯ ವ್ಯುತ್ಪತ್ತಿಕೋಶ ದೃಢಪಡಿಸುತ್ತದೆ. ಈ ವಾರ್ಗಿಕ ದಕ್ಷಿಣ ಭಾರತವನ್ನು ಮೀರಿ ಹೊರದೇಶದವರೆಗೂ ವ್ಯಾಪಿಸಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಊರ್ ಎಂಬ ವಾರ್ಗಿಕ ದ್ರಾವಿಡ ಮೂಲದ ಇರ್ ಅಥವಾ ಉರ್ ಧಾತುವಿನಿಂದ ಬಂದಿದ್ದು, ನೆಲೆಸುವಿಕೆ, ಇರುವಿಕೆ ಎಂಬ ಅರ್ಥವನ್ನು ಕೊಡುತ್ತದೆ. ಊರು ಎಂಬ ಪದ ಅಥವಾ ಅದರ ವಿಭಿನ್ನ ಸಾಧಿತ ರೂಪಗಳು ಜಲ ಸಂಬಂಧಿಯಾಗಿರುವುದಕ್ಕೆ ದೃಷ್ಟಾಂತಗಳಿರುವುದನ್ನು ಡಾ. ರಘುಪತಿಭಟ್ಟ ಕೆಮ್ತೂರ್ ಧೃಡಪಡಿಸುತ್ತಾರೆ. ಊರುಗಳಿಂದ ಕೊನೆಗೊಳ್ಳುವ ಸ್ಥಳನಾಮಗಳು ಸಾಮಾನ್ಯವಾಗಿ ಚಿಕ್ಕವು. ಈ ವಾರ್ಗಿಕ ನಿರ್ಧಿಷ್ಟದೊಡನೆ ಸೇರುವಾಗ ಸ್ವರ ಐಕ್ಯಗೊಳ್ಳುತ್ತದೆ.

**ಕಟ್ಟೆ–ಗಟ್ಟೆ, ಗಟ್ಟ–ಘಟ್ಟ**

ಕಟ್ಟೆ ಎಂಬ ವಾರ್ಗಿಕವು ಶುದ್ಧ ದೇಶೀಯವಾಗಿದ್ದು, ಎತ್ತರದ ನೆಲೆ ಎಂಬ ಅರ್ಥವನ್ನು ಕೊಡುತ್ತದೆ. ಕಿಟ್ಟೆಲ್ಲರ ಅರ್ಥಕೋಶದಲ್ಲಿ A Structure of earth or stones to sit upon for resting, transacting business, a station, a dam, a dike ಎಂಬ ಅರ್ಥಗಳಿವೆ. ಸ್ಥಳನಾಮಗಳಲ್ಲಿ ಕಾಣಿಸಿಕೊಳ್ಳುವ–ಗಟ್ಟ,–ಗಟ್ಟೆ ಎಂಬ ರೂಪಾಂತರಗಳಿಗೆ ಕಟ್ಟೆ ಎಂಬ ರೂಪವೇ ಎಡೆ ಮಾಡಿಕೊಟ್ಟಿದೆ. ಗಟ್ಟ ಸಂಸ್ಕೃತೀಕರಣಗೊಂಡಾಗ ಸಿಗುವ ರೂಪವೇ ಘಟ್ಟ.

**ಕಲ್–ಗಲ್:** ಈ ವಾರ್ಗಿಕದಿಂದ ಕೊನೆಗೊಳ್ಳುವ ಸ್ಥಳಗಳು ಬಹು ಪ್ರಾಚೀನವಾದವು. ಶಿಲಾಯುಗದ ಮಾನವನ ನಿವಾಸ ಸ್ಥಳವನ್ನು ಇವು ನಿರ್ದೇಶಿಸುತ್ತವೆ. ದ್ರಾವಿಡದ ಎಲ್ಲಾ ಜ್ಞಾತಿ ಭಾಷೆಗಳಲ್ಲೂ ಇದೇ ರೂಪ ಕಂಡುಬರುತ್ತದೆ. ನಿಸರ್ಗವಾಚಿ ವಾರ್ಗಿಕವಾದ ಇದು ಕಲ್ಲು, ಬಂಡೆಗಳಿರುವ ಪ್ರದೇಶ ಎಂಬ ಅರ್ಥವನ್ನುಕೊಡುತ್ತದೆ.

**ಕೇರಿ,–ಗೇರಿ,–ಕೆರೆ,–ಗೆರೆ:** ದ್ರಾವಿಡದ ವಾರ್ಗಿಕಗಳಲ್ಲಿ ಇದು ಒಂದಾಗಿದ್ದು ಎಲ್ಲಾ ದ್ರಾವಿಡ ಭಾಷೆಗಳಲ್ಲೂ ಬಳಕೆಯಲ್ಲಿದೆ. ತಮಿಳು, ಮಲೆಯಾಳಂಗಳಲ್ಲಿ, ಚೇರಿ ಎಂದೂ ಕನ್ನಡ ತುಳುಗಳಲ್ಲಿ ಕೇರಿ ಎಂದೂ ತೆಲುಗಿನಲ್ಲಿ ಗೇರಿ ಎಂದೂ ಬಳಕೆಯಾಗುತ್ತಿದೆ. ಈ ವಾರ್ಗಿಕವು ಊರು, ಊರಿನ ಭಾಗ ಎಂಬ ಅರ್ಥವನ್ನು ಕೊಡುತ್ತದೆ. ಕೇರಿಯು ಜಲಮೂಲವನ್ನು ಸೂಚಿಸುವ ಕೆರೆ ಎಂಬುದರ ಮುಕ್ತ ಆಕೃತಿಮಾ ಎಂದೂ ಡಾ. ಆರ್. ಸಿ. ಹಿರೇಮಠ ಹೇಳುತ್ತಾರೆ.

**ಪುರ :** ಪುರದಿಂದ ಕೊನೆಗೊಳ್ಳುವ ಸ್ಥಳನಾಮಗಳು ಊರಿಗಿಂತ ಗಾತ್ರದಲ್ಲಿ ದೊಡ್ಡವೆಂದು ಭಾವಿಸಲು ಅವಕಾಶವಿದೆ. ಗ್ರಾಮ ವಿಸ್ತಾರವಾದಂತೆ ಪುರ, ಪಟ್ಟಣ, ನಗರ ಮೊದಲಾದ ವಾರ್ಗಿಕಗಳು ಸೇರಿಕೊಳ್ಳುತ್ತವೆ. ಇದು ಅನ್ಯದೇಶಿಯ (ಸಂಸ್ಕೃತ) ವಾರ್ಗಿಕವಾದರೂ ಇದರಿಂದ ಕೊನೆಗೊಳ್ಳುವ ಸ್ಥಳನಾಮಗಳು ಆಂಧ್ರ ಮತ್ತು ಕರ್ನಾಟಕಗಳಲ್ಲಿ ವ್ಯಾಪಕವಾಗಿ ಬಳಕೆಯಾಗಿವೆ. 'ಪುರ'ವೇ–ವರ–ವಾರ ಎಂಬ ರೂಪಾಂತರ ಹೊಂದುವುದನ್ನು ಡಾ. ಎಂ. ಚಿದಾನಂದಮೂರ್ತಿ ತಿಳಿಸಿದ್ದಾರೆ.

**ಹಳ್ಳಿ:** ದಕ್ಷಿಣ ಭಾರತದಾದ್ಯಂತ ಬಳಕೆಯಲ್ಲಿರುವ ಈ ವಾರ್ಗಿಕ ದ್ರಾವಿಡ ಮೂಲದ್ದು. ಪಂಚ ದ್ರಾವಿಡ ಭಾಷೆಗಳಲ್ಲಿ ಬಳಕೆಯಾಗಿರುವ ಈ ವಾರ್ಗಿಕದ ಮೂಲ ಪಳ್ಳಿ. ಇದಕ್ಕೆ ಸಣ್ಣ ಊರು, ಗುಡಿಸಲು ಎಂಬ ಅರ್ಥಗಳಿರುವುದಲ್ಲದೆ, ಬೌದ್ಧ ಜೈನ ದೇವಾಲಯದ ಸ್ಥಳ ಎಂಬ ಅರ್ಥಗಳಿವೆ. ಕಿಟೆಲ್‌ರು ಪಳ್ಳಿ, ಪಳ್ಳಗಳ ಮೂಲ 'ಪಡು'ವಿನಲ್ಲಿದೆ ಎಂದು ಹೇಳುತ್ತಾರೆ. ಕೆಳಗೆ ಬೀಳು, ಕೆಳಗೆ ಹೋಗು, ಎಂಬ ಅರ್ಥವನ್ನು ಕೊಡುತ್ತಾರೆ. ಪಳ್ಳ ಎಂಬುದಕ್ಕೆ ತಗ್ಗು, ಆಳ, ತೊರೆ, ಎಂಬರ್ಥಗಳಿರುವುದರಿಂದ

ನೀರಿನಾಶ್ರಯದ ತಗ್ಗಿನ ನೆಲೆಯ ಹಳ್ಳಿಯೆಂದು ಭಾವಿಸಲು ಅವಕಾಶವಿದೆ.

**ಹಾಳ್:** ದ್ರಾವಿಡ ಮೂಲದ ವಾರ್ಗಿಕ ಇದಾಗಿದ್ದು ತಮಿಳು, ಮಲೆಯಾಳಂಗಳಲ್ಲಿ ಪಾಳ ಎಂದು, ತುಳುವಿನಲ್ಲಿ ಪಾಳು ಎಂದು ಕನ್ನಡದಲ್ಲಿ ಹಾಳ್, ಹಾಳು ಎಂದು ಬಳಕೆಯಾಗಿದೆ. ಪಾಳ್, ಹಾಳ್ ಮುಂತಾದ ರೂಪಗಳ ಮೂಲ 'ಪಡು'ವಿನಲ್ಲಿದೆ. ಕನ್ನಡದಲ್ಲಿ ಈ ಶಬ್ದಗಳಲ್ಲಿ ಹಾಳು ಬಿದ್ದ ಭೂಮಿ, ಸಾಗುವಳಿ ಮಾಡದ ಭೂಮಿ, ಒಣಗಿದ ಭೂಮಿ ಎಂಬರ್ಥಗಳಿವೆ. ಪೊಳಲು ಎಂದರೆ ಪಟ್ಟಣ ಎಂದರ್ಥ. ಪ > ಹ ಕಾರ ಆಗಿ ಹೊಳಲು ಆಗಿ ಸೌಲಭ್ಯಕಾಂಕ್ಷೆಯಿಂದಾಗಿ ಹಾಳ್, ಹಾಳ ಆಗಿರುವ ಸಾಧ್ಯತೆಗಳನ್ನು ಕಾಣಬಹುದಾಗಿದೆ.

**ಕೋಡು– ಗುಂಡಿ, – ಸಂತೆ**

**ಕೋಡು–** ಭೌಗೋಳಿಕ ಲಕ್ಷಣವನ್ನು ಸೂಚಿಸುವ ಪದವಾಗಿದ್ದು ಬೆಟ್ಟ, ದಿನ್ನೆ ಎಂಬರ್ಥಗಳಿವೆ. ಕುಪ್ಪೆ, ಗುಡ್ಡಗಾಡು, ಕಾಡು ಎಂಬರ್ಥಗಳಿವೆ. ಉದಾಹರಣೆ: ಅಸಗೋಡು, ಆನಗೋಡು

**ಗುಂಡಿ :** ಜಲವಾಚಿ ಪದ ಆಳ, ಕುಣಿ, ಕುಳಿ, ಮಣ್ಣನ್ನು ತೆಗೆದು ಹಳ್ಳವಾಗಿರುವ ಪ್ರದೇಶ ಎಂಬರ್ಥಗಳಿವೆ. ಉದಾ: ಅರಿಶಿಣ ಗುಂಡಿ

**ಸಂತೆ :** ಸಂತೆ ವಾರ್ಗಿಕವು ಜನಸಂದಣಿಯ ನೆಲೆಯಾಗಿದೆ ವಿನಿಮಯ ಕೇಂದ್ರವಾಗಿ ಕನ್ನಡದಲ್ಲಿ ಬಳಕೆಯಾಗುತ್ತಿದೆ. ತಮಿಳಿನಲ್ಲಿ ಚನ್ತೆ, ಮಲೆಯಾಳಂನಲ್ಲಿ ಚನ್ತ, ತೆಲುಗಿನಲ್ಲಿ ಸಂತ, ಕನ್ನಡ ತುಳುಗಳಲ್ಲಿ ಸಂತೆಯೆಂದು ಬಳಕೆಯಾಗುತ್ತದೆ.

**ಮರಡಿ–ಸಮುದ್ರ–ಹಟ್ಟಿ**

**ಮರಡಿ:** ಮರಡಿ ಭೂಸ್ಥಿತಿವಾಚಿ ಪದ. ಮರಡಿ, ಮೊರಡಿ ಎಂಬ ರೂಪದಿಂದ ಬಂದಿದೆ. ಮೊರಡಿ ಎಂದರೆ ದಿನ್ನೆ, ಗುಡ್ಡ ಎಂತಲೂ ಅರ್ಥವಿದೆ. ಉದಾಹರಣೆ : ಹೊನ್ನಮರಡಿ,

**ಸಮುದ್ರ:** ಸಮುದ್ರ ಎಂಬುದು ಜಲವಾಚಿ ಪದವಾಗಿದ್ದು, ಇದು ಸಂಸ್ಕೃತ ಭಾಷೆಯ ಪ್ರಭಾವದಿಂದ ಬಂದಿದೆ. ಕಡಲು, ಸಾಗರ, ಮುದ್ರೆಯೊತ್ತಿದ ಎಂಬರ್ಥಗಳಿವೆ. ಸಮುದ್ರ ಅಥವಾ ಸಾಗರ ಎಂಬ ಪದ ಜಲಾಶಯ ಎಂಬರ್ಥವನ್ನು ನೀಡುತ್ತದೆ. ಈ ಜಿಲ್ಲೆಯ ಸ್ಥಳನಾಮಗಳಲ್ಲಿ ಸಮುದ್ರ ಕೆರೆ ಕಟ್ಟೆ ಎಂದು ನಿರ್ದೇಶಿಸುತ್ತದೆ. ಉದಾಹರಣೆಗೆ: ಭರಮಸಾಗರ, ಶಾಂತಿಸಾಗರ,

**ಹಟ್ಟಿ:** ಹಟ್ಟಿ ವಸತಿವಾಚಿ ಪದ. ದನ, ಕುರಿ ಮೊದಲಾದವುಗಳನ್ನು ಕೂಡಿ ಹಾಕುವ ಸ್ಥಳ. ಕೊಟ್ಟಿಗೆ, ರೊಪ್ಪ, ಚಿಕ್ಕಹಳ್ಳಿ, ಗುಡಿಸಲು, ಎಂಬರ್ಥಗಳಿವೆ. ಆದಿಮಾನವರು ಆರಂಭದಲ್ಲಿ ಪ್ರಾಣಿಗಳನ್ನು ಸಾಕಲು ಪ್ರಾರಂಭಿಸಿದರು. ಆ ಪ್ರಾಣಿಗಳ ರಕ್ಷಣೆಗಾಗಿ ಒಂದು ಕಡೆ ಹಟ್ಟಿಗಳನ್ನು ನಿರ್ಮಿಸಿದರು. ಮುಂದೆ ಅವು ಗ್ರಾಮಗಳಾಗಿ ರೂಪಗೊಂಡವು. ಉದಾಹರಣೆಗೆ: ಚಿಕ್ಕ ಬನ್ನಿಹಟ್ಟಿ, ಹಿರೆಬನ್ನಿಹಟ್ಟಿ, ಹಾಗೂ ಅಗರಬನ್ನಿಹಟ್ಟಿ.

ಹೀಗೆ ದಾವಣಗೆರೆ ಜಿಲ್ಲೆಯ ಸ್ಥಳನಾಮಗಳಲ್ಲಿ ಅಧಿಕವಾಗಿ ಬಳಕೆಯಾಗಿರುವ ವಾರ್ಗಿಕಗಳು ಈ ಮೇಲ್ಕಾಣಿಸಿದಂತೆ ಮುಖ್ಯವಾದವುಗಳನ್ನು ಚರ್ಚಿಸಲಾಗಿದ್ದು, ಇನ್ನೂ ಕೆಲವಾರು ವಾರ್ಗಿಕಗಳು ಬಂದರೂ ಹೆಚ್ಚಾಗಿ ಬಳಕೆ ಆಗಿರದ ಕಾರಣ ಬಹಳ ಮುಖ್ಯವಾದವುಗಳನ್ನಷ್ಟೇ ಚರ್ಚೆ ಮಾಡಲಾಗಿದೆ.

**ಪರಾಮರ್ಶನ ಗ್ರಂಥಗಳು**


- ಅಂಗಡಿ, ಎಸ್.ಎಸ್. (2010). *ಶಂಬಾ ಜೋಶಿ ಭಾಷಿಕ ವಿವೇಚನೆ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ಚಿದಾನಂದಮೂರ್ತಿ, ಎಂ. (1981). *ವಾಗಾರ್ಥ.* ಬಾಪ್ಕೋ ಪ್ರಕಾಶನ.
- ಗಿರಿಜಾ. ಟಿ. (2019). ದಾವಣಗೆರೆ ಇದು ನಮ್ಮ ಜಿಲ್ಲೆ.
- ಕಲಬುರ್ಗಿ, ಎಂ.ಎಂ.. (1989). *ಕನ್ನಡ ನಾಮ ವಿಜ್ಞಾನ.* ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
- ನಾರಾಯಣ, ಕೆ.ವಿ. (ಸಂ.) (1999). *ಸ್ಥಳನಾಮಗಳು ಪರಿವರ್ತನೆ ಮತ್ತು ಪ್ರಭಾವ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 30-33
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಕನ್ನಡ ಸಾಹಿತ್ಯದಲ್ಲಿ ಪರಿಸರ ಮತ್ತು ಸಂಶೋಧನಾ ಹೊಳಹುಗಳು

**ಡಾ. ಸೌಮ್ಯ ಕೆ. ಸಿ**
ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ತೀರ್ಥಹಳ್ಳಿ.

**Abstract:**
*ಸುಂದರವಾದ ಪ್ರಕೃತಿಗೆ ಮನಸೋಲದವರಿಲ್ಲ. ಪ್ರಕೃತಿ ಮನಸ್ಸಿಗೆ ಮುದವನ್ನೀಯುತ್ತಾ ಮನುಷ್ಯನೂ ಸಹ ಪ್ರಕೃತಿಯ ವಿಸ್ಮಯಗಳಿಗೆ ಅದರ ಅದ್ಭುತತೆಗೆ ಬೆರಗಾಗುತ್ತಲೇ ನಿಗೂಢತೆಗೆ ದಂಗಾಗಿದ್ದಾನೆ. ಆತನ ಸಂಶೋಧನೆಗಳಿಗೂ ನಿಲುಕದ ಅದೆಷ್ಟೋ ಸಂಗತಿಗಳು ಪ್ರಕೃತಿಯಲ್ಲಿವೆ. ಪ್ರಕೃತಿಯ ಕೋಟ್ಯಾನುಕೋಟಿ ಜೀವಿಗಳಲ್ಲಿ ಮನುಷ್ಯನೂ ಒಬ್ಬ. ಸೂರ್ಯ– ಚಂದ್ರ, ಹಗಲು–ರಾತ್ರಿ, ಸಮುದ್ರ–ನದಿ, ಪ್ರಾಣಿ–ಪಕ್ಷಿ, ಗಿಡ–ಮರಗಳ ಅನ್ಯೋನ್ಯ ನೆರವಿನ ಪರಿಣಾಮದಿಂದ ಜೀವ ಸಂಕುಲ ಬದುಕುತ್ತಾ ಬಂದಿದೆ. ಈ ಭೂಮಿ ಅಂತಹ ವೈಚಿತ್ರ್ಯಗಳನ್ನು ತನ್ನ ಗರ್ಭದಲ್ಲಡಗಿಸಿಕೊಂಡು ಮನುಷ್ಯನ ಮನಸ್ಸಿನಲ್ಲಿ ಕುತೂಹಲವನ್ನುಂಟು ಮಾಡುತ್ತಲೇ ಬಂದಿದೆ. ಪ್ರಸ್ತುತ ಲೇಖನದಲ್ಲಿ ಕನ್ನಡ ಸಾಹಿತ್ಯದಲ್ಲಿ ಪರಿಸರ ಮತ್ತು ಸಂಶೋಧನಾ ಹೊಳಹುಗಳನ್ನು ವಿವರಿಸಲಾಗಿದೆ.*

**Keywords:** *ಕನ್ನಡ ಸಾಹಿತ್ಯ, ಪರಿಸರ, ಸಂಶೋಧನಾ ಹೊಳಹುಗಳು, ಪ್ರಕೃತಿ.*

## ಪೀಠಿಕೆ

ವಿಸ್ಮಯಗಳ ತಾಣವಾದ ಪ್ರಕೃತಿ ಹಾಗೂ ಸಾಹಿತ್ಯಕ್ಕೆ ಅವಿನಾಭಾವವಾದ ಸಂಬಂಧವಿದೆ. ಕನ್ನಡ ಸಾಹಿತ್ಯವನ್ನು ಅವಲೋಕಿಸಿದರೆ ಪ್ರಾಚೀನಕಾಲದಿಂದ ಆಧುನಿಕ ಸಾಹಿತ್ಯದವರೆಗೆ ಹಲವು ಕವಿಗಳ ಸಾಹಿತ್ಯಕ್ಕೆ ಪ್ರೇರೇಪಣೆಯಾದದ್ದು ಪ್ರಕೃತಿ. ಆ ಪ್ರಕೃತಿಯ ರಮ್ಯತೆಗೆ ಮನಸೋಲದ ಕವಿಗಳೇ ಇಲ್ಲ. ಜನಪದರಿಗಂತೂ ಪ್ರಕೃತಿಯೇ ಸರ್ವಸ್ವ. ಜನಪದ ಸಾಹಿತ್ಯದ ಮೂಲದ್ರವ್ಯವೇ ಪ್ರಕೃತಿ.

***ಏಳುತಾಲೆ ನಾನೆದ್ದು ಯಾರ್‍ಯಾರ ನೆನೆಯಾಲಿ***
***ಎಳ್ಳು ಜೀರಿಗೆ ಬೆಳೆಯೋಳ । ಭೂಮ್ತಾಯಿ***
***ಎದ್ದೊಂದು ಘಳಿಗೆ ನೆನೆದೇನ ॥***

ಎಂಬ ತ್ರಿಪದಿಯಲ್ಲಿ ಭೂಮಿತಾಯಿಯ ಒಡಲಿನ ಶಕ್ತಿಯನ್ನು ಸ್ಮರಿಸುತ್ತಾ ಮನುಷ್ಯರ ಬದುಕಿಗೆ ಜೀವದಾತೆಯಾಗಿರುವುದರಿಂದ ಆಕೆಗೆ ಕೃತಜ್ಞತೆಗಳನ್ನು ಅ ಬೆಟ್ಟಾದ ಬಿದಿರೇ ಹಟ್ಟಿಗೆ ನೆರಳಾದೆ, ಗಿಡದಾಗ ಗಿಡ ಚೆಲುವ, ಅಪ್ಪ ನೀನಿಲ್ಲದೆ ಬೆಪ್ಪಾದೋ ಈ ಭೂಮಿ ಮುಂತಾದ ಜನಪದ ಗೀತೆಗಳು ಪ್ರಕೃತಿಯಲ್ಲಿನ ವೈವಿಧ್ಯತೆಯನ್ನು ಸಾರಿವೆ.

ಪ್ರಾಚೀನ ಕಾಲದಲ್ಲಿ ಅಷ್ಟಾದಶ ವರ್ಣನೆಯ ಅನಿವಾರ್ಯತೆಯಿದ್ದು ಅದರಲ್ಲಿ ಪ್ರಕೃತಿ ವರ್ಣನೆಯೂ ಒಂದಾಗಿತ್ತು. ನಡುಗನ್ನಡ ಕಾಲದಲ್ಲಿಯೂ ಪ್ರಕೃತಿಯು ಕವಿಗಳ ಕಾವ್ಯದ ಒಂದು ಭಾಗವಾಗಿಯೇ ಕಂಡುಬರುವುದು. ಪಂಪ, ರನ್ನ, ಜನ್ನ, ಕುಮಾರವ್ಯಾಸ, ನಾಗಚಂದ್ರ, ನಂಜುಂಡ ಕವಿ, ಆಂಡಯ್ಯ ಹೀಗೆ ಕನ್ನಡ ನಾಡಿನ ಪ್ರಕೃತಿಗೆ

***Please cite this article as:*** ಸೌಮ್ಯ. ಕೆ.ಸಿ. (2024). ಕನ್ನಡ ಸಾಹಿತ್ಯದಲ್ಲಿ ಪರಿಸರ ಮತ್ತು ಸಂಶೋಧನಾ ಹೊಳಹುಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವಲಪ್‌ಮೆಂಟ್*, 3(3), 30–33

ಮನಸೋಲದವರೇ ಇಲ್ಲ. ಪಂಪ ತನ್ನ ವಿಕ್ರಮಾರ್ಜುನ ವಿಜಯ ಕಾವ್ಯದಲ್ಲಿ,

***"ತೆಂಕಣ ಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡ ಮಿಂಪನಾಳ್ದ ಗೇ***

***ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ***

***ಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡ ಮೇನನೆಂಬೆನಾ***

***ರಂಕುಸವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ"***

ಎನ್ನುವ ಮೂಲಕ ಕರ್ನಾಟಕದ ನೈಸರ್ಗಿಕ ಸತ್ವವು ಪಂಪನನ್ನು ಆಕರ್ಷಿಸಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಮಧ್ಯಕಾಲೀನ ಕನ್ನಡ ಸಾಹಿತ್ಯದ ಕಾಲಘಟ್ಟದಲ್ಲಿನ ಕವಿ ಆಂಡಯ್ಯ ತನ್ನ 'ಕಬ್ಬಿಗರ ಕಾವ' ಕೃತಿಯಲ್ಲಿ

***"ಪಲವು ನಾಲಿಗೆಯುಳ್ಳವಂ ಬಗೆವೊಡೆಮದುಂ ಬಣ್ಣಿಸಲಾರನಾ***

***ನೆಲನಂ ಮುತ್ತಿನ ಮಾನಿಸರ್ ಪೊಗಳಲೇನಂ ಬಲ್ಲರೆಂಬೊಂದು ಬ***

***ಲ್ಲುಲಯಂ ನೆಟ್ಟನೆ ತಾಳ್ದು ಕನ್ನಡಮೆನಿಪ್ಪಾನಾಡು ಚೆಲ್ವಾಯ್ತು ಮೆ***

***ಲ್ಲಲರಿಂ ಪೂತ ಕೊಳಗಳಂ ಕೆರೆಗಳಿಂ ಕಾಲೂರ್ಗಳಿಂ ಕಯ್ಗಳಿಂ"***

ಎನ್ನುತ್ತಾ ಕನ್ನಡನಾಡಿನ ಬಗೆಗೆ ಅಭಿಮಾನವುಳ್ಳವನಾಗಿ ಹಲವು ನಾಲಿಗೆಯುಳ್ಳವನಾದ ಆದಿಶೇಷನಿಗಗೂ ಕನ್ನಡ ನಾಡನ್ನು ವರ್ಣಿಸಲು ಸಾಧ್ಯವಿಲ್ಲದಿರುವಾಗ ಸಾಮಾನ್ಯರು ಹೇಗೆ ಬಣ್ಣಿಸಲು ಸಾಧ್ಯ ಎಂದಿದ್ದಾನೆ. ವಚನಕಾರರು, ಕೀರ್ತನಕಾರರು ಅಧ್ಯಾತ್ಮವನ್ನು ಪ್ರಕೃತಿಯೊಂದಿಗೇ ಸಮೀಕರಿಸುತ್ತಾ ವಚನಗಳನ್ನು ಕಟ್ಟಿದ್ದಾರೆ. ಅಕ್ಕಮಹಾದೇವಿಯು ತನ್ನ ವಚನದಲ್ಲಿ,

***"ಈಳೆ, ನಿಂಬೆ, ಮಾವು ಮೊದಲಾದವಕ್ಕೆ***
***ಹುಳಿನೀರನೆರೆದವರ್‍ಯಾರಯ್ಯ?***
***ತೆಂಗು, ಹಲಸು, ಭಾಳೆ, ನಾರಿವಾಳಕ್ಕೆ***
***ಸಿಹಿನೀರನೆರೆದವರಾರಯ್ಯ?"***

ಎನ್ನುತ್ತ ಪ್ರಕೃತಿಯ ವಿಸ್ಮಯಕ್ಕೆ ಚಕಿತಳಾಗುತ್ತಾಳೆ.

ಆಧುನಿಕ ಕನ್ನಡ ಸಾಹಿತ್ಯದ ವಿವಿಧ ಘಟ್ಟಗಳ ಕವಿಗಳ ಸಾಹಿತ್ಯದಲ್ಲಿಯೂ ಪ್ರಕೃತಿ ವಿಭಿನ್ನವಾಗಿ ಪ್ರಭಾವಿಸಿದೆ. ರಸಋಷಿ ಕುವೆಂಪುರವರು ಪ್ರಕೃತಿಯಲ್ಲಿ ಚೈತನ್ಯವನ್ನು ಕಾಣುತ್ತಾ ಆಧ್ಯಾತ್ಮೀಕರಿಸುತ್ತಾರೆ. ಪ್ರಕೃತಿಯ ಸಂಗತಿಗಳಿಗೆ ಕೌತುಕಗೊಳ್ಳುತ್ತಾರೆ. ಅವರ ಪಕ್ಷಿಕಾಶಿ ಕವನ ಸಂಕಲನದಲ್ಲಿ ಸೂರ್ಯೋದಯ, ಚಂದ್ರೋದಯ, ಮಳೆ–ಚಳಿ, ಹಿಮ, ಹೂವು–ಲತೆ, ಪಕ್ಷಿ ಇವೆಲ್ಲವುಗಳ ಸುಂದರ ಚಿತ್ರಣ ಕಂಡುಬರುತ್ತದೆ. ಬೇಂದ್ರೆಯವರು ತಮ್ಮ ಕಾವ್ಯಗಳಲ್ಲಿ ಪ್ರಕೃತಿಯ ರಮ್ಯವಾದ ಚಿತ್ರಣವನ್ನು ಕಟ್ಟಿಕೊಡುತ್ತಾ ಅವರು ಬದುಕಿದ್ದ ಕಾಲಘಟ್ಟದ ಪ್ರಕೃತಿಯ ಸಮೃದ್ಧತೆಯನ್ನು ಸ್ಪಷ್ಟಪಡಿಸುತ್ತಾರೆ,

***"ಬಾರೋ ಸಾಧನಕೇರಿಗೆ ಮರಳಿ ನಿನ್ನೀ ಊರಿಗೆ***
***ಮಳೆಯು ಎಳೆಯುವ ತೇರಿಗೆ ಹಸಿರು ಏರಿದೆ ಏರಿಗೆ***
***ಹಸಿರು ಸೇರಿದೆ ಊರಿಗೆ, ಹಸಿರು ಚಾಚಿದೆ ದಾರಿಗೆ"***

ಎಂಬ ಸಾಲುಗಳು ದಾರಿಗೆ ಹಬ್ಬಿಕೊಂಡ ಹಸಿರು, ಹಸಿರಿನೊಂದಿಗೆ ಬೆಸೆದುಕೊಂಡ ಮಳೆಯು ಪ್ರಕೃತಿಗೆ ಹೊಸ ಮೆರುಗನ್ನು ನೀಡಿರುವುದು ಸ್ಪಷ್ಟವಾಗಿದೆ. ಜಿ.ಎಸ್.ಎಸ್, ಶಿವರಾಮ ಕಾರಂತರು, ಪೂರ್ಣಚಂದ್ರ ತೇಜಸ್ವಿ, ಬಂಡಾಯ ಸಾಹಿತಿಯಾದ ಬರಗೂರು ಹೀಗೆ ಪ್ರಕೃತಿಯನ್ನು ಸಾಹಿತ್ಯದ ಭಾಗವಾಗಿಸಿಕೊಳ್ಳುವ ಮೂಲಕ ತಾವು ಬದುಕಿದ್ದ ಪ್ರಕೃತಿಯ ರಮ್ಯ ನೋಟವನ್ನು ಸಹೃದಯರಿಗೆ ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಇವರೆಲ್ಲರೂ ಪ್ರಕೃತಿಯ ಕುರಿತು ಬರೆದು ದಾಖಲಿಸಿದ್ದರಿಂದಲೇ ನಮಗಿಂದು ಪ್ರಕೃತಿ ಎಷ್ಟು ಕಳಾಹೀನವಾಗುತ್ತಿದೆ ಎಂಬುದರ ಅರಿವು ಹತ್ತುತ್ತಿದೆ.

ಮಾನವ ಭುವಿಯ ಮೇಲೆ ಅವತರಿಸಿದಾಗ ದುರ್ಬಲನಾಗಿಯೇ ಇದ್ದವನು. ಅನಂತರ "ಭೂ ವೈಜ್ಞಾನಿಕ ಕಾಲಮಾನದಲ್ಲಿ ನೋಡಿದರೆ ಆತ ಮಿಂಚಿನ ವೇಗದಲ್ಲಿ ಭೂಲಕ್ಷಣಗಳನ್ನು ಬದಲಾಯಿಸತೊಡಗಿದ. ಅಡವಿಗಳು ನೆಲಸಮವಾದವು; ಮರುಭೂಮಿಗಳು

ವಿಸ್ತರಿಸತೊಡಗಿದವು, ನೆಲದೊಳಕ್ಕೆ ಸುರಂಗ, ಸಮುದ್ರಗಳನ್ನು ಜೋಡಿಸುವ ಕಾಲುವೆ ಸಂಪರ್ಕ, ನದಿಗಳಿಗೆ ಅಡ್ಡಗಟ್ಟೆ, ಪರ್ವತಗಳಲ್ಲಿ ಗಣಿ ಕೆಲಸ, ನದಿಗಳ ಧಾರೆ ಬದಲಾವಣೆ ಹೀಗೆ ಏನೆಲ್ಲ ಮಾಡತೊಡಗಿದ."[1] ಇದರಿಂದ ಭೂಮಿಯ ಸಕಲ ಸಮತೋಲನವೂ ಏರುಪೇರಾಗುತ್ತಿದೆ. ಆಧುನಿಕತೆಯ ಭರಾಟೆಯಲ್ಲಿ ಪ್ರಕೃತಿಯೊಂದಿಗೆ ನಮಗಿರಬೇಕಾದ ಸಂಬಂಧವನ್ನೇ ಮಾನವ ಕಳಚಿಕೊಳ್ಳುತ್ತಿದ್ದಾನೆ.

"ಇತ್ತೀಚೆಗೆ ಮನುಷ್ಯನು ಅವನ ಸುತ್ತಲಿನ ಪರಿಸರ ಇರುವುದೇ ಸ್ವಾರ್ಥಸಾಧನೆಗಾಗಿ ಎಂಬ ಭಾವನೆಯಿಂದ ಕಬಳಿಸುತ್ತಾ ಬಂದಿದ್ದಾನೆ. ನಿಸರ್ಗದಲ್ಲಿ ಅಡಗಿದ ಅದ್ಭುತ ಶಕ್ತಿಗಳನ್ನು ಗೆದ್ದುಕೊಳ್ಳಲು ಕಲಿತಿದ್ದಾನಲ್ಲದೆ ಬಾಹ್ಯಾಕಾಶವನ್ನೂ ಗೆದ್ದುಕೊಳ್ಳುವ ಹಂಬಲ ಕೂಡ ಹೊಂದಿದ್ದಾನೆ."[2] ಈ ಭೂಮಿಯನ್ನು ಒಡವೆಯಂತೆ ಗ್ರಹಿಸಿ, ವ್ಯವಹಾರಿಕವಾಗಿ ನೋಡುತ್ತಾ ಸಂಪತ್ತಿನ ಮೂಲವಾಗಿ ಭಾವಿಸಲಾಗಿದೆ. ಅಭಿವೃದ್ಧಿಯ ಹೆಸರಿನಲ್ಲಿ ಪ್ರಕೃತಿಯ ಮೇಲೆ ದೌರ್ಜನ್ಯವೆಸಗುತ್ತಲೇ ಬಂದಿದ್ದೇವೆ. ತಿನ್ನುವ ಆಹಾರದಿಂದ ಹಿಡಿದು ನೆಲ, ಜಲ ಎಲ್ಲವೂ ಇಂದು ಕಲುಷಿತಗೊಂಡಿವೆ.

ನಮ್ಮ ಸುತ್ತಲಿನ ಪ್ರಕೃತಿಯ ಮಹತ್ವವನ್ನು ನಮಗೆ ನಿರಂತರವಾಗಿ ಎಚ್ಚರಿಸುತ್ತಾ ಅದನ್ನು ಉಳಿಸಿ ಬೆಳೆಸುವಲ್ಲಿ ಸಾಹಿತಿಗಳೂ ಪ್ರಯತ್ನಿಸಿದ್ದಾರೆ. ಕಾರಂತರು, ತೇಜಸ್ವಿಯವರು, ಅನಂತಮೂರ್ತಿಯವರು ತಮ್ಮ ಸೃಜನಶೀಲ ಸಾಹಿತ್ಯದಲ್ಲಿಯೇ ಪರಿಸರವನ್ನು ಉಳಿಸಿಕೊಳ್ಳುವ ಕಾಳಜಿ ತೋರುವುದರ ಜೊತೆಗೆ ವೈಚಾರಿಕವಾದ ಸಾಹಿತ್ಯದ ಮೂಲಕ ತಮ್ಮ ಕಳಕಳಿಯನ್ನು ವ್ಯಕ್ತಪಡಿಸಿದ್ದಾರೆ. ನೆಲ–ಜಲದ ಉಳಿವಿಗಾಗಿ ಚಳವಳಿಗಳನ್ನೂ ಮಾಡಿದ್ದಾರೆ.

ಇಂದು ನಾವು ವಿಷಮ ಸ್ಥಿತಿಯಲ್ಲಿದ್ದೇವೆ. ಪ್ರಕೃತಿಯ ಕುರಿತು ರಮ್ಯವಾದ ಸಾಹಿತ್ಯಿಕ ಅಂಶಗಳ ಜೊತೆಗೆ ವೈಜ್ಞಾನಿಕವಾದ ಆಲೋಚನೆ ಅತ್ಯಗತ್ಯವಾಗಿದೆ. ವಿಜ್ಞಾನಿಗಳು, ಪರಿಸರ ತಜ್ಞರು ಯಾವುದೇ ಫಲಾಪೇಕ್ಷೆ ಇಲ್ಲದೆ ತಮ್ಮ ಬರವಣಿಗೆ, ಉಪನ್ಯಾಸ, ಪರಿಸರ ಆಂದೋಲನದ ಮೂಲಕ ಪ್ರಕೃತಿಯನ್ನು ಹಾಳುಗೆಡವುತ್ತಿರುವ ಮನುಷ್ಯರ ಚಟುವಟಿಕೆಗಳನ್ನು ಖಂಡಿಸುತ್ತಾ, ನಮ್ಮನ್ನು ಎಚ್ಚರಿಸುತ್ತಿದ್ದಾರೆ.

ಶ್ರೀ.ನಾಗೇಶ್ ಹೆಗಡೆಯವರು 'ಪ್ರತಿದಿನ ಪರಿಸರ ದಿನ' ಕೃತಿಯಲ್ಲಿ ಪರಿಸರದಲ್ಲಿನ ಏರುಪೇರುಗಳಿಗೆ ಕಾರಣೀಕರ್ತನಾದ ಮಾನವನ ಬಗೆಗೆ ಪ್ರಸ್ತಾಪಿಸುತ್ತಾ "ಈತ ಭೂ ಲಕ್ಷಣಗಳನ್ನು ಮಿಂಚಿನ ವೇಗದಲ್ಲಿ ಬದಲಾಯಿಸ ತೊಡಗಿದ. ಅಡವಿಗಳು ನೆಲಸಮವಾದವು. ಮರುಭೂಮಿಗಳು ವಿಸ್ತರಿಸತೊಡಗಿದವು, ನೆಲದೊಳಕ್ಕೆ ಸುರಂಗ, ಸಮುದ್ರಗಳನ್ನು ಜೋಡಿಸುವ ಕಾಲುವೆ ಸಂಪರ್ಕ, ನದಿಗಳಿಗೆ ಅಡ್ಡಗಟ್ಟೆ, ಜಲಾಶಯಗಳಿಂದ ಕಾಲುವೆ ಜಾಲ, ಪರ್ವತಗಳಲ್ಲಿ ಗಣಿ ಕೆಲಸ ಹೀಗೆ ಏನೆಲ್ಲಾ ಮಾಡತೊಡಗಿದ" ಎಂದಿದ್ದಾರೆ.

ಇಂದು ಸಾಹಿತ್ಯದಲ್ಲಿಯೂ ಪ್ರಕೃತಿಯ ಕುರಿತು ಚರ್ಚೆ ನಡೆಯುತ್ತಿದೆ. ಚರ್ಚೆಗೆ ಕಾರಣ ಭೂಮಿಯನ್ನು ಕಾಡುತ್ತಿರುವ ಹಸಿರುಮನೆ ಪರಿಣಾಮ, ಓಜೋನ್ ಪದರದ ಸಮಸ್ಯೆ, ತ್ಯಾಜ್ಯವಸ್ತು ವಿಲೇವಾರಿ ಮತ್ತು ಜೀವವೈವಿಧ್ಯ ನಾಶವಾಗಿದೆ. ಈ ಕುರಿತ ಜಾಗೃತಿಯ ಕಾರ್ಯವನ್ನು ಪರಿಸರ ವಿಜ್ಞಾನಿಯಾದ ನಾಗೇಶ್ ಹೆಗಡೆ, ಪರಿಸರ ಪ್ರಿಯರಾದ ಸಿ.ಎಚ್.ಬಸಪ್ಪನವರ್, ಕೃಷ್ಣಮೂರ್ತಿ ಎಚ್.ಆರ್ ಮುಂತಾದವರು ಮಾಡುತ್ತಿದ್ದಾರೆ.

ಇಂಗು ಗುಂಡಿ ನಿರ್ಮಾಣ, ಮಳೆ ನೀರು ಮರುಸಂಗ್ರಹಣ, ಬೀಜದುಂಡೆ ಅಭಿಯಾನ ಹೀಗೆ ಹತ್ತು ಹಲವು ಯೋಜನೆಗಳೊಂದಿಗೆ ಪ್ರಕೃತಿಯನ್ನು ಉಳಿಸಿ ಬೆಳೆಸಿಕೊಳ್ಳುವತ್ತ ಪ್ರಕೃತಿ ಪ್ರಿಯರು ಪಣತೊಟ್ಟರೆ ಇನ್ನೊಂದೆಡೆ ಎಗ್ಗಿಲ್ಲದಂತೆ ಪ್ರಕೃತಿಯನ್ನು ನಿರ್ದಾಕ್ಷಿಣ್ಯದಿಂದ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಿದ್ದೇವೆ ಇದರಿಂದ ಪ್ರಕೃತಿ ತನ್ನ ಸಹಜರೂಪವನ್ನು ಕಳೆದುಕೊಂಡು ಕಳಾಹೀನವಾಗುತ್ತಿದೆ. "ಮನುಷ್ಯನ ಆಸೆ

ಆಕಾಂಕ್ಷೆಯನ್ನು ಪೂರೈಸುವ ಶಕ್ತಿ ಪ್ರಕೃತಿಗಿದೆ ದುರಾಸೆಯನ್ನಲ್ಲ" ಎನ್ನುವ ಗಾಂಧಿಯ ಮಾತು ಮನನೀಯ. ಎಚ್.ಆರ್. ಕೃಷ್ಣಮೂರ್ತಿಯವರು "ಪ್ರಕೃತಿ ಬಡ್ಡಿ ತರುವ ಬಂಡವಾಳವಿದ್ದಂತೆ, ಮೂಲ ಬಂಡವಾಳಕ್ಕೆ ಎಂದೂ ಕೈಯಿಕ್ಕಬಾರದು" ಎಂಬ ಮಾತನ್ನು ಇಲ್ಲಿ ನೆನಪಿಸಬಹುದು.

ಬೇಂದ್ರೆಯವರು ಭೂಮಿಯ ದೋಚುವಿಕೆಯ ಕುರಿತು "ಒಡವ್ಯಲ್ಲೋ ಮಗನೇ ಒಡಲಿದ್ದ ಜೀವ" ಎಂಬ ಮಾತನ್ನು ಉಚ್ಚರಿಸುತ್ತಾರೆ. ಹೌದು ನಾವು ಜೀವಿಸುತ್ತಿರುವ ಈ ಪ್ರಕೃತಿಯ ಬಗೆಗೆ ನಮಗೆ ಒಲವಿರಬೇಕು ಅದನ್ನು ಉಳಿಸಿ ಮುಂದಿನ ಪೀಳಿಗೆಗೆ ರವಾನಿಸುವುದರೆಡೆಗೆ ನಮ್ಮ ಕಾಳಜಿಯಿರಬೇಕು. ಪರಿಸರವಾದಿಗಳು ಮತ್ತು ಜನಸಮುದಾಯ ಎಚ್ಚೆತ್ತರೆ ಪ್ರಕೃತಿಯ ಉಳಿವು ಸಾಧ್ಯ ಇಲ್ಲದಿದ್ದರೆ ಮನುಷ್ಯ ಭುವಿಯ ಮೇಲೆ ಬಾಳಿದ್ದ ಎಂಬ ದಾಖಲೆಯಷ್ಟೇ ಉಳಿಯುವ ಸಾಧ್ಯತೆಗಳೇ ಹೆಚ್ಚು. ಈ ಕುರಿತು ಸಂಶೋಧನೆ ಕೈಗೊಳ್ಳಲು ಹಲವು ಸಾಧ್ಯತೆಗಳಿವೆ.

- ಪರಿಸರದ ಕುರಿತಾಗಿ ಬರೆದ ಸಾಹಿತಿಗಳ ಸಾಹಿತ್ಯದ ತೌಲನಿಕ ಅಧ್ಯಯನ ಮಾಡುವುದು.
- ಕಾಲಘಟ್ಟಗಳಲ್ಲಿನ ಸಾಹಿತ್ಯದಲ್ಲಿ ಪಲ್ಲಟಗೊಂಡ ಪರಿಸರದ ಕುರಿತು ಅಧ್ಯಯನ ಮಾಡುವುದು.
- ಪರಿಸರವಾದಿಗಳ ಪರಿಸರದ ಕಳಕಳಿಯ ನೆಲೆಗಳ ಕುರಿತು ಸಂಶೋಧನೆ ಕೈಗೊಳ್ಳುವುದು.
- ಜನಪದೀಯರು ಪ್ರಕೃತಿಯನ್ನು ನೋಡುತ್ತಿದ್ದ ಕ್ರಮ ಹಾಗೂ ಅವರ ಆಚರಣೆಗಳು ಹೇಗೆ ಪ್ರಕೃತಿಯನ್ನು ರಕ್ಷಿಸುವಲ್ಲಿ ಪ್ರಧಾನವಾಗುತ್ತಿದ್ದವು ಎಂಬುದರ ಕುರಿತು ಸಂಶೋಧನೆಯ ಮೂಲಕ ಅರಿತುಕೊಳ್ಳುವುದು.
- ಅಭಿವೃದ್ಧಿಯ ನೆಪದಲ್ಲಿ ನಾಶವಾಗುತ್ತಿರುವ ಪ್ರಕೃತಿಯ ಅಂಕಿಅಂಶಗಳ ಕುರಿತು ಅಧ್ಯಯನ.
- ಪರಿಸರ ಸಂರಕ್ಷಣಾ ಕಾಯಿದೆಗಳ ಕುರಿತಾದ ಅಧ್ಯಯನ.

**ಕೊನೆಟಿಪ್ಪಣಿಗಳು**

1. ನಾಗೇಶ್ ಹೆಗಡೆ. (2011). *ಪ್ರತಿದಿನ ಪರಿಸರ ದಿನ.* ಅಂಕಿತ ಪುಸ್ತಕ. ಪುಟ. 10.
2. ಬಸಪ್ಪನವರ್ ಸಿ.ಎಚ್. *ಹಸಿರು ಉಸಿರು.* ಪುಟ–71

**ಪರಾಮರ್ಶನ ಗ್ರಂಥಗಳು**


- ಕೃಷ್ಣಮೂರ್ತಿ ಹೆಚ್ ಆರ್, *ಪರಿಸರ ಪರಿಸ್ಥಿತಿ.* ಕರ್ನಾಟಕ ಸರ್ಕಾರ.
- ಕುಲಕರ್ಣಿ, ಆರ್.ವಿ. (2004). ಆಂಡಯ್ಯ ಕವಿಯ ಕಬ್ಬಿಗರ ಕಾವಂ. ಕನ್ನಡ ಸಾಹಿತ್ಯ ಪರಿಷತ್ತು.
- ರಂಗನಾಥ್ ಮತ್ತು ಎ.ಎನ್.ಸೋಮಶೇಖರ್. (2005). *ಪರಿಸರ ಅಧ್ಯಯನ.* ಮೈಸೂರು ಬುಕ್ ಹೌಸ್.
- ಶ್ರೀಕಂಠಯ್ಯ, ತೀ.ನಂ. (ಸಂ.) (2015). *ರನ್ನ ಕವಿ ಗದಾಯುದ್ಧ ಸಂಗ್ರಹಂ.* ವಸಂತ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 34-39
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ತೇಜಸ್ವಿಯವರ ಸಾಹಿತ್ಯ : ಅಧ್ಯಯನದ ಹೊಸ ಸಾಧ್ಯತೆಗಳು

**ಉಂಡಾಡಿ ಸಂತೋಷ**
ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಪಾಶ್ಚಾಪೂರ
ಹುಕ್ಕೇರಿ ತಾಲೂಕು, ಬೆಳಗಾವಿ ಜಿಲ್ಲೆ

***Abstract:***
*ಇಂದು ಪರಿಸರದ ಸಮಸ್ಯೆಗಳು ವಿಶ್ವ, ದೇಶ, ಪ್ರಾದೇಶಿಕ, ಸ್ಥಳೀಯವಾರು ಅನನ್ಯವಾಗಿವೆ. ಅವುಗಳಿಗೆ ನಾನಾ ರೀತಿಯ ಪರಿಹಾರ ಮಾರ್ಗಗಳನ್ನು ಹಲವಾರು ರೀತಿಯಲ್ಲಿ, ನಾನಾ ಚಿಂತಕರು ಸೂಚಿಸುತ್ತಾ, ಆ ದಾರಿಯಲ್ಲಿ ಮುನ್ನಡೆಯುತ್ತಾ ಬರುತ್ತಿದ್ದಾರೆ. ಆದರೂ ದಿನನಿತ್ಯವೂ ಪ್ರಕೃತಿಯ ಸಮಸ್ಯೆಗಳು ಉಲ್ಬಣವಾಗುತ್ತಲೆ ಬರುತ್ತಿವೆ. ಆಧುನಿಕ ವಿಜ್ಞಾನ, ತಂತ್ರಜ್ಞಾನಗಳು ಏನೆಲ್ಲಾ ಸಾಧಿಸಿದರು ಪ್ರಾಕೃತಿಕ ಪರಿಸರದ ಸಮಸ್ಯೆಗಳಿಗೆ ಯಾರೂ, ಯಾವ ದೇಶವೂ ಸರಿಯಾದ ಪರಿಹಾರ ಮಾರ್ಗಗಳನ್ನು ಕಂಡುಕೊಂಡಂತೆ ಕಾಣುತ್ತಿಲ್ಲ. ದೂರದೃಷ್ಟಿಯ ಕಾರ್ಯಯೋಜನೆಗಳನ್ನು ಕೈಗೆತ್ತಿಕೊಂಡಿಲ್ಲ. ಈ ಹಿನ್ನೆಲೆಯಲ್ಲಿ ಪೂರ್ಣಚಂದ್ರ ತೇಜಸ್ವಿಯವರ ಸಾಹಿತ್ಯದಲ್ಲಿ ಇವತ್ತಿನ ಪ್ರಾಕೃತಿಕ ಮತ್ತು ಸಾಮಾಜಿಕ ಪರಿಸರದ ಸಮಸ್ಯೆಗಳಿಗೆ ಮಾರ್ಗೋಪಾಯಗಳನ್ನು ಕಂಡುಕೊಳ್ಳುವ ಕಿರುಪ್ರಯತ್ನ ಮಾಡಲಾಗಿದೆ.*

***Keywords:*** *ಕನ್ನಡ ಸಾಹಿತ್ಯ, ಪರಿಸರ, ಜೀವವೈವಿಧ್ಯತೆ, ಪೂರ್ಣಚಂದ್ರ ತೇಜಸ್ವಿ, ಪರಿಸರದ ಕಥೆ, ಕಾಡು ಮತ್ತು ಕ್ರೌರ್ಯ, ಚಿದಂಬರ ರಹಸ್ಯ.*

## ಪೀಠಿಕೆ

ತೇಜಸ್ವಿಯವರ ಸಾಹಿತ್ಯವನ್ನು ಅಧ್ಯ ಯನಕ್ಕೆ ಒಳಪಡಿಸಿ, ಪ್ರಕೃತಿಯೊಂದಿಗೆ ಜೀವಿಗಳ ಸಂಬಂಧದ ಮಹತ್ವ, ಅವುಗಳ ಪರಿಣಾಮಗಳನ್ನು ಕುರಿತು ಪರಿಶೋಧಿಸಿ, ಉತ್ತರಗಳನ್ನು ಕಂಡುಕೊಂಡು ಇಂದಿನ ಪ್ರಾಕೃತಿಕ ಪರಿಸರದ ಹಲವಾರು ಸಮಸ್ಯೆಗಳಿಗೆ ಪರಿಹಾರ ಮಾರ್ಗಗಳನ್ನು ಹುಡುಕಬಹುದು. ತೇಜಸ್ವಿಯವರ ಸಾಹಿತ್ಯದಲ್ಲಿ ಸಮುದಾಯ ಪ್ರಜ್ಞೆಯು ಎದ್ದು ಕಾಣುತ್ತದೆ. ಅವರ ವ್ಯಕ್ತಿತ್ವದಂತೆ ಅವರ ಸಾಹಿತ್ಯವು ಹಲವು ಮಗ್ಗಲುಗಳನ್ನು ಒಳಗೊಂಡಿದೆ. ಅವರ ಸಾಹಿತ್ಯದ ಮೂಲಧಾತುಜನರ ಸಮಸ್ಟಿ ಪ್ರಜ್ಞೆಯನ್ನು ಕೇಂದ್ರವಾಗಿ ಹೊಂದಿದೆ. ಅವರ ಕೃತಿಗಳು ಸಮುದಾಯದ ಸಮಸ್ಟಿ ಪ್ರಜ್ಞೆಯನ್ನು ಸರಳವಾಗಿ ವಿವರಿಸುವುದರ ಮೂಲಕ ಹೊಸ ಒಳನೋಟಗಳನ್ನು ಜನರಿಗೆ ತಲುಪಿಸುವಲ್ಲಿ ಸದಾ ಯಶಸ್ವಿಯಾಗಿವೆ. ತೇಜಸ್ವಿ ಒಬ್ಬ ಬರಹಗಾರರಾಗಿ ಮಾತ್ರವಲ್ಲದೆ ಪ್ರಯೋಗಶೀಲ ಕೃಷಿಕರಾಗಿ, ಛಾಯಾಗ್ರಾಹಕರಾಗಿ, ಕುತೂಹಲಿ ವ್ಯಕ್ತಿಯಾಗಿ, ಅನ್ವೇಷಕರಾಗಿ, ರೈತಪರ ಚಳುವಳಿಗಾರರಾಗಿ, ಪರಿಸರಚಿಂತಕರಾಗಿ, ರಾಜಕೀಯ ವಿಶ್ಲೇಷಕರಾಗಿ ಅಷ್ಟೇ ಅಲ್ಲದೆ ಅವರೊಬ್ಬ ಬೇಟೆಗಾರರಾಗಿರುವ ಕಾರಣ ಅವರ ಸಾಹಿತ್ಯ ಮತ್ತು ಚಿಂತನೆಗಳ ಹಿನ್ನೆಲೆಯಲ್ಲಿ ಪ್ರಕೃತಿಯೊಂದಿಗೆ ಜೀವಿಗಳ

***Please cite this article as:*** ಉಂಡಾಡಿ ಸಂತೋಷ. (2024). ತೇಜಸ್ವಿಯವರ ಸಾಹಿತ್ಯ: ಅಧ್ಯಯನದ ಹೊಸ ಸಾಧ್ಯತೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 34–39

ಸಂಬಂಧವನ್ನು ಕಟ್ಟಿಕೊಡುವುದು, ವಿಶ್ಲೇಷಿಸುವುದು ಬಹಳ ಮುಖ್ಯವೆನಿಸುತ್ತದೆ. ತೇಜಸ್ವಿಯವರ ಸಾಹಿತ್ಯವು ಬಹುಮುಖಿ ಆಯಾಮಗಳನ್ನು ಒಳಗೊಂಡಿರುವ ಕಾರಣ ಅವರ ಸಾಹಿತ್ಯವನ್ನು ಬಹುಶಿಸ್ತೀಯ ಮಾದರಿಯಲ್ಲಿ ಅಧ್ಯಯನಕ್ಕೆ ಒಳಪಡಿಸುವುದು ಮುಖ್ಯವಾಗಿದೆ.

ತೇಜಸ್ವಿಯವರು ಮೂಡಿಗೆರೆಯ 'ನಿರುತ್ತರ' ದಲ್ಲಿ ನೆಲೆ ನಿಂತು ಗ್ರಾಮೀಣ ಬದುಕಿನ ಸ್ಥಿತ್ಯಂತರಗಳ ಹಿನ್ನೆಲೆಯಲ್ಲಿ ಜಗತ್ತನ್ನು ಅರಿಯುವ ಪ್ರಯತ್ನ ಮಾಡಿದರು ಹಾಗೂ ಜಗತ್ತಿನ ಆಗುಹೋಗುಗಳಿಗೆ ಪ್ರತಿಸ್ಪಂದಿಸುತ್ತ ಉತ್ತರಗಳನ್ನು ಹುಡುಕಿದರು. ಪ್ರಕೃತಿಯ ಮಡಿಲಲ್ಲಿ ನೆಲೆನಿಂತು ಪ್ರಕೃತಿ ಮತ್ತು ಜೀವಿ ಸಂಬಂಧಗಳ ಕುರಿತು, ಒಟ್ಟಾರೆ ಪ್ರಕೃತಿಯ ಕುರಿತು ತಮ್ಮ ಗ್ರಹಿಕೆಗಳನ್ನು ವಿಸ್ತರಿಸಿಕೊಳ್ಳುವುದರ ಜೊತೆಗೆ ತಮ್ಮ ಒಳನೋಟಗಳನ್ನು ಸಾಹಿತ್ಯದ ಮೂಲಕ ಜಗತ್ತಿನ ಎದುರು ಆಕರ್ಷಕವಾಗಿ, ಸ್ಪಷ್ಟವಾಗಿ ಮಂಡಿಸಿದರು. ತೇಜಸ್ವಿಯವರ ಪರಿಸರಕ್ಕೆ ಸಂಬಂಧಿಸಿದ ಕೃತಿಗಳ ಹಿನ್ನೆಲೆಯಲ್ಲಿ, ಪರಿಸರ ವ್ಯವಸ್ಥೆಯ ಸಂಕೀರ್ಣತೆಯನ್ನು ಮತ್ತು ಜಟಿಲ ಸಮಸ್ಯೆಗಳನ್ನು ಅರಿತು ಅವುಗಳಿಗೆ ಸಮಾಧಾನಕರ ಪರಿಹಾರ ಮಾರ್ಗಗಳನ್ನು ಹುಡುಕಬಹುದು. ತೇಜಸ್ವಿಯವರ 'ಪರಿಸರದ ಕಥೆ', 'ಕರ್ವಾಲೊ', 'ಚಿದಂಬರ ರಹಸ್ಯ', 'ಮಾಯಾಲೋಕ', 'ಸ್ವರೂಪ', 'ಕಾಡು ಮತ್ತು ಕ್ರೌರ್ಯ' ಹೀಗೆ ಹಲವು ಕೃತಿಗಳ ಹಿನ್ನೆಲೆಯಲ್ಲಿ 'ಪ್ರಕೃತಿಯೊಂದಿಗೆ ಜೀವಿಗಳ ಸಂಬಂಧ' ವನ್ನು ವಿಶ್ಲೇಷಣೆಗೆ ಒಳಪಡಿಸಿ, ಸಂಬಂಧಗಳ ಸ್ವರೂಪದಲ್ಲಿ ಆಗಿರುವ ಪಲ್ಲಟಗಳನ್ನು, ಅದರ ಪರಿಣಾಮಗಳನ್ನು ಹಾಗೂ ಅವುಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಬಹುದು.

"ಜೀವಿಗಳೆರಡರ ನಡುವಿನ ಪರಸ್ಪರ ಅವಲಂಬನೆ ಉಭಯ ಜೀವಿಗಳ ಸುಗಮ ಬದುಕಿಗೆ ಸಹಕಾರಿ. ಇದನ್ನು ಜೀವ ವಿಜ್ಞಾನದಲ್ಲಿ "ಸಹ ಜೀವನ ಸಂಬಂಧ" (Symbiotic relationship) ಎಂಬ ಪರಿಭಾಷೆಯಿಂದ ವರ್ಣಿಸಲಾಗುತ್ತದೆ. ಈ ಸಹಜೀವನ ಮನುಷ್ಯ ಸ್ವಭಾವಕ್ಕೆ ಅನೇಕ ಬಾರಿ ಅಚ್ಚರಿಯಾಗಿ ಕಾಣುತ್ತದೆ. ಆದರೆ ನಿಸರ್ಗದಲ್ಲಿ ಇದು ಸಹಜ ವ್ಯಾಪಾರ, ಸ್ವಭಾವಸಿದ್ಧ ನಿಯಮ."[1] ತೇಜಸ್ವಿಯವರ ಸಾಹಿತ್ಯದ ಹಿನ್ನೆಲೆಯಲ್ಲಿ ಜೀವಿಗಳ ನಡುವಿನ ಪರಸ್ಪರ ಸಂಬಂಧದ ವ್ಯಾಖ್ಯಾನವನ್ನು ನಿರೂಪಿಸಿ, ಜೀವಿಗಳೊಂದಿಗೆ ಸಸ್ಯ, ಕೀಟ, ಪಕ್ಷಿ, ಜಲಚರ, ಪ್ರಾಣಿ, ಪಂಚಭೂತಗಳ ಸಂಬಂಧವನ್ನು ಅಧ್ಯಯನಕ್ಕೆ ಪರಿಗಣಿಸಬಹುದು. ಜೊತೆಗೆ ಜೀವಿಗಳೊಂದಿಗೆ ಮಾನವನ ವ್ಯಾವಹಾರಿಕ, ಸಾಂಸ್ಕೃತಿಕ, ಸಾಂಪ್ರದಾಯಿಕ, ಧಾರ್ಮಿಕ ಸಂಬಂಧಗಳ ವಿವೇಚನೆಯನ್ನು ನಡೆಸಿ, ಸಂಬಂಧಗಳ ತೌಲನಿಕ ವಿಶ್ಲೇಷಣೆ ಮಾಡಿ, ಸಂಬಂಧಗಳ ತಾತ್ವಿಕ ವಿವೇಚನೆಯೊಂದಿಗೆ ಸ್ಪಷ್ಟ ವ್ಯಾಖ್ಯಾನಕ್ಕೆ ಒಳಪಡಿಸಬಹುದು. 'ಮಾಯಾಲೋಕ' ಮಲೆನಾಡಿನ ಕೃಷಿ ಸಂಬಂಧಿ ಸಣ್ಣ ಸಣ್ಣ ವಿವರಗಳನ್ನು, ವ್ಯಕ್ತಿಗಳ ವಿಶಿಷ್ಟ ಚಹರೆಗಳನ್ನು, ಪರಿಸರದ ಜೀವ ಸಂಕುಲಗಳ ಉಳಿಗಾಲವನ್ನು, ಮನುಷ್ಯನ ಜೀವನಕ್ರಮ, ಅವನ ಹೋರಾಟ ಹಾಗೂ ದೈನಂದಿನ ಬದುಕಿನ ದಿನಚರಿಯ ಸೂಕ್ಷ್ಮಾತಿಸೂಕ್ಷ್ಮಗಳನ್ನು ದಟ್ಟವಾಗಿ ಕಥನರೂಪದಲ್ಲಿ ಕಟ್ಟಿಕೊಡುವ ಸಂಮ್ಮಿಶ್ರಣ ಮಾದರಿಯ ವಿಶಿಷ್ಟ ಕಲಾ ಕೃತಿಯಾಗಿದೆ."[2] ಮಾಯಾಲೋಕ ಕಾದಂಬರಿಯಲ್ಲಿ ತೇಜಸ್ವಿಯವರು ಮನುಷ್ಯ ಲೋಕದ ಸಿಕ್ಕುಗಳ ಜೊತೆಗೆ ಜೀವಜಾಲದ ಜೊತೆಗಿನ ನಂಟನ್ನು ತೆರೆದಿಡುತ್ತಾರೆ. 'ಮಾಯಾಲೋಕ'ದಲ್ಲಿ ಬರುವ ಮತಾಂತರದ ಸನ್ನಿವೇಶ, ಜೂಜಾಟ, ಅವ್ಯವಸ್ಥೆ, ಧರ್ಮದ ಅವನತಿಯ ಜೊತೆಗೆ ಈ ಕೃತಿ ಗ್ರಾಮೀಣ ಭಾರತದ ಪಲ್ಲಟಗಳ ವಿಶ್ವರೂಪ ದರ್ಶನ ಮಾಡಿಸುತ್ತದೆ. ಜಾಗತೀಕರಣದಿಂದ ಜೀವಿಗಳ ಸಂಬಂಧದ ಸ್ವರೂಪದಲ್ಲಿಆದ ಬದಲಾವಣೆಯನ್ನು ಇದು ಚಿತ್ರಿಸುತ್ತದೆ.

"ಪರಿಸರದ ಜೊತೆ ತೇಜಸ್ವಿಯವರು ಅನುಸಂಧಾನ ಮಾಡುತ್ತ ಕಾಣಿಸುತ್ತಿರುವ ಹೊಸ ಜೀವಜಗತ್ತಿನ ದರ್ಶನ.",[3] ಅಂದರೆ ಅಲ್ಲಿ ಕಾಡು

ಹಂದಿ, ಅಳಿಲು, ಹುಂಡುಕೋಳಿ, ಚಿಟ್ಟುಗಿಳಿ, ಮೀನು, ಏಡಿ, ಹಾವು, ಜೇಡ ಹೀಗೆ ತೇಜಸ್ವಿಯವರ ಸಾಹಿತ್ಯದಲ್ಲಿ ಕಾಣುತ್ತಿರುವ ಜೀವಜಗತ್ತು ಅನೇಕ ಅಚ್ಚರಿಗಳನ್ನು ನಮ್ಮ ಮುಂದೆ ಕಟ್ಟಿಕೊಡುವುದರ ಜೊತೆಗೆ ಅವುಗಳ ನಡುವಿನ ಗಟ್ಟಿ ಸಂಬಂಧಗಳನ್ನು ತೋರಿಸುತ್ತವೆ. ಇಂತಹ ಕಥೆಗಳನ್ನು ನಿರೂಪಿಸಲು ತೇಜಸ್ವಿಯವರು ಅನೇಕ ಜ್ಞಾನಶಾಖೆಗಳ ಉಲ್ಲೇಖ ಮಾಡುವುದನ್ನು ಕಾಣಬಹುದು. ಹಾಗಾಗಿ "ಮಾಯಾಲೋಕವನ್ನು ಸಣ್ಣಸಂಗತಿಗಳ ಮಹಾಕಾವ್ಯ ಎನ್ನಬಹುದು."[4] "ಪ್ರಾಣಿ, ಪಕ್ಷಿ, ಕೀಟ, ಗಿಡ ಮರಗಳ ಮೇಲೆ ಬರೆಯುವ ಕಾರಣ, ತೇಜಸ್ವಿಯವರನ್ನು ಪರಿಸರದ ಲೇಖಕ ಎಂದು ಸಾಮಾನ್ಯವಾಗಿ ಗ್ರಹಿಸಲಾಗಿದೆ. ಈಗ ಪ್ರಚಲಿತ ಇರುವ ಅರ್ಥದಲ್ಲಿ ತೇಜಸ್ವಿ ಪರಿಸರವಾದಿಯಲ್ಲ. ಅವರ ಕೃತಿಗಳು ಕಟ್ಟಿಕೊಡುವ ಪರಿಸರದಲ್ಲಿ ಜನ, ಪ್ರಾಣಿ, ಕೀಟ, ಪಕ್ಷಿ, ನದಿ, ಗಿಡ, ಮರ ಎಲ್ಲವೂ ಸೇರಿ ಪರಸ್ಪರ ಸಂಘರ್ಷ ಮತ್ತು ಸಹಬಾಳ್ವೆ ಮಾಡುತ್ತಿರುವ ಹೊಸ ಜೀವಸತ್ಯವೊಂದು ನೆಲೆಸಿದೆ. ಕಾರಂತರ ಜ್ಞಾನಶೋಧ ಹಾಗೂ ಕುವೆಂಪು ಅವರ ಅದ್ವೈತ ಕಲ್ಪನೆಯನ್ನು ತೇಜಸ್ವಿ ವಿಶಿಷ್ಟವಾಗಿ ಸಿಂಥಸೈಜ್ ಮಾಡಿಕೊಂಡರೀತಿಇದು."[5] ತೇಜಸ್ವಿಯವರನ್ನು ಪರಿಸರವಾದಿಯಾಗಿ ನೋಡುವ ಕ್ರಮವನ್ನು ರೂಢಿಸಿಕೊಂಡವರಿಗೆ ಈ ಸಾಲು ಗೊಂದಲಗೊಳಿಸಬಹುದು. ಆದರೆ ತೇಜಸ್ವಿಯವರು ತೋರಿಸುತ್ತಿರುವ ಜೀವಲೋಕದ ಸಂಘರ್ಷ ಮತ್ತು ಸಹಬಾಳ್ವೆ ಪರಿಸರದ ಕುರಿತು ಹೊಸ ಹೊಳವುಗಳನ್ನು ನೀಡುತ್ತಿರುವುದು ಸತ್ಯ. ಅವುಗಳನ್ನು ಗಹನವಾಗಿ ಅಧ್ಯಯನಕ್ಕೆ ಒಳಪಡಿಸಿ ಜೀವಿಲೋಕದ ಸಂಬಂಧಗಳ ಮೌಲ್ಯಮಾಪನ ಮಾಡಿ, ಸ್ಥಿತ್ಯಂತರಗಳನ್ನು ಗುರುತಿಸಬಹುದು.

ಪರಿಸರ ಎನ್ನುವುದು ಜೀವಜಾಲದ ಮಹಾಮನೆ. ಅದೊಂದು ಜೀವ ವೈವಿಧ್ಯತೆಯ ತಾಣ. ಅದರಲ್ಲಿ ಜಲಚರಗಳು, ಭೂಚರಗಳು, ವಾಯುಚರಗಳು ಎಲ್ಲವೂ ಒಳಗೊಂಡು ಅದೊಂದು ಪರಿಪೂರ್ಣ ವ್ಯವಸ್ಥೆಯಾಗಿದೆ. ಪ್ರಾಣಿಗಳು, ಪಕ್ಷಿಗಳು, ಕ್ರಿಮಿಗಳು, ಕೀಟಗಳು, ಸಸ್ಯಗಳು ಮತ್ತು ಮಾನವರು ಈ ನೈಸರ್ಗಿಕ ಪರಿಸರದ ಭಾಗವಾಗಿವೆ. ಈ ಪರಿಸರದ ಭಾಗವಾದ ಜೀವಿಗಳ ಸಂಬಂಧದ ಕಥೆಗಳನ್ನು ತೇಜಸ್ವಿ ಅವರು ಸೂಕ್ಷ್ಮವಾಗಿ ಗಮನಿಸಿ 'ಪರಿಸರದ ಕತೆ'ಯಾಗಿಸಿದ್ದಾರೆ. ಈ ಕಥೆಗಳು ಜೀವವ್ಯವಸ್ಥೆ, ಪರಿಸರದ ಆಗುಹೋಗುಗಳ ಕುರಿತು ಮಾತನಾಡುತ್ತವೆ. ಇಲ್ಲಿ ತೇಜಸ್ವಿ ಮುಖ್ಯವಾಗಿ ಮನುಷ್ಯ–ಮನುಷ್ಯ ಸಂಬಂಧ, ಮನುಷ್ಯ–ಪ್ರಾಣಿಗಳ ಸಂಬಂಧ, ಪ್ರಾಣಿ–ಪ್ರಾಣಿಗಳ ಸಂಬಂಧ, ಮನುಷ್ಯ–ಸಸ್ಯಗಳ ಸಂಬಂಧ, ಪ್ರಾಣಿ–ಸಸ್ಯಗಳ ಸಂಬಂಧದಕುರಿತು ವಿಶಿಷ್ಟ ಶೈಲಿಯಲ್ಲಿ ಗಹನವಾಗಿ ಚರ್ಚಿಸುತ್ತಾರೆ. ಇದು ನಮ್ಮ ಸುತ್ತಲಿನ ಬದುಕು, ಪರಿಸರದಲ್ಲೇ ಇರುವ ಸೂಕ್ಷ್ಮ ವಿವರಗಳನ್ನು ಕಾಣುವ, ಅದರ ಮೂಲಕ ಅರಿವಿನ ಮಿಂಚನ್ನು ತೋರಿಸುವ ಪ್ರಯತ್ನವಾಗಿದೆ.

ಜೀವವ್ಯವಸ್ಥೆಯ ಕೆಲವು ಆಯ್ದ ಪ್ರಾಣಿಗಳನ್ನು ಇಟ್ಟುಕೊಂಡು ತೇಜಸ್ವಿ ಅವರು ಪರಿಸರದ ಕಥೆಯನ್ನು ನಿರೂಪಿಸುತ್ತಾರೆ. ಅತ್ಯಂತ ಸಹಜವಾದ ಹಾಗೂ ಸಂಯಮದಿಂದ ಕೂಡಿದ, ಯಾವುದೇ ಉತ್ಪ್ರೇಕ್ಷೆಗಳಿಲ್ಲದ ಭಾಷೆಯಲ್ಲಿ ಹಾಸ್ಯಭರಿತವಾಗಿ ಮಾಹಿತಿಯನ್ನು, ಹೊಸ ಹೊಳವುಗಳನ್ನು ನಿರುದ್ವಿಗ್ನವಾಗಿ ದಾಟಿಸುತ್ತಾರೆ. 'ಪರಿಸರದಕಥೆ'ಯಲ್ಲಿ ಕಿವಿ ಎಂಬ ನಾಯಿ, ಮಾನೀಟರ್ ಎಂಬ ಉಡ, ನಾನಾ ಜಾತಿಯ ಪಕ್ಷಿಗಳು, ಉರಗಗಳು, ಕಾಡು ಕೋಳಿ, ಮಂಗಗಳು, ಔಷಧೀಯ ಸಸ್ಯಗಳು ಹೀಗೆ ಪರಿಸರದ ಹಲವು ಪಾತ್ರಗಳು ಬಿಚ್ಚಿಕೊಳ್ಳುತ್ತ ಹೋಗುತ್ತವೆ. ತೇಜಸ್ವಿಯವರು ಇಡೀ ಕೃತಿಯಲ್ಲಿ ಇಂಥ ಅನೇಕ ಅಚ್ಚರಿದಾಯಕ, ನಿಗೂಢ ಸಂಬಂಧಗಳ ಕುರಿತು ವಿವರಿಸುತ್ತಾರೆ. ಇಡೀ ಪ್ರಕೃತಿ ಜೀವಿಗಳ ಸಹ ಸಂಬಂಧದತೊಟ್ಟಿಲು. ಅಲ್ಲಿಒಂದುಜೀವಿಯ ನಾಶ, ಇನ್ನೊಂದು ಜೀವಿಯ ನಾಶಕ್ಕೆ ಹಾಗೂ ಒಂದು ಜೀವಿಯ ಉಳಿವು, ಇನ್ನೊಂದು ಜೀವಿಯ ಉಳಿವಿಗೂ ಕಾರಣವಾಗುತ್ತದೆ.

ಅದೇ ರೀತಿ ಒಂದು ಜೀವಿಯ ಹೆಚ್ಚಳ, ಇನ್ನೊಂದು ಜೀವಿಯ ನಾಶಕ್ಕೂ ಕಾರಣವಾಗಬಹುದು.

ಪರಿಸರ ಪ್ರಜ್ಞೆ ಎಂಬುದು ವಾದ, ಹೋರಾಟ, ಅಂಕಿ ಅಂಶಗಳಷ್ಟೇ ಅಲ್ಲ, ಪ್ರಕೃತಿಯೊಡನೆ ಸುಖ–ದುಃಖದ ಸಂವಾದದ ಸಂಬಂಧವು ಹೌದು ಎಂಬುದನ್ನು ಇಲ್ಲಿಯ ಕಥೆಗಳ ಮೂಲಕ ತೇಜಸ್ವಿ ನಿರೂಪಿಸುತ್ತಾರೆ. ತಮ್ಮ ವಿಶಿಷ್ಟ ಶೈಲಿಯ ಮೂಲಕ ತೇಜಸ್ವಿ ಈ ಸಂವಾದ ಮತ್ತು ಸಂಬಂಧಗಳ ನಿರೂಪಣೆಯನ್ನು ಆಪ್ತವಾಗಿಸಿದ್ದಾರೆ ಹಾಗೂ ಜೀವಿಗಳ ಸಂಬಂಧದ ಮಹತ್ವವನ್ನು 'ಪರಿಸರದಕತೆ'ಯ ಮೂಲಕ ಸಾರಿದ್ದಾರೆ. ಕರ್ವಾಲೊ ಕಾದಂಬರಿಯಲ್ಲಿ ಮೂಡಿಗೆರೆಯ ಜೇನು ಸೊಸೈಟಿಯ ಉಲ್ಲೇಖದೊಡನೆ ಪ್ರಾರಂಭವಾಗುವ ಕಥೆ ಹಲವು ಸನ್ನಿವೇಶಗಳ, ಪ್ರಸಂಗಗಳ ಮೂಲಕ ಸಾಗಿ, ನಿರೂಪಕರ ಜೊತೆಗೆ, ವಿಜ್ಞಾನಿ ಕರ್ವಾಲೋ, ಸಹಾಯಕ ಮಂದಣ್ಣ, ನಾಯಿ 'ಕಿವಿ', ಫೋಟೋಗ್ರಾಫರ್ ಪ್ರಭಾಕರ, ಹಾವಾಡಿಗ ಎಂಗ್ಟ, ಬಂಡಿ ಓಡಿಸುವ ಕರಿಯಪ್ಪ ಎಲ್ಲರೂ ಸೇರಿಕೊಂಡು ಹಾರುವ ಓತಿಯನ್ನು ಹಿಂಬಾಲಿಸುವ, ಹಿಡಿಯುವ ಪ್ರಯತ್ನ ಮಾಡುವ ಪ್ರಸಂಗವನ್ನು ವಿವರಿಸುತ್ತದೆ. ಈ ಮಧ್ಯದಲ್ಲಿ ಇಡಿ ಕೃತಿಯಲ್ಲಿ ಮಾನವ ಮತ್ತು ಇತರ ಜೀವಜಗತ್ತಿನ ಸಂಬಂಧಗಳ ಒಳವಿವರಗಳು ಚಿತ್ರಿತಗೊಂಡಿವೆ. ಹಾರುವ ಓತಿಯ ಜೀವನ ವಿಧಾನ, ಎಂಗ್ಟ ಮತ್ತು ಅವನ ಬದುಕು, ಮನುಷ್ಯ ಸಂಬಂಧದ ಸಂಕೀರ್ಣತೆಗಳು ಎಲ್ಲವೂ ಇಲ್ಲಿ ಉಲ್ಲೇಖಗೊಂಡಿವೆ.

"ಎಲ್ಲಾ ಜೀವಿಗಳ ಬದುಕು ಮೇಲ್ನೋಟಕ್ಕೆ ಒಂದಕ್ಕೊಂದು ಸಂಬಂಧವಿಲ್ಲದಂತ ಗೋಚರಿಸುತ್ತದೆ. ಆದರೆಸೂಕ್ಷ್ಮವಾಗಿ ಅವಲೋಕಿಸಿದರೆ ಅಲ್ಲಿಕಾಣುವುದು ಏಕಾಂಗಿ ಬದುಕಲ್ಲ. ಜೀವಿಗಳಲ್ಲಿ ಒಂದನ್ನು ಕೊಂದು, ಒಂದುತಿನ್ನುವ ಬಾಳುವೆ ಇರುತ್ತದೆ. ಇಲ್ಲವೇ ಮತ್ತೊಂದರ ಬದುಕಿನಲ್ಲಿ ಪಾಲು ಬೇಡುವ ಪರಾವಲಂಬನೆಯಿರುತ್ತದೆ ಅಥವಾ ಪರಸ್ಪರ ಅವಲಂಬಿಸಿ ಬದುಕುವ ಸಹಬಾಳ್ವೆ ತತ್ವ ಅರಳಿರುತ್ತದೆ. ಈ ಬಗೆಯ ಬದುಕೇಜೀವ ವರ್ತುಲದಕೇಂದ್ರ ಬಿಂದು."[6] ತೇಜಸ್ವಿಯವರು ನಿಸರ್ಗವನ್ನು ನೋಡುವ ಕ್ರಮಕ್ಕೂ ಮತ್ತು ಮಾನವ ಜಗತ್ತನ್ನು ನೋಡುವ ಕ್ರಮಕ್ಕೂ ಭಿನ್ನತೆಗಳಿವೆ. ಅವರು ಮೊದಲು ಮಾನವ ಬದುಕಿನ ನಿಗೂಢಗಳ ಶೋಧನೆಗೆ ಇಳಿದು ನಂತರ ಏಕಾಲಜಿಯ ನಿಗೂಢಗಳನ್ನು ಶೋಧಿಸಲು ಮುಂದಾಗಿದ್ದನ್ನು ನಿಚ್ಚಳವಾಗಿ ಕಾಣಬಹುದು. ತೇಜಸ್ವಿಯವರ ಕಥನಕ್ರಮ ಮೊದಲು 'ಮಾನವ ಕೇಂದ್ರಿತ' ನೆಲೆಯಲ್ಲಿ ರೂಪಗೊಂಡು ನಂತರ ಅದು 'ಜೀವ ಕೇಂದ್ರಿತ' ನೆಲೆಯಲ್ಲಿ ವಿಸ್ತರಣೆ ಪಡೆದುಕೊಂಡಿತು. ಮಾನವ ಮತ್ತು ನಿಸರ್ಗಲೋಕದ ಅವಿನಾಭಾವ ಸಂಬಂಧಗಳನ್ನು ಅವುಗಳ ಎಲ್ಲಾ ಮಗ್ಗಲುಗಳ ಸಮೇತ ಚಿತ್ರಿಸಿ, ಕೆಲವು ಸಮಸ್ಯೆಗಳಿಗೆ ಪರ್ಯಾಯಗಳನ್ನು ಹುಡುಕುವ ಪ್ರಯತ್ನವನ್ನು ನಡೆಸಿದ ತೇಜಸ್ವಿ, ಪರಿಸರದ ನಿಗೂಢಗಳನ್ನು ಅರಿಯುವ ಪ್ರಯತ್ನದಲ್ಲಿ, ಈ ಶೋಧದಲ್ಲಿ ಮಾನವನ ತಿಳುವಳಿಕೆಗೆ ಮಿತಿ ಇರುವುದನ್ನು ಸ್ಪಷ್ಟಪಡಿಸುತ್ತಾರೆ.

**ಜೀವಿಗಳ ನಡುವಿನ ಸಂಬಂಧದ ಅವಸಾನಕ್ಕೆ/ಏರುಪೇರಿಗೆ ಕಾರಣಗಳು :**

ಜೀವಿಗಳ ಸಂಬಂಧ ಎನ್ನುವುದು ತುಂಬಾ ಸೂಕ್ಷ್ಮವೂ, ಜಟಿಲವೂ ಹೌದು. ಒಂದನ್ನು, ಇನ್ನೊಂದು ಅವಲಂಬಿಸಿರುವುದು ಸತ್ಯ. ತೇಜಸ್ವಿಯವರು ಹೇಳುವ ಹಾಗೆ ಕಾಡಿನ ಜೀವಸಂಕುಲದೊಳಗೆ ನಾವು ಕೈ ಹಾಕಿದರೆ, ಅದು ಸಹಾಯಹಸ್ತವಾಗಿದ್ದರೂ, ಅವುಗಳ ನಾಶ ತಪ್ಪಿದ್ದಲ್ಲವೆನ್ನುತ್ತಾರೆ. ಸರ್ಕಾರದ ನೀತಿಗಳಿಂದಾಗಿ, ಕಾಡುಗಳ ಅವಸಾನದಿಂದಾಗಿ, ಪರಿಸರದ ಜೊತೆಗಿನ ಮಾನವನ ಬದುಕಿನ ಸಂಬಂಧ ಸಾಕಷ್ಟು ಬದಲಾವಣೆಯಾಗಿ, ಅದರ ಪರಿಣಾಮಗಳನ್ನು ಇಡೀ ಜೀವಿಲೋಕ ಅನುಭವಿಸುತ್ತಿದೆ. ತೇಜಸ್ವಿ ಉಲ್ಲೇಖಿಸುವಂತೆ, ಮೂಡಿಗೆರೆಯ ಹತ್ತಿರದ ಈಚಲು ಕಾಡಿಗೆ ಪ್ರತಿವರ್ಷ ಬೇಸಿಗೆಯಲ್ಲಿ ಬೆಂಕಿ ಹಾಕಿ

ಪೂರ್ತಿ ಕರಕಲು ಮಾಡುತ್ತಿದ್ದರು, ಮಳೆ ಬಂದ ಸ್ವಲ್ಪದಿನದಲ್ಲಿ ಅದು ಹಸಿರು ಸಾಗರದಂತೆ ದೊಡ್ಡದಾಗಿ ಹಬ್ಬುತಿತ್ತು. ಇದು ಸಸ್ಯ ಮತ್ತು ಮನುಷ್ಯ ಸಂಬಂಧದ ಭಿನ್ನಮುಖವನ್ನು ತೋರಿಸುತ್ತದೆ. ಬೈಶ್ನೋಯಿ ಸಮಾಜದ ಸಂಸ್ಥಾಪಕ ಸಂತ ಜಂಬೋಜಿ ಹೇಳುವಂತೆ, "ನಿಸರ್ಗವು ಯಾವುದೇ ತಪ್ಪನ್ನು ಮಾಡುವುದಿಲ್ಲ. ಆದರೆ ಮಾನವನು ಮಾಡಿದ ತಪ್ಪುಗಳಿಗೆ ಹೆಚ್ಚಿನ ಬಲದಿಂದ ಮಾರುತ್ತರ ನೀಡುತ್ತದೆ."[7] ಜೀವಿಗಳ ನಡುವಿನ ಸಂಬಂಧದ ಅವಸಾನಕ್ಕೆ, ಏರುಪೇರಿಗೆ ಕಾರಣಗಳನ್ನು ನೋಡಿದಾಗ ಪ್ರಮುಖವಾಗಿ ಕಾಣುವ ಅಂಶಗಳು, ಜೀವಿಗಳ ಆವಾಸದ ನಷ್ಟ, ಮಾನವನ ದುರಾಸೆ, ಜೀವಿಗಳ ಆವಾಸದ ಮೇಲಿನ ಅತಿಕ್ರಮಣ, ನೈಸರ್ಗಿಕ ಸಂಪತ್ತಿನ ಲೂಟಿ, ಅವೈಜ್ಞಾನಿಕ ಪದ್ದತಿಗಳ ಅಳವಡಿಕೆ, ಕಾಡುಗಳ ನಾಶ, ಪ್ರಭೇದಗಳ ನಾಶ, ಪರಿಸರ ವಿನಾಶ, ಜಾಗತಿಕ ತಾಪಮಾನದಲ್ಲಿ ಹೆಚ್ಚಳ, ಪ್ರಾಕೃತಿಕ ಅವಘಡಗಳು, ಭೂಸವಕಳಿ, ಇಂಗಾಲದ ಹೊರಸೂಸುವಿಕೆ ಹೀಗೆ ಪಟ್ಟಿ ಮಾಡಬಹುದು.

**ಜೀವಿಗಳ ಸಂಬಂಧಗಳ ಅವಸಾನದ ಪರಿಣಾಮಗಳು**

ತೇಜಸ್ವಿಯವರು "ಕಾಡುಗಳಿಲ್ಲದ, ಕಾಡು ಪ್ರಾಣಿಗಳಲ್ಲದ ಪರಿಸರವು ಸ್ಮಶಾನಕ್ಕಿಂತ ಭೀಕರವಾಗಿ ಕಾಣುತ್ತದೆ"[8] ಎಂದು ಹೇಳುತ್ತಾರೆ. "ಕಾಡುಗಳನ್ನು ನಾಶ ಮಾಡಿದಾಗ ಅಲ್ಲಿರುವ ಪ್ರಾಣಿಗಳನ್ನು, ಅವುಗಳ ಪರಿಸರವನ್ನು ಧ್ವಂಸಮಾಡಿದಾಗ ರಹಸ್ಯ, ಗೌಪ್ಯ, ಅದ್ಭುತಗಳ ನಿರಂತರ ನಿಧಿಯೊಂದನ್ನು ನಮ್ಮ ಕಿರಿಯಜನಾಂಗ ಕಳೆದುಕೊಂಡಂತಾಗಿ ಮನಸ್ಸು ಖಿನ್ನವಾಗುತ್ತದೆ"[9] ಎನ್ನುತ್ತಾರೆ. ತೇಜಸ್ವಿಯವರ ಈ ಮಾತು ಮನುಷ್ಯ ಮತ್ತು ಪರಿಸರದ ನಡುವಿನ ಬಿರುಕು ಬಿಟ್ಟುರುವ ಸಂಬಂಧದ ಸೂಚಕವಾಗಿದೆ. ತಲೆತಲಾಂತರದಿಂದ ಮಾನವ ಪರಿಸರದೊಂದಿಗೆ ಅವಿನಾಭಾವ ಸಂಬಂಧವನ್ನು ಇಟ್ಟುಕೊಂಡು ಬಂದಿದ್ದಾನೆ. ಆದರೆ ಇಂದು ಮಾನವನ ದುರಾಸೆಯಿಂದ ಆ ಸಂಬಂಧ ಛಿದ್ರಗೊಂಡಿದೆ. ಪರಿಸರ ನಾಶವೆಂದರೆ ಅದು ಮಾನವನ ವಿನಾಶವು ಹೌದು. ಪರಿಸರದಿಂದ ಬೇರ್ಪಡಿಸಿ ಮಾನವನನ್ನು ನೋಡಲು ಸಾಧ್ಯವಿಲ್ಲ ಅಥವಾ ಮಾನವ, ಪರಿಸರದ ಸಂಬಂಧವನ್ನು ತ್ಯಜಿಸಿ ಬದುಕಲು ಸಾಧ್ಯವಿಲ್ಲ. ಮಾನವ ಪ್ರಕೃತಿಯ ಶಿಶು ಎಂಬುದನ್ನು ಮರೆತರೆ ಅದು ಅವನ ಅವಸಾನದ ಪ್ರಾರಂಭ.

**ಜೀವಿಗಳ ಸಂಬಂಧ ಗಟ್ಟಿಗೊಳಿಸಲು ಪರಿಹಾರೋಪಾಯಗಳು**

ಸುಸ್ಥಿರ ಅಭಿವೃದ್ಧಿ ಯೋಜನೆಗಳ ಮೂಲಕ ಪರಿಸರ ಸಮತೋಲನ ಕಾಪಾಡಿದಲ್ಲಿ ಜೀವಿಗಳ ನಡುವಿನ ಸಂಬಂಧವನ್ನು ಉಳಿಸಿಕೊಳ್ಳಬಹುದು. ವನಸಂರಕ್ಷಣೆ, ದೈವಿವನಗಳಂತಹ ವ್ಯವಸ್ಥೆಗಳನ್ನು ಉಳಿಸಿಕೊಳ್ಳುವುದು, ಕಾದಿಟ್ಟ ಅರಣ್ಯಗಳು, ಅಭಯಾರಣ್ಯಗಳು, ಸಂರಕ್ಷಿತ ಪ್ರದೇಶಗಳು, ರಾಷ್ಟ್ರೀಯ ಉದ್ಯಾನಗಳು, ಪಕ್ಷಿಧಾಮಗಳನ್ನು ಉಳಿಸಿಕೊಳ್ಳವುದು. ಶಿಕ್ಷಣ, ಜಾಗೃತಿ, Reduce, Reuse, Recycle ಜಾರಿಗೊಳಿಸುವುದು. ಒಟ್ಟಾರೆ ಜೀವಿಗಳ ಸಂಬಂಧಕ್ಕೆ ಧಕ್ಕೆ ಆಗದಂತೆ ಯೋಜನೆಗಳನ್ನು ಮರುರೂಪಿಸುವುದು, ಜೀವನ ಪದ್ಧತಿಗಳನ್ನು ಬದಲಾಯಿಸಿಕೊಳ್ಳುವುದು ಬಹಳ ಅಗತ್ಯ. ತೇಜಸ್ವಿಯವರ ಸಾಹಿತ್ಯವನ್ನು ಆಮೂಲಾಗ್ರವಾಗಿ ಅಧ್ಯಯನಕ್ಕೆ ಒಳಪಡಿಸಿದಾಗ ಹೊಸ ಸಾಧ್ಯತೆಗಳು ಕಾಣಿಸುತ್ತವೆ. ಆಗ ಹೊಸ ದೃಷ್ಟಿಕೋನದಿಂದ ತೇಜಸ್ವಿಯವರ ಸಾಹಿತ್ಯವನ್ನು ನೋಡಬಹುದು. ಇಂದುಅತ್ಯಂತ ಹೆಚ್ಚು ಪ್ರಚಲಿತವಿರುವ 'ಜೀವಕೇಂದ್ರಿತ' ಮಾದರಿಯ ಕುರಿತು ತೇಜಸ್ವಿಯವರು ಬಹು ಹಿಂದಿಯೆತಮ್ಮ ಸಾಹಿತ್ಯದಲ್ಲಿ ಚರ್ಚಿಸಿರುವುದನ್ನು ಗಮನಿಸಬಹುದು. ಹಾಗಾಗಿ ಪ್ರಕೃತಿಯೊಂದಿಗೆ ಜೀವಿಗಳ ಸಂಬಂಧದಲ್ಲಿಆಗಿರುವ, ಆಗುತ್ತಿರುವ ಅಸಮತೋಲನವನ್ನು ಗ್ರಹಿಸಿ, ಅವುಗಳಿಗೆ ಸೂಕ್ತ ಪರಿಹಾರಗಳನ್ನು ತೇಜಸ್ವಿಯವರ ಸಾಹಿತ್ಯದ ಹಿನ್ನೆಲೆಯಲ್ಲಿ ಕಂಡುಕೊಳ್ಳಬಹುದು.

**ಕೊನೆಟಿಪ್ಪಣಿಗಳು**


1. ಪುಟ್ಟಸ್ವಾಮಿ.ಕೆ ಮತ್ತು ಕೃಪಾಕರ ಸೇನಾನಿ. (2014). *ಜೀವಜಾಲ.* ಅಭಿನವ ಪ್ರಕಾಶನ. ಪುಟ. 49.
2. ಕರೀಗೌಡ ಬೀಚನಹಳ್ಳಿ. (2017). *ಕನ್ನಡ ಸಾಹಿತ್ಯ ಸಂಸ್ಕೃತಿಕಥನ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ. ಪುಟ.279
3. ರಹಮತ್‌ತರೀಕೆರೆ. (2006). *ಕತ್ತಿಯಂಚಿನದಾರಿ.* ಅಭಿನವ ಪ್ರಕಾಶನ. ಪುಟ.52.
4. ಅದೇ, ಪುಟ.59
5. ಅದೇ, ಪುಟ.56
6. ಪುಟ್ಟಸ್ವಾಮಿ.ಕೆ ಮತ್ತು ಕೃಪಾಕರ ಸೇನಾನಿ. (2014). ಪೂರ್ವೋಕ್ತ. ಪುಟ. 48
7. ಹಖ್, ಎಂ.ಎ. *ಜೀವಿ ವೈವಿಧ್ಯ ನಮ್ಮ ಅಮೂಲ್ಯ ಸಂಪತ್ತು.* (ಅನು, ಸಂಕನೂರ, ಎಸ್., ವಿ.ಎನ್.ನಾಯಕ್, ಎಚ್.ಎಸ್.ನಿರಂಜನ ಆರಾಧ್ಯ). ಉದ್ಧೃತ ಭಾಗ. ಪುಟ. 46
8. ಪೂರ್ಣಚಂದ್ರ ತೇಜಸ್ವಿ. ಕೆ.ಪಿ. (2013). *ಪರಿಸರದ ಕತೆ.* ಪುಸ್ತಕ ಪ್ರಕಾಶನ. ಪುಟ.2
9. ಅದೇ. ಪುಟ.2


**ಪರಾಮರ್ಶನ ಗ್ರಂಥಗಳು**


- ಗಂಗಾಧರಯ್ಯ, ಎಸ್.ಎಂ. *ಅಭಿಜಾತ ಕನ್ನಡ.* ದ್ವೈಮಾಸಿಕ ಸಂಶೋಧನಾ ಪತ್ರಿಕೆ. 9 (5).
- ಕರೀಗೌಡ ಬೀಚನಹಳ್ಳಿ. (2017). *ಕನ್ನಡ ಸಾಹಿತ್ಯ ಸಂಸ್ಕೃತಿ ಕಥನ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ಕುಶಾಲ ಬರಗೂರು. (2011). *ಪರಿಸರ ಜಿಜ್ಞಾಸೆ,* ಅಭಿರುಚಿ ಪ್ರಕಾಶನ.
- ಪೂರ್ಣಚಂದ್ರ ತೇಜಸ್ವಿ. ಕೆ.ಪಿ. (2017). *ಕರ್ವಾಲೊ.* ಪುಸ್ತಕ ಪ್ರಕಾಶನ.
- ಪೂರ್ಣಚಂದ್ರ ತೇಜಸ್ವಿ. ಕೆ.ಪಿ. (2022). *ಮಾಯಾಲೋಕ.* ಪುಸ್ತಕ ಪ್ರಕಾಶನ.
- ರಹಮತ್ ತರೀಕೆರೆ. (2016). *ಕತ್ತಿಯಂಚಿನ ದಾರಿ.* (ಐದನೇ ಮುದ್ರಣ). ಅಭಿನವ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 40-47
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಕನ್ನಡ ಜನಪದ ಮಹಾಕಾವ್ಯಗಳಲ್ಲಿ ದುಷ್ಟ ಶಿಕ್ಷೆ–ಶಿಷ್ಟ ರಕ್ಷಣೆಯ ಅನುಸರಣೆ

**ಡಾ. ಲಕ್ಷ್ಮಿ ನರಸಮ್ಮ**
ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕುಣಿಗಲ್.

***Abstract:***
*ಹೆಸರೇ ಹೇಳುವಂತೆ ದುಷ್ಟಶಿಕ್ಷೆ ಶಿಷ್ಟರಕ್ಷೆ ದುಷ್ಟರನ್ನು ನಾಶಮಾಡಿ ಶಿಷ್ಟರನ್ನು ರಕ್ಷಿಸಿ ಉಳಿಸುವುದಾಗಿದೆ. ರಾಮಾಯಣ, ಮಹಾಭಾರತಗಳ ಕಾಲದಿಂದಲೂ ದುಷ್ಟಶಿಕ್ಷೆ– ಶಿಷ್ಟರಕ್ಷೆ ಚಾಲ್ತಿಯಲ್ಲಿದೆ. ದುಷ್ಟತೆ–ಶಿಷ್ಟತೆಗಳೆರಡು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಶಿಷ್ಟತೆಗಿಂತಲೂ ದುಷ್ಟತೆ ಅಧಿಕ ಪ್ರಮಾಣದಲ್ಲಿದೆ. ಸಮಾಜದಲ್ಲಿ ಒಳ್ಳೆಯವರು ಇದ್ದಂತೆ ಕೆಟ್ಟವರು ಇರುತ್ತಾರೆಂಬುದು ಸತ್ಯಸಂಗತಿಯಾಗಿದೆ. ಆದರೆ ಒಳ್ಳೆಯವರಿಂದ ಯಾವುದೇ ಕಳಂಕಗಳು ಉದ್ಭವಿಸುವುದಿಲ್ಲ. ಕೆಟ್ಟವರಿಂದ ಮಾತ್ರ ಕಳಂಕಗಳು ಉಲ್ಬಣವಾಗಿ ಸಮಾಜವನ್ನು ಹದಗೆಡಿಸುತ್ತವೆ. ಜನಪದರು ಜನಪದ ಮಹಾಕಾವ್ಯಗಳಲ್ಲಿ ಹಲವು ಪಾತ್ರಗಳ ಮುಖಾಂತರ ದುಷ್ಟಶಿಕ್ಷೆ ಶಿಷ್ಟರಕ್ಷೆಯನ್ನು ಅಭಿವ್ಯಕ್ತಿಪಡಿಸಿ ಶಿಷ್ಟತನಕ್ಕೆ ಹೆಚ್ಚಿನ ಮಾನ್ಯತೆಯನ್ನು ನೀಡಿದ್ದಾರೆ. ಮಲೆಮಾದೇಶ್ವರ ಕಾವ್ಯ, ಮಂಟೇಸ್ವಾಮಿ ಕಾವ್ಯ, ಜುಂಜಪ್ಪ ಕಾವ್ಯ ಹಾಗೂ ಮೈಲಾರಲಿಂಗನ ಕಾವ್ಯಗಳಲ್ಲಿನ ದುಷ್ಟಶಿಕ್ಷೆ–ಶಿಷ್ಟರಕ್ಷೆಯ ಸಂದರ್ಭಗಳು ಬಹಳ ವೈಶಿಷ್ಟ್ಯತೆಯಿಂದ ಕೂಡಿದೆ.*

***Keywords:*** *ದುಷ್ಟ ಶಿಕ್ಷೆ–ಶಿಷ್ಟ ರಕ್ಷಣೆ, ಜನಪದ ಮಹಾಕಾವ್ಯ, ಮಲೆಮಾದೇಶ್ವರ ಕಾವ್ಯ, ಮಂಟೇಸ್ವಾಮಿ ಕಾವ್ಯ, ಜುಂಜಪ್ಪ ಕಾವ್ಯ, ಮೈಲಾರಲಿಂಗನ ಕಾವ್ಯ.*

## ಪೀಠಿಕೆ

ಜನಪದ ಮಹಾಕಾವ್ಯಗಳ ನಾಯಕರೆಲ್ಲರೂ ಸಮಾಜದಲ್ಲಿ ಶಿಷ್ಟತೆಯನ್ನು ಉಳಿಸುವ ಸಲುವಾಗಿ ದುಷ್ಟರನ್ನು ಸರ್ವನಾಶ ಮಾಡುತ್ತಾರೆ. ಸರ್ವಸಾಮಾನ್ಯವಾಗಿ ನಾಯಕರು ಒಕ್ಕಲನ್ನಾಗಿ ಮಾಡಿಕೊಳ್ಳುವ ಸಂದರ್ಭಗಳಲ್ಲಿ ತಮಗೆ ಒಕ್ಕಲಾಗದೇ ಪ್ರತಿಭಟಿಸಿದವರನ್ನು ಸರ್ವನಾಶಮಾಡುತ್ತಾರೆ. ಕೆಲವೊಮ್ಮೆ ದುಷ್ಟರಲ್ಲಿನ ದುಷ್ಟತನವನ್ನು ನಾಶಮಾಡಿ ಅವರನ್ನು ಶಿಷ್ಯರನ್ನಾಗಿಯೂ ಮಾಡುವುದುಂಟು, ಆದರೆ ನಾಯಕರಲ್ಲಿ ಸ್ತ್ರೀಪುರುಷರೆಂಬ ಭೇದಭಾವವಿಲ್ಲ. ಹಾಗಾಗಿ ದುಷ್ಟರೆನಿಸಿದರೆ ಸಾಕು ಅಂಥಹವರನ್ನು ಸದೆಬಡಿದು ನಾಶಮಾಡಿಯೇ ತೀರುತ್ತಾರೆ. ನಾಯಕರಿಗೆ ದುಷ್ಟಶಿಕ್ಷೆ–ಶಿಷ್ಟರಕ್ಷಣೆ ಮಾಡುವುದು ಪರಮಗುರಿಯಿದ್ದಂತೆ ತೋರುತ್ತದೆ.

ಮಲೆಮಾದೇಶ್ವರ ಕಾವ್ಯ, ಮಂಟೇಸ್ವಾಮಿ ಕಾವ್ಯ, ಜುಂಜಪ್ಪ ಕಾವ್ಯ ಹಾಗೂ ಮೈಲಾರಲಿಂಗನ ಕಾವ್ಯಗಳಲ್ಲಿ ದುಷ್ಟಶಿಕ್ಷೆ–ಶಿಷ್ಟರಕ್ಷಣೆಯ ಪರಿಪಾಲನೆಗೆ ಬಹಳ ಮುಖ್ಯವಾದ ಪ್ರಾಧಾನ್ಯತೆಯಿದೆ. ಇಲ್ಲಿನ ಮಾದಪ್ಪ, ಮಂಟೇಸ್ವಾಮಿ, ಜುಂಜಪ್ಪ ಹಾಗೂ ಮೈಲಾರರೆಂಬ ಮಹಾನ್ ನಾಯಕರು ಸಮಾಜದಲ್ಲಿರುವ ದುಷ್ಟತನಗಳನ್ನು, ದುಷ್ಟಶಕ್ತಿಗಳನ್ನು ದಮನ ಮಾಡಲು ಬರುವಂತಹವರು. ದುಷ್ಟರನ್ನು ಸದೆಬಡಿಯುವ ಮೂಲಕ ಸಮಾಜದಲ್ಲಿ

***Please cite this article as:*** ಲಕ್ಷ್ಮಿ ನರಸಮ್ಮ. (2024). ಕನ್ನಡ ಜನಪದ ಮಹಾಕಾವ್ಯಗಳಲ್ಲಿ ದುಷ್ಟ ಶಿಕ್ಷೆ–ಶಿಷ್ಟ ರಕ್ಷಣೆಯ ಅನುಸರಣೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 40–47

ಮಾನವೀಯ ಮೌಲ್ಯಗಳನ್ನು ಉಳಿಸುತ್ತಾರೆ. ಈ ಎಲ್ಲಾ ಕಾವ್ಯಗಳಲ್ಲೂ ದುಷ್ಟರ ನಾಶ, ಶಿಷ್ಟರ ಉಳಿವು ಕಂಡುಬಂದಿದೆ. ಇಲ್ಲೆಲ್ಲಾ ದುಷ್ಟ–ದುಷ್ಟೆಯರು ಇದ್ದಂತೆ ದುಷ್ಟ ಶಕ್ತಿಗಳೂ ಇವೆ. ಅವುಗಳನ್ನು ಸಹ ಕಾವ್ಯದ ನಾಯಕರು ದಮನ ಮಾಡುತ್ತಾರೆ. ಇಲ್ಲದೇ ಹೋದರೆ ಆ ದುಷ್ಟಶಕ್ತಿಗಳೇ ಶಿಷ್ಟರನ್ನು ನಾಶಮಾಡುವ ಹಂತಕ್ಕೆ ಹೋಗುವುದು, ಮಾದೇಶ್ವರ ಶ್ರವಣದೊರೆಯನ್ನು ನಾಶಮಾಡುವ ಹಂತಕ್ಕೆ ಹೋಗುತ್ತವೆ. ಮಾದೇಶ್ವರ ಶ್ರವಣದೊರೆಯನ್ನು ಬಗ್ಗುಬಡಿಯುವುದು, ಬೇವಿನಟ್ಟಿ ಕಾಳಮ್ಮಳನ್ನು ನಾಶಮಾಡುವುದು, ಸಂಕಮ್ಮ–ನೀಲಯ್ಯರನ್ನು ರಕ್ಷಿಸುವುದು, ಮೂಗಪ್ಪನಾದ ಸರಗೂರಪ್ಪನನ್ನು ಮೂಗಮ್ಮಳಾದ ರಾಮವ್ವಳನ್ನು ರಕ್ಷಿಸುವುದು, ಮಂಟೇಸ್ವಾಮಿಯು ಕೆಂಪಾಚಾರಿಯನ್ನು ಪಾಂಚಾಳ ದೊರೆಗಳನ್ನು ಶಿಕ್ಷೆಗೆ ಗುರಿಮಾಡುವುದು, ಬೊಪ್ಪೇಗೌಡ, ಮುದ್ದಮ್ಮರನ್ನು ರಕ್ಷಿಸುವುದು, ಜುಂಜಪ್ಪನು ಸೋದರಮಾವಂದಿರಾದ ಕಂಬೇರಗೊಲ್ಲರನ್ನು ಸರ್ವನಾಶಗೈಯುವುದು, ತಾಳೇ ದುರ್ಗಿಯನ್ನು ದಮನ ಮಾಡುವುದು, ಸಿನ್ನಮ್ಮಳನ್ನು ಕಾಪಾಡುವುದು, ದೊಡ್ಡಕ್ಕಜಿಯನ್ನು ಶಿಕ್ಷಿಸಿ ಪ್ರಾಣಹೋಗುವಂತೆ ಮಾಡುವುದು, ಹಾಗೂ ಮೈಲಾರಲಿಂಗ ಗಸ್ತಿಯವರನ್ನೆಲ್ಲಾ ನಾಶಮಾಡಿ ಕೋಮಾಲೆಯನ್ನು ಪಡೆಯುವುದು ಈ ಮೊದಲಾದ ಘಟನಾ ಸಂದರ್ಭಗಳು ದುಷ್ಟಶಿಕ್ಷೆ–ಶಿಷ್ಟರಕ್ಷೆಗೆ ಸಂಬಂಧಪಟ್ಟ ಪ್ರಸಂಗಗಳಾಗಿವೆ. ಅಧ್ಯಯನದ ಸಲುವಾಗಿ ಮೊದಲು ದುಷ್ಟಶಿಕ್ಷೆಯನ್ನು ತುಲನಾತ್ಮಕವಾಗಿ ವಿವೇಚಿಸಿ ಆ ನಂತರ ಶಿಷ್ಟರಕ್ಷಣೆಯ ಬಗ್ಗೆ ತುಲನಾತ್ಮಕವಾಗಿ ಹಲವು ವಿಚಾರಗಳನ್ನು ಮಂಡಿಸುತ್ತೇನೆ. ಇಲ್ಲಿ ಮುಖ್ಯವಾಗಿ ದುಷ್ಟರ ನಾಶವೇ ಮೊದಲ ಗುರಿಯಾಗಿದ್ದು, ಶಿಷ್ಟರನ್ನು ರಕ್ಷಿಸುವುದು ಆನಂತರದ ಗುರಿಯಾಗಿರುತ್ತದೆ.

ಮಲೆಮಾದೇಶ್ವರ ಕಾವ್ಯದಲ್ಲಿ 'ಬೇವಿನ್ನಟ್ಟಿ ಕಾಳಮ್ಮನ ಸಾಲು' ಎಂಬ ಭಾಗದಲ್ಲಿ ಬೇವಿನಟ್ಟಿ ಕಾಳಮ್ಮ ಮಹಾದುಷ್ಟೆಯಾಗಿದ್ದಾಳೆ. ಇವಳಿಗೆ ಎಳ್ಳನ್ನು ಮಾದಪ್ಪನಿಗೆ ದಾನ ಮಾಡುವ ಗುಣವಿಲ್ಲದೆ ಹಿಂಜರಿಯುವ ಇವಳಿಗೆ ತನ್ನ ಅಧಿಕಾರವನ್ನು ಸ್ಥಾಪಿಸುವ ಗುರಿಯಿದ್ದು, ಸೊಸೆಯರನ್ನು ಬಹಳ ಹಿಂಸಿಸುತ್ತಾಳೆ. ನೊಣಕ್ಕೆ ಅಂಟಿರುವರಾಗಿ ಅಂಬಳಿಯನ್ನು ಚೀಪುತ್ತಾಳೆ ಅಂದರೆ ಅವಳು ಜಿಪುಣತನಕ್ಕೆ ಮೇಧಾವಿಯಾಗಿದ್ದಾಳೆ. ಭಿಕ್ಷುಕರು ಮನೆಬಾಗಿಲಿಗೆ ಬಂದರೆ ಅವರನ್ನು ಓಡಿಸಿಕೊಂಡು ಹೋಗುತ್ತಾಳೆ. ಕಾಳಮ್ಮ ಮಾದಪ್ಪನಿಂದ ಸಕಲ ಸಂಪತ್ತನ್ನು ಪಡೆದರೂ ಲೆಕ್ಕಿಸದೇ ಮಾದಪ್ಪನನ್ನೇ ಮನಬಂದಂತೆ ಬಯ್ದು ಎಳ್ಳಿನ ಭಿಕ್ಷೆಯನ್ನು ಕೊಡುವುದಿಲ್ಲವೆಂದು ಹಠವಿಡಿಯುತ್ತಾಳೆ. ಇಂತಹವಳು ಬಡವರ ಪರವಾಗಿಲ್ಲವೆಂದು, ದಾನಮಾಡುವ ಗುಣವಿಲ್ಲವೆಂದು, ಶರಣಾಗತ ಭಾವವಿಲ್ಲವೆಂದು ಅವಳನ್ನು ಭೂಮಿ ಮೇಲೆ ಉಳಿಸಲೇಬಾರದೆಂದು ಮಾದಪ್ಪ ನಿರ್ಧರಿಸಿ ಶಿಕ್ಷೆ ನೀಡುವುದಕ್ಕೆ ಮುಂದಾಗುತ್ತಾರೆ. ಮೊದಲು ಮಾದಪ್ಪ ಕಾಳಮ್ಮಳ ಏಳೇಳು ಹದಿನಾಲ್ಕು ಹಟ್ಟಿಯನ್ನು ಬೂದಿಯಿಂದ ಸುಟ್ಟು ಭಸ್ಮಮಾಡುತ್ತಾರೆ. ನಂತರ ಕಾಳಮ್ಮಳ ಮುಂದೆ ಮೇಲೆ ಭಸ್ಮ ಹಾಕಿ ಸುಟ್ಟು ಹಾಕುತ್ತಾರೆ. ಹೀಗೆ ಮಾದೇಶ್ವರ ಕಾಳಮ್ಮಳ ದುರಾಹಂಕಾರಕ್ಕೆ ಪೂರ್ಣ ವಿರಾಮವನ್ನು ಇಡುತ್ತಾರೆ. ಮಾದಪ್ಪನಿಗೆ ಹೆಣ್ಣೆಂಬ ಕರುಣೆಯಿದ್ದರೂ ಅದನ್ನು ಉಳಿಸಿಕೊಳ್ಳದ ಕಾಳಮ್ಮಳ ದುಷ್ಟತನವನ್ನು ಕೊನೆಗಾಣಿಸುತ್ತಾರೆ. ಕಾಳಮ್ಮಳಂತೆ ದುಷ್ಟತನದಿಂದ ನಡೆಯುವವಳು ಯಾರೆಂದರೆ ಜುಂಜಪ್ಪ ಕಾವ್ಯದ ದೊಡ್ಡಕ್ಕಜ್ಜಿ ಜುಂಜಪ್ಪನ ಕಾವ್ಯದ ದೊಡ್ಡಕ್ಕಜ್ಜಿ ಜುಂಜಪ್ಪನ ಅಜ್ಜಿಯೂ ಆಗಿದ್ದಾಳೆ ಜುಂಜಪ್ಪ ಬಡತನದಿಂದ ತತ್ತರಿಸಿದ್ದು, ದೀಪಾವಳಿ ಹಬ್ಬ ಮಾಡುವುದಕ್ಕಾಗಿ ದೊಡ್ಡಕ್ಕಜ್ಜಿಯಲ್ಲಿ ಅವುರೆಕಾಯಿಯನ್ನು ತರುವಂತೆ ಮಾರಣ್ಣ–ಮೈಲಾರಣ್ಣರಲ್ಲಿ ಹೇಳಿ ಕಳುಹಿಸುತ್ತಾನೆ. ಆದರೆ ದೊಡ್ಡಕ್ಕಜ್ಜಿಯೂ ಕಾಳಮ್ಮಳಂತೆ ದುಷ್ಟ ಬುದ್ಧಿಯುಳ್ಳವಳು, ಅವಳು ಅವರಿಗೆ ಅವುರೆಯನ್ನು

ದೇವರಿಗೆ ಮೀಸಲಿರಿಸಿದ್ದುದರಿಂದ ಸೋಮವಾರ ಬರಬೇಕೆಂದು ತಿಳಿಸುತ್ತಾಳೆ. ಅವರು ಹೋಗದಿದ್ದಾಗ ಬಯ್ಯುತ್ತಾಳೆ. ಇದರಿಂದಾಗಿ ಜುಂಜಪ್ಪ ಅವುರೆ ಪಡೆಯಲು ಜಂಗಮ, ಜೋಗಿ, ದಾಸಯ್ಯ ವೇಷಿಯಾಗಿ ಹೋದಾಗಲೂ ದೊಡ್ಡಕ್ಕಜ್ಜಿ ಅವುರೆಯನ್ನು ನೀಡದೆ ಜುಂಜಪ್ಪನನ್ನು ಕುರಿತು

*"ಎಲೋ ಜುಂಜಪ್ಪ*
*ಕಂಡೆನಾ ನಿನ್ನ ನಾನಾ ಮಾಯಿಗಳೆಲ್ಲ*
*ದಾಸಯ್ಯನಾಗಿ ಬಂದೆ*
*ಜಂಗುಮೈನಾಗಿ ಬಂದೆ*
*ಜೋಗಯ್ಯನಾಗಿ ಬಂದೆ*
*ಯಾವ ಮಾಯಿಗಳೆತ್ತಿದ್ರು*
*ನಿನಗೆ ಅವುರೆ ಕಾಯಿ ಕೊಡುದಿಲ್ಲ"*

ಎಂಬುದಾಗಿ ದುಷ್ಟತನದ ಮಾತುಗಳನ್ನು ಆಡುತ್ತಾಳೆ. ಬಡವರಿಗೆ, ಸಂಬಂಧಿಕರಿಗೆ ಕರುಣೆ ತೋರಿಸದ ದೊಡ್ಡಕ್ಕಜ್ಜಿಯನ್ನು ಉಳಿಸಲೇಬಾರದೆಂದು ಜುಂಜಪ್ಪ ನಿರ್ಧರಿಸಿ, ಸ್ವತಃ ತನ್ನಿಂದ ದೊಡ್ಡಕ್ಕಜ್ಜಿಯ ಪ್ರಾಣ ಹೋಗದಂತೆ ಎಚ್ಚರಿಕೆಯಿಂದಾಗಿ ವಿಷದ ನಾಗರಾವಿನ ಮೂಲಕ ಅವಳ ಪ್ರಾಣವನ್ನು ಹೋಗುವಂತೆ ಮಾಡುತ್ತಾನೆ. ಏಕೆಂದರೆ ಜುಂಜಪ್ಪನಿಗೆ ಹತ್ಯೆಗಳು ಆಗುವುದಿಲ್ಲ. ಮಾದೇಶ್ವರನು ಕಾಳಮ್ಮಳನ್ನು ಸರ್ವನಾಶ ಮಾಡಿದಂತೆ ಜುಂಜಪ್ಪನೂ ಸಹ ದೊಡ್ಡಕ್ಕಜ್ಜಿಯನ್ನು ಅವುರೆಯನ್ನು ಕೊಡದ ಕಾರಣವಾಗಿ ದಮನಮಾಡಿ ನಾಶಮಾಡುತ್ತಾನೆ. ನಾಯಕರಿಗೆ ಯಾರು ಶರಣಾಗಿ ತಮ್ಮ ತಪ್ಪನ್ನು ತಿದ್ದಿಕೊಳ್ಳುತ್ತಾರೋ ಅಂತಹವರನ್ನು ಮಾತ್ರ ಉಳಿಸುತ್ತಾರೆಂಬುದು ಈ ಮೇಲಿನ ಪ್ರಸಂಗಗಳಿಂದ ತಿಳಿದುಬರುತ್ತದೆ. ಕಾಳಮ್ಮ, ದೊಡ್ಡಕ್ಕಜ್ಜಿಯಂತೆ ದುಷ್ಟನಾದವನು ಮುದ್ದಮ್ಮಳ ಮಗನಾದ ಕೆಂಪಾಚಾರಿ, ಈತ ಕುಲುಮೆ ಮನೆಯಲ್ಲಿ ಕಬ್ಬಿಣದ ಕೆಲಸ ಮಾಡುವವನು, ಈತನಲ್ಲಿ ಬೆಂಕಿ ಕೆಂಡವನ್ನು ಪಡೆದು ಒಕ್ಕಲನ್ನಾಗಿ ಸ್ವೀಕರಿಸಲು ಮಂಟೇಸ್ವಾಮಿಗಳು ಕೆಂಪಾಚಾರಿಯಲ್ಲಿಗೆ ಬರುತ್ತಾರೆ. ಆದರೆ ಕೆಂಪಾಚಾರಿ ಕಬ್ಬಿಣ ಕೆಂಡವನ್ನು ನೀಡಲು ನಿರಾಕರಿಸುತ್ತಾನೆ. ಕೆಂಡವನ್ನು ಮಾತ್ರ ನೀಡಲಾರೆ ಎನ್ನುತ್ತಾನೆ. ಇಂದಿನ ಸಮಾಜದಲ್ಲಿ ಕೆಲವು ಹಠಮಾರಿಗಳು ಹಠವನ್ನು ಬಿಡದೇ ಪ್ರಾಣವನ್ನು ಸಹ ಗಣನೆಗೆ ತೆಗೆದುಕೊಳ್ಳದೇ ಧಿಕ್ಕರಿಸಿರುವುದು ಗಮನಾರ್ಹ, ಕಾಳಮ್ಮ, ದೊಡ್ಡಕ್ಕಜ್ಜಿಯವರ ಪ್ರಾಣವನ್ನು ನಾಯಕರು ತೆಗೆಯುತ್ತಾರೆ. ಆದರೆ ಮಂಟೇಸ್ವಾಮಿಗಳು ಕೆಂಪಾಚಾರಿಯನ್ನು ಶಿಕ್ಷಿಸುತ್ತಾನೆಯೇ ವಿನಃ ಪ್ರಾಣವನ್ನು ತೆಗೆಯುವುದಿಲ್ಲ. ಕೆಂಪಾಚಾರಿಯನ್ನು ಕಾಳಿಂಗ ಗುಹೆಯಲ್ಲಿ ಹಾವು–ಚೇಳುಗಳೊಂದಿಗೆ ಕೂಡಿ ಹಾಕಿ ಹನ್ನೆರಡು ವರ್ಷಗಳ ಕಾಲ ಶಿಕ್ಷೆ ನೀಡುತ್ತಾರೆ. ಈ ಶಿಕ್ಷೆಯಿಂದಾಗಿ ಕೆಂಪಾಚಾರಿಯ ಅಹಂಕಾರ ಕಡಿಮೆಯಾದರೂ ಹಠ ನಾಶವಾಗುವುದಿಲ್ಲ. ಕೆಂಪಾಚಾರಿಯೂ ಕಾಳಮ್ಮನಂತೆಯೇ ದರ್ಪವನ್ನು ಉಳ್ಳವನು. ಇವನು ಮಂಟೇಸ್ವಾಮಿಗೆ ಸವಾಲು ಹಾಕುವ ಗುಣವನ್ನು ಹೊಂದಿದ್ದು, ತಾನು ಗುರುವೆಂದು ಮಂಟೇಸ್ವಾಮಿ ಶಿಷ್ಯನೆಂದು ನಿರ್ಧರಿಸುತ್ತಾನೆ. ಇವನು ಮಂಟೇಸ್ವಾಮಿಯ ಎರಡು ಅಂಗೈಯಲ್ಲಿ ಬೆಂಕಿ ಕೆಂಡವನ್ನು ಇಟ್ಟನು. ಆದರೆ ಮಂಟೇಸ್ವಾಮಿ ಪವಾಡ ಪುರುಷನಾಗಿದ್ದರಿಂದ ಅಂಗೈಯಲ್ಲಿನ ಬೆಂಕಿ ಕೆಂಡವನ್ನು ಪುಷ್ಪವನ್ನಾಗಿ ಪರಿವರ್ತಿಸುತ್ತಾನೆ. ಕೆಂಪಾಚಾರಿಯನ್ನು ಶಿಕ್ಷಿಸಿದರೆ ಮಾತ್ರ ಒಕ್ಕಲನ್ನಾಗಿ ಪಡೆಯಬಹುದೆಂದು ಅರಿತು ಗುಹೆಯೊಳಗೆ ಕೂಡಿಹಾಕುತ್ತಾರೆ. ಅವನಿಗೆ ಜನಿವಾರಗಳನ್ನೆಲ್ಲಾ ತೆಗೆದು 'ಸಿದ್ದಾಪ್ಪಾಜಿ' ಎಂದು ನಾಮಕರಣ ಮಾಡುತ್ತಾರೆ. ಮುಂದೆ ಮಂಟೆಸ್ವಾಮಿಗಳು ಸಿದ್ದಾಪ್ಪಾಜಿಯನ್ನು ಪಾಂಚಾಳರಲ್ಲಿ ಕಬ್ಬಿಣದ ಭಿಕ್ಷೆಯನ್ನು ಪಡೆಯಲು ಪಂಚಾಳರಲ್ಲಿಗೆ ಒತ್ತಾಯಪೂರ್ವಕವಾಗಿ ಕಳುಹಿಸುತ್ತಾರೆ. ಕಾಳಮ್ಮ ದೊಡ್ಡಕ್ಕಜ್ಜಿ ಕೆಂಪಾಚಾರಿ ಈ ಮೂರು ಜನ ಹಠಮಾರಿಗಳೆಂದು ಪರಿಗಣಿಸಬಹುದು. ಇವರಗಳು ಭಿಕ್ಷೆ ನೀಡದೇ ನಾಯಕರ ಶಿಕ್ಷೆಗಳಿಗೆ ಒಳಗಾದವರು. ನಾಯಕರಿಗೆ ದುಷ್ಟರನ್ನು ಸದೆಬಡಿದರೆ ಶಿಷ್ಟತೆ

ಉಳಿಯಲು ಅವಕಾಶವಾಗುತ್ತದೆ ಎಂಬ ದೃಢವಾದ ನಂಬಿಕೆ ಇದ್ದಂತೆ ತೋರುತ್ತದೆ.

ಮೈಲಾರನಿಗೆ ತನ್ನನ್ನು ಕೋಮಾಲೆಯ ಅರಮನೆಯೊಳಗೆ ಬಿಡಲಿಲ್ಲವೆಂದು ಶಿಕ್ಷೆಗಳಿಗೆ ಗುರಿಪಡಿಸದರೆ ಮಂಟೇಸ್ವಾಮಿಗೆ ತನ್ನ ಒಕ್ಕಲಾದ ಸಿದ್ದಾಪ್ಪಾಜಿ ಕಬ್ಬಿಣದ ಭಿಕ್ಷೆ ನೀಡದ ಪಂಚಾಳರ ದೊರೆಗಳನ್ನು ಹಲವು ಶಿಕ್ಷೆಗಳಿಗೆ ಒಳಪಡಿಸುತ್ತಾರೆ. ಆದರೆ ಇಲ್ಲಿನ ದುಷ್ಟ ಶಿಕ್ಷೆಯು ಪ್ರಸಂಗಗಳು ವಿಭಿನ್ನತೆಯಿಂದ ಕೂಡಿವೆ. ಶಿಕ್ಷೆ ನೀಡುವ ಮನೋಧರ್ಮ ಒಂದೇ ಎನಿಸಿದೆ. ಮೈಲಾರನು ಹನ್ನೆರಡು ಮಣ ತಂಬಾಕನ್ನು ಚಿಲುಮೆಗೆ ತುಂಬಿಸಿ ಹೊಗೆಬಿಟ್ಟು ಗಸ್ತಿಯವರನ್ನೆಲ್ಲಾ ಮೂರ್ಛಗೊಳಿಸಿ, ಅವರ ಗಡ್ಡ ಮೀಸೆಗಳನ್ನು ಗಂಟುಹಾಕುತ್ತಾನೆ. ಕುರುಬರಿಗೆ ಆ ಗಂಟುಗಳನ್ನು ಬಿಚ್ಚುವುದಕ್ಕೆ ಅಸಾಧ್ಯವಾಗುತ್ತದೆ. ಕೊನೆಗೆ ಮೈಲಾರನೇ ಗಸ್ತಿಯವರ ಗಡ್ಡಮೀಸೆಗಳನ್ನು ಗಂಟುಗಳನ್ನು ಬಿಚ್ಚಿದರೆ, ಗಸ್ತಿಯವರೆಲ್ಲಾ ಕರ್ನಾಗುಂಡು ಹುಣಸೆ ಬರ್ಲುವಿನಿಂದ ಮೈಲಾರನನ್ನು ಹೊಡೆಯುತ್ತಾರೆ. ಆ ಏಟುಗಳೆಲ್ಲಾ ಮಲ್ಲಯ್ಯನಿಗೆ ಬೀಳದೇ ಗಸ್ತಿಯವರಿಗೆ ಬೀಳುತ್ತದೆ. ಇದರಿಂದ ಗಸ್ತಿಯವರೆಲ್ಲ ಶಿಕ್ಷೆಗಳಿಂದಾಗಿ ಮೈಲಾರನಿಗೆ ಶರಣಾಗುತ್ತಾರೆ. ಆದರೆ ಮಂಟೇಸ್ವಾಮಿಯ ಪಂಚಾಳರ ಪ್ರಸಂಗ ಅದಕ್ಕಿಂತ ವಿಭಿನ್ನವಾಗಿದೆ. ಮಂಟೇಸ್ವಾಮಿಯು ಸಿದ್ದಾಪ್ಪಾಜಿಯನ್ನು ಕಬ್ಬಿಣದ ಭಿಕ್ಷೆ ತರುವಂತೆ ಪಾಂಚಾಲರಲ್ಲಿಗೆ ಕಳುಹಿಸಿದಾಗ ಪಾಂಚಲರು ನೇರವಾಗಿ ಕಬ್ಬಿಣದ ಭಿಕ್ಷೆ ನೀಡದೆ ಸಿದ್ದಾಪ್ಪಾಜಿ ಮತ್ತು ಮಂಟೇಸ್ವಾಮಿಗಳ ಶಕ್ತಿಯನ್ನು ಪರೀಕ್ಷಿಸಲು ಮುಂದಾಗುತ್ತಾರೆ. ಕಾದ ಆನೆಗಾತ್ರದ ಪಡುಗುಂಡಿನ ಮೇಲೆ ನಿಂತರೆ ಗುರುವಿನ ಸತ್ಯ ಅರಿತು ನಂತರ ಕಬ್ಬಿಣದ ಭಿಕ್ಷೆ ನೀಡುತ್ತೇವೆ ಎಂಬ ಸತ್ಯವನ್ನು ನೀಡುತ್ತಾರೆ. ಆಗ ಸಿದ್ದಾಪ್ಪಾಜಿ ಧರೆಗೆ ದೊಡ್ಡವರ ನೆನೆಯುತ್ತಾ ಪಡುಗುಂಡಿನ ಮೇಲೆ ನಿಂತಾಗ ಕಬ್ಬಿಣವೆಲ್ಲಾ ಕಾವಿ ನೀರಾಗುತ್ತದೆ. ಸಿದ್ದಾಪ್ಪಾಜಿಯ ಕಷ್ಟವನ್ನು ನೋಡಲಾಗದ ಮಂಟೇಸ್ವಾಮಿಗಳು ಮಾರಿಯರನ್ನು ಹಲಗೂರಿಗೆ ಪ್ರವೇಶಿಸಿ

***"ಅವರು ಬೀದಿಲಾಡೋ ಮಕ್ಕಳಿಗೆ***<br>
***ಹುಣ್ಣುರೋಗ ಕೊಟ್ಟಾರಲ್ಲ"***<br>
***ಅವರು ಹಾದಿಲಾಡೋ ಮಕ್ಕಳಿಗೆ***<br>
***ಗ್ವಾರು ರೋಗ ಕೊಟ್ಟರಲ್ಲಾ"***<br>
***"ಅವು ಲಾಲಿಲಾಡೋ ಮಕ್ಕಳು***<br>
***ಲಾಲಿ ಒಳಗೆ ಸಾಯುತ್ತವೆ"***

ಎಂಬಂತೆ ಹಲಗೂರನ್ನು ಸರ್ವನಾಶಮಾಡುತ್ತಾರೆ. ಇದರಿಂದ ಕಂಗಾಲಾದ ಪಂಚಾಳ ದೊರೆಗಳು ಶಿಕ್ಷೆಯನ್ನು ತಾಳಲಾರದೇ ಕಬ್ಬಿಣದ ಭಿಕ್ಷೆ ನೀಡಿ ಶರಣಾಗುತ್ತಾರೆ. ಇಲ್ಲಿ ಪಾಂಚಾಳರಿಗೆ ಶಿಕ್ಷೆ ನೀಡಲು ನಾಯಕನಾದ ಮಂಟೇಸ್ವಾಮಿ ಮಾರಿಯರನ್ನು ಬಳಸಿಕೊಂಡರೆ ಮೈಲಾರನು ತಾನು ನೇರವಾಗಿ ಗಸ್ತಿಯವರನ್ನು ನಾಶಮಾಡುತ್ತಾನೆ. ಅಂದರೆ ಇವರಿಬ್ಬರು ಶಿಕ್ಷೆ ನೀಡುವುದರೊಂದಿಗೆ ಗಸ್ತಿಯವರನ್ನು ಪಾಂಚಾಳರನ್ನು ದುಷ್ಟತನಗಳಿಂದ ಬಿಡುಗಡೆಗೊಳಿಸುತ್ತಾರೆ. ಇವರೆಲ್ಲಾ ಸಾಮಾನ್ಯ ಮನುಷ್ಯರಾಗಿರುವ ದುಷ್ಟರು ಅಷ್ಟೇ. ನಾಯಕರನ್ನೇ ನಾಶ ಮಾಡಲು ಹೊರಟಿರುವ ದುಷ್ಟ ದೈತ್ಯಶಕ್ತಿಗಳು ಜನಪದ ಮಹಾಕಾವ್ಯಗಳಲ್ಲಿ ಕಾಣಬರುತ್ತಾರೆ. ಅವರೇ ಜುಂಜಪ್ಪ ಕಾವ್ಯದಲ್ಲಿ ತಾಳೇದುರ್ಗಿ ಮತ್ತು ಮಂಟೇಸ್ವಾಮಿ ಕಾವ್ಯದಲ್ಲಿನ ಕಾಳಿಕಾದೇವಿ. ಮಲೆಮಾದೇಶ್ವರ ಕಾವ್ಯದಲ್ಲಿನ ಶ್ರವಣದೊರೆ ಬಹಳ ಅಹಂಕಾರಿಯಾಗಿದ್ದು, ಮಾದಪ್ಪನನ್ನು ಚಮಾಳಿಗನನ್ನಾಗಿ ತಿಳಿದ ದುಷ್ಟ ದೊರೆಯಾಗಿದ್ದಾನೆ. ಇವರುಗಳು ಜನಪದ ಮಹಾಕಾವ್ಯಗಳಲ್ಲಿ ಅತ್ಯಂತ ದುಷ್ಟರಾಗಿದ್ದಾರೆ. ಇವರನ್ನು ದಮನ ಮಾಡುವುದೇ ನಾಯಕರ ಪರಮ ಗುರಿಯಾಗಿದೆ.

ತಾಳೆದುರ್ಗಿಯು ಜುಂಜಪ್ಪನ ಕಾವ್ಯದಲ್ಲಿ ಮಹಾದುಷ್ಟೆಯಾಗಿದ್ದು, ದನಗಳ ಬೆಳವಣಿಗೆಯನ್ನು ಸಹಿಸದ ಕಂಬೇರುಗೊಲ್ಲರು (ಸೋದರಮಾವಂದಿರು) ಜುಂಜಪ್ಪನನ್ನು ನುಂಗುವಂತೆ ತಾಳೆದುರಿಗೆ ತಿಳಿಸಿ

ತಮ್ಮನ್ನು ರಕ್ಷಿಸಬೇಕೆಂದು ಕೇಳಿಕೊಳ್ಳುತ್ತಾರೆ. ಅದರಂತೆ ತಾಳೇದುರ್ಗಿಯು ಜುಂಜಪ್ಪನನ್ನು ಜುಂಜಪ್ಪನನ್ನು ಜುಂಜಪ್ಪನ ದನಗಳನ್ನೆಲ್ಲಾ ನುಂಗಲು ಹವಣಿಸುತ್ತಿರುತ್ತದೆ. ಆಗ ದೇವತೆ ಎನಿಸಿರುವ ಪುರಳ್ಳಿ ಭೂತಪ್ಪ ಜುಂಜಪ್ಪನಿಗೆ ಸಹಾಯಕನಾಗಿ ನಿಂತು ತಾಳೇದುರಿಯನ್ನು ಸದೆಬಡಿಯುತ್ತಾನೆ. ತಾಳೇದುರಿ ಈಗಾಗಲೇ

***"ಅವಳು ಇರುಗೊಂದಿ ಪಟ್ಣ***
***ದುರ್ಗಿ ಪಟ್ಣ ಹಂಗೆ ಬಿಟ್ಟಂಬಿಟ್ಟು***
***ಸುತ್ತುಲ ಇರೋ ಪಟ್ಣುಗಳೊಳಗೆ ಇರಾ ಜನಗಳನ್ನ***
***ಇರ ದನಕರುಗಳನ್ನೆಲ್ಲಾ ನುಂಗಿ ನಾಶ ಮಾಡ್ಹಾಕಿ ಬಿಟ್ಟವ್ಳೆ"***

ಎಂಬುದಾಗಿ ತಿಳಿದ ಪುರ್ಲಳ್ಳಿ ಭೂತಪ್ಪ ಭ್ರಷ್ಟಮುಂಡೆಯನ್ನು ನಾಶಮಾಡಲೇಬೇಕೆಂದು ನಿರ್ಧರಿಸಿ ಬಹಳ ಎತ್ತರಕ್ಕೆ ಬೆಳೆದು, ಮಾರಿಯರನ್ನೆಲ್ಲಾ ಇರುಗೊಂದಿಗೆ ನುಗ್ಗಿಸಿ ವಾಂತಿ, ಭೇದಿ ಮೂಲಕ ಎಲ್ಲರನ್ನು ಎಲ್ಲವನ್ನು ಧ್ವಂಸ ಮಾಡಿಸುತ್ತಾನೆ. ನಂತರದಲ್ಲಿ ಪುರ್ಲಳ್ಳಿ ಭೂತಪ್ಪ ಜುಂಜಪ್ಪನ ಪರವಾಗಿ ತಾಳೇ ದುರ್ಗಿಯೊಂದಿಗೆ ಪ್ರತಿಭಟಿಸಿ ಬಲಮುರಿ ದೊಣ್ಣೆಯಿಂದ ಅವಳ ಸೊಂಟಕ್ಕೆ ಹೊಡೆಯುತ್ತಾನೆ. ಮತ್ತೆ ಅದೇ ದೊಣ್ಣೆಯನ್ನು ಜಗ್ಗಿಸಿ ಹೊಡೆದಾಗ ತಾಳೇದುರ್ಗಿ ಮೂರು ತುಂಡುಗಳಾಗಿ ಬಿದ್ದು ಹೋಗುತ್ತಾಳೆ. ಹೀಗೆ ಪುರ್ಲಳ್ಳಿ ಭೂತಪ್ಪ ತಾಳೇದುರ್ಗಿಯನ್ನು ನಾಶಮಾಡುವುದರೊಂದಗೆ ದುಷ್ಟಶಕ್ತಿಯನ್ನು ಇಲ್ಲವಾಗಿಸುತ್ತಾನೆ. ಆದರೆ ಮಂಟೇಸ್ವಾಮಿ ಕಾವ್ಯದಲ್ಲಿ ಮಂಟೇಸ್ವಾಮಿಯು ಸಿದ್ದಾಪ್ಪಾಜಿಯ ಪರವಾಗಿ ನಿಂತು ದುಷ್ಟಶಕ್ತಿಯಾದ ಕಾಳಿಕಾದೇವಿಯನ್ನು ಸರ್ವನಾಶಮಾಡುತ್ತಾನೆ. ಇಲ್ಲಿ ಪಂಚಾಳ ದೊರೆಗಳು ಸಿದ್ದಾಪ್ಪಾಜಿಯವರ ಪವಾಡವನ್ನು (ಸತ್ಯ) ಅರಿಯಲು ಕಾಳಿಕಾದೇವಿ ಮಠದಲ್ಲಿ ಸಿದ್ದಾಪ್ಪಾಜಿಯನ್ನು ಕೂಡಿಹಾಕುತ್ತಾರೆ. ಸಿದ್ದಾಪ್ಪಾಜಿ ಕಾಳಿಕಾದೇವಿಯಿಂದ ಬಿಡುಗಡೆಯಾದಾಗ ಮಾತ್ರ ಕಬ್ಬಿಣದ ಭಿಕ್ಷೆ ನೀಡುವುದರೊಂದಿಗೆ ಒಕ್ಕಲಾಗುತ್ತೇವೆ ಎಂದು ಪ್ರಮಾಣ ಮಾಡುತ್ತಾರೆ. ಅದರಂತೆಯೇ ಸಿದ್ದಾಪ್ಪಾಜಿಯು ಕಣ್ಣು ಬಿಟ್ಟಿರುವ ಕಾಳಿಕಾ ದೇವಿಯನ್ನು ನೋಡಿ ಧರೆಗೆ ದೊಡ್ಡವರನ್ನು ಧ್ಯಾನಿಸಿ ತನ್ನನ್ನು ಕಾಳಿಕಾದೇವಿಯಿಂದ ಪಾರುಮಾಡುವಂತೆ ಕೇಳಿಕೊಂಡಿರುತ್ತಾನೆ. ನಿದ್ದೆಯಿಂದೆದ್ದ ಕಾಳಿಕಾದೇವಿಯು ಸಿದ್ದಾಪ್ಪಾಜಿಯನ್ನು ಕಂಡು ಹೊರಗೆ ಬರುತ್ತಾಳೆ. ಆಗ ತಕ್ಷಣವೇ ಸಿದ್ದಾಪ್ಪಾಜಿ ಎಡಗಾಲಿನಿಂದ ಅವಳನ್ನು ಒದ್ದೊಡನೆ ಅವಳು ನಡು ಬೀದಿಯಲ್ಲಿ ಬಿದ್ದೋಗುತ್ತಾಳೆ. ಅವಳನ್ನು ಸಂಹಾರ ಮಾಡುತ್ತಾನೆ. ಇದರಿಂದಲೂ ಪಂಚಾಳರು ಸಿದ್ದಾಪ್ಪಾಜಿ ಮತ್ತು ಮಂಟೇಸ್ವಾಮಿಗೆ ಶರಣಾಗುವುದಿಲ್ಲ. ಇಲ್ಲಿ ಮುಖ್ಯವಾಗಿ ದುಷ್ಟೆಯನ್ನು ಸರ್ವನಾಶ ಮಾಡಿರುವುದು ಸರಿಯಾಗಿದೆ. ಅಂದರೆ ದುಷ್ಟಶಕ್ತಿಗಳನ್ನು ನಾಶಮಾಡಬೇಕಾದರೆ ದೇವತೆಗಳ ಕೈಯಲ್ಲಿ ಮಾತ್ರ ಸಾಧ್ಯವಾಗುತ್ತದೆ. ಇಲ್ಲಿ ಮಂಟೇಸ್ವಾಮಿಯ ಮಹಿಮೆಯಿಂದ ಕಾಳಿಕಾದೇವಿ ಹತಳಾದರೆ ಜುಂಜಪ್ಪ ಕಾವ್ಯದಲ್ಲಿ ಜುಂಜಪ್ಪನಿಗೆ ಪವಾಡಶಕ್ತಿಯಿದ್ದರೂ ಸ್ತ್ರೀಹತ್ಯೆ ಮಾಡಬಾರದೆಂಬ ಉದ್ದೇಶದಿಂದ ಪುರಲ್ಲಿ ಭೂತಪ್ಪ ತಾಳೇದುರ್ಗಿಯನ್ನು ಸಂಹಾರಮಾಡುತ್ತಾನೆ. ದುಷ್ಟಶಕ್ತಿಯಿರುವಲ್ಲಿ ಶಿಷ್ಟರು ಬರುವುದಕ್ಕೆ ಸಾಧ್ಯವಿಲ್ಲವೆಂಬುದನ್ನು ಅರಿತು ಈ ರೀತಿ ದುಷ್ಟ ಶಕ್ತಿಗಳನ್ನು ಸರ್ವನಾಶ ಮಾಡುತ್ತಾರೆ.

ಮಲೆಮಾದೇಶ್ವರ ಕಾವ್ಯದಲ್ಲಿ ಅತ್ಯಂತ ಭ್ರಷ್ಟನಾದ ದೊರೆ ಶ್ರವಣದೊರೆ. ಈತನು ದೇವಾನುದೇವತೆಗಳನ್ನೆಲ್ಲಾ ತನ್ನ ಹತೋಟಿಯಲ್ಲಿಟ್ಟುಕೊಂಡಿರುತ್ತಾನೆ. ಇವನಿಂದ ದೇವತೆಗಳನ್ನು ಬಿಡುಗಡೆಗೊಳಿಸುವ ಸಲುವಾಗಿ ಮಾದೇಶ್ವರ ಶ್ರವಣದೊರೆಯು ರಾಜ್ಯಭಾರ ಮಾಡುವಾಗ ಅಲ್ಲಿಗೆ ಬರುತ್ತಾರೆ. ಆಗ ಶ್ರವಣದೊರೆಯು ಮಾದಪ್ಪನನ್ನು ಯಾರೆಂದು ಪ್ರಶ್ನಿಸಿದಾಗ ತಾನು 'ಉತ್ತರ ದೇಸದ ಮಾರಾರಿ' ಎಂಬುದಾಗಿ ಹೇಳಿದ್ದು ಅದು ಶ್ರವಣದೊರೆಗೆ 'ಮಾದಾರಿ' ಎಂಬಂತೆ ಕೇಳಿಸಿದ್ದರಿಂದ ಆಗ ಮಾದಪ್ಪ

ದುಷ್ಟ ಮಾದಪ್ಪನನ್ನು ಚಮಾಳಿಗೆಯನ್ನು ಮಾಡಿಕೊಡುವಂತೆ ಕೇಳುತ್ತಾನೆ. ಶ್ರವಣದೊರೆಯನ್ನು ಸದೆಬಡಿಯಲು ಸುಸಮಯವೆಂದು ತಿಳಿದು ಹರಳಪ್ಪನಿಂದ ಚಮಾಳಿಗೆಯನ್ನು ಸಿದ್ಧಪಡಿಸಿ ಹುಟ್ಟರೆ ಕಲ್ಲಿನ ಮೇಲಿಟ್ಟು ಶ್ರವಣದೊರೆಯನ್ನು ಚಮಾಳಿಗೆಯನ್ನು ಮೆಟ್ಟುವಂತೆ ಮಾದಪ್ಪ ತಿಳಿಸುತ್ತಾರೆ. ಶ್ರವಣದೊರೆ ಬಿಗಿಯಾಗಿದ್ದ ಉಂಗುಷ್ಟವನ್ನು ಸರಿಮಾಡಲು ಬಗ್ಗಿದಾಗ ಬೆಂಕಿ ಧಗಧಗನೆ ಉರಿದು ಹೊಗೆಯಾಗುತ್ತದೆ. ಆ ಸಂದರ್ಭದಲ್ಲಿ ಶ್ರವಣದೊರೆಯನ್ನು ಸರ್ವನಾಶಮಾಡುವಲ್ಲಿ ಮಾದಪ್ಪ ಸಿದ್ದನಾಗಿ ತ್ರಿಶೂಲ ಹಿಡಿದು ಅವನ ಎದೆಯ ಮೇಲೆ ನಿಂತು ಕೊಲ್ಲುತ್ತಾನೆ. ಇಲ್ಲೆಲ್ಲಾ ನಾಯಕರೆಲ್ಲರ ಉದ್ದೇಶ ದುಷ್ಟಶಿಕ್ಷೆ–ಶಿಷ್ಟರಕ್ಷೆ ಎನ್ನುವುದು ಮಾತ್ರ ಸಾಮ್ಯಾತೆಯಿಂದ ಕೂಡಿದ್ದು, ಶಿಕ್ಷೆ ನೀಡುವಾಗ ಮಾತ್ರ ವಿಭಿನ್ನತೆಯ ಸಂದರ್ಭಗಳಿಂದ ಕೂಡಿವೆ. ಮಾದಪ್ಪ ಶ್ರವಣದೊರೆಯನ್ನು ಸದೆಬಡೆದದ್ದು ಜುಂಜಪ್ಪನ ಪರವಾಗಿ ಪುರ್ಲಳ್ಳಿ ಭೂತಪ್ಪ ತಾಳೇದುರ್ಗಿಯನ್ನು ಸಂಹಾರ ಮಾಡಿದ್ದು ಹಾಗೂ ಮಂಟೇಸ್ವಾಮಿ ಸಿದ್ದಾಪ್ಪಾಜಿಯನ್ನು ಉಳಿಸಲು, ಕಬ್ಬಿಣ ಭಿಕ್ಷೆ ಪಡೆಯುವ ಸಲುವಾಗಿ ಕಾಳಿಕಾದೇವಿಯನ್ನು ಸಂಹಾರ ಮಾಡಿದ್ದು, ದುಷ್ಟಶಿಕ್ಷೆಗೆ ಉದಾಹರಣೆಗಳಾದರೂ ಪ್ರಸಂಗಗಳು ನಡೆಯುವ ಕ್ರಿಯೆ, ಸ್ವರೂಪಗಳು ಬದಲಾವಣೆಗಳಿಂದ ಕೂಡಿವೆ ಎನ್ನಬಹುದು. ದುಷ್ಟಶಿಕ್ಷೆ–ಶಿಷ್ಟರಕ್ಷೆಯ ಸಂದರ್ಭಗಳಲ್ಲಿ ಅಷ್ಟಾಗಿ ಸಾಮ್ಯತೆಗಳು ಕಂಡುಬರುವುದಿಲ್ಲ. ಒಂದಕ್ಕೊಂದು ಪೂರಕವಾಗಿಲ್ಲ.

ಜುಂಜಪ್ಪ ಮಹಾಕಾವ್ಯದಲ್ಲಿ ಪ್ರಧಾನವಾಗಿ ದುಷ್ಟರೆನಿಸಿರುವ ಕಂಬೇರುಗೊಲ್ಲರಾದ ಜುಂಜಪ್ಪನ ಸೋದರ ಮಾವಂದಿರು, ತಮ್ಮ ತಂಗಿ ಸಿನ್ನಮ್ಮಳ ಬಾಳು ಚೆನ್ನಾಗಿರಲೆಂದು ಏಳು ಕರುಗಳನ್ನು ನೀಡಿರುತ್ತಾರೆ. ಈ ಕರುಗಳನ್ನು ಬೆಳೆಸಿ ಜುಂಜಪ್ಪ ಏಳು ಲಕ್ಷದ ದನಗಳನ್ನಾಗಿ ಅಭಿವೃದ್ಧಿ ಪಡಿಸುತ್ತಾನೆ. ಇದರಿಂದ ಕಂಬೇರುಗೊಲ್ಲರಿಗೆ ಅಸೂಯೆ ಉಂಟಾಗಿ ಜುಂಜಪ್ಪನನ್ನು ದ್ವೇಷಿಸಲು ಪ್ರಾರಂಭಿಸಿ, ಹಲವು ಮಾಟ–ಮಂತ್ರಗಳನ್ನು ಪಂಡಿತರಿಂದ ಮಾಡಿಸಿ ಜುಂಜಪ್ಪನ ದನಗಳ ಬೆಳವಣಿಗೆಯನ್ನು ಕುಂಠಿತಗೊಳಿಸಲು ಪ್ರಯತ್ನಿಸುತ್ತಾರೆ. ಕಂಬೇರುಗೊಲ್ಲರು ಎಂತಹ ಮಹಾದುಷ್ಟರೆಂದರೆ ತಂಗಿಯ ಬಾಳನ್ನು ಹಾಳು ಮಾಡಲು ಮುಂದಾಗಿ ಜುಂಜಪ್ಪನನ್ನು ಹತ್ಯೆ ಮಾಡಲು ನಾನಾ ರೀತಿಯಲ್ಲಿ ಅವನಿಗೆ ನಿದ್ರೆ ಬರುವಂತೆ ಅವನಂತೆ ಪ್ರತಿರೂಪವನ್ನು ಪಂಡಿತರಿಂದ ಮಾಡಿಸಿ ಜುಂಜಪ್ಪನಿಗೆ ಪ್ರಜ್ಞೆಯಿಲ್ಲದಂತೆ ಮಾಡುತ್ತಾರೆ. ಜುಂಜಪ್ಪನ ಬಡಮೈಲನನ್ನು ಸದೆ ಬಡಿಯುತ್ತಾರೆ. ಜುಂಜಪ್ಪನನ್ನು ಹೇಗಾದರೂ ಮಾಡಿ ಕೊನೆಗಾಣಿಸಬೇಕೆಂದು ವಿಷದ ಕಜ್ಜಾಯಗಳ ಊಟವನ್ನು ಬಡಿಸಲು ಅವನನ್ನು ತಮ್ಮ ಮನಗೆ ಆಹ್ವಾನಿಸುತ್ತಾರೆ. ಸೋದರಮಾವಂದಿರು ಜುಂಜಪ್ಪನಿಗೆ ಉರಿಮದ್ದಿನ ಪಾಯಸ, ವಿಷದ ಕಜ್ಜಾಯಗಳನ್ನು ನೀಡಿದ್ದುದರಿಂದ ಜುಂಜಪ್ಪ ಅವನ್ನು ತಿಂದು ಸಾಯುತ್ತಾನೆ. ಅಣ್ಣನಿಲ್ಲದ ಮೇಲೆ ತಾವಿರಬಾರದೆಂದು ಮಾರಣ್ಣ–ಮೈಲಣ್ಣರು ವಿಷದ ಕಜ್ಜಾಯಗಳನ್ನು ತಿಂದು ಪ್ರಾಣಬಿಡುತ್ತಾರೆ. ಇಂತಹ ದುರಂತಕ್ಕೆ ಕಾರಣರಾದ ಕಂಬೇರುಗೊಲ್ಲರೆಂಬ ಮಹಾದುಷ್ಟರನ್ನು ಭೂಮಿ ಮೇಲೆ ಇರಿಸಬಾರದೆಂದು ಈಶ್ವರನ ಆಜ್ಞೆಯಂತೆ ಜುಂಜಪ್ಪ ಮತ್ತೆ ಭೂಲೋಕಕ್ಕೆ ಬಂದು ಕಂಬೇರುಗೊಲ್ಲರನ್ನು ಹತ್ತಿಕ್ಕುವ ಸಲುವಾಗಿ ಅವರ ಹಟ್ಟಿಗೆ ಬೆಂಕಿ ಹಾಕಿ, ಉರಿಭಾಗವನ್ನು ಬಿಟ್ಟು ಸರ್ವನಾಶಮಾಡುತ್ತನೆ. ತನ್ನ ತಂಗಿ ಮಾರಕ್ಕಳು ಕಂಬೇರುಗೊಲ್ಲರು ಸೊಸೆಯೆಂಬುದನ್ನು ಲೆಕ್ಕಿಸದೇ ಜುಂಜಪ್ಪ ಸೋದರ ಮಾವಂದಿರನ್ನು ಸಂಪೂರ್ಣವಾಗಿ ಸರ್ವನಾಶ ಮಾಡುತ್ತಾನೆ. ಈ ಪ್ರಸಂಗವು ಸಂಬಂಧಿಕರ ದ್ವೇಷಕ್ಕೆ ಅನ್ವಯಿಸಿದ್ದು, ಇಡೀ ಕಾವ್ಯದ ಹರವಿಗೆ ಕಾರಣವಾಗುತ್ತದೆ. ಎಲ್ಲಾ ಜನಪದ ಮಹಾಕಾವ್ಯಗಳಲ್ಲಿ ಅತ್ಯಂತ ಮಹತ್ವಪೂರ್ಣವಾದ ಪ್ರಸಂಗ ಇದಾಗಿದೆ ಎನ್ನಬಹುದು.

ಇನ್ನುಳಿದ ಪಾತ್ರಗಳ ದುಷ್ಟ ಶಿಕ್ಷೆಯನ್ನು ದೀರ್ಘವಾಗಿ ಪ್ರಸ್ತಾಪ ಮಾಡುವುದಿಲ್ಲ. ಏಕೆಂದರೆ ಒಕ್ಕಲುಗಳ ಸಂದರ್ಭದಲ್ಲಿ ಅವುಗಳನ್ನು ಚರ್ಚಿಸಿದ್ದೇನೆ. ಹಾಗಾಗಿ ಸ್ವಲ್ಪ ಮಟ್ಟಿಗೆ ವಿಷಯ ಪ್ರಸ್ತಾಪ ಮಾಡಲಾಗಿದೆ. ಮಲೆಮಾದೇಶ್ವರ ಕಾವ್ಯದಲ್ಲಿನ ಡೊಳ್ಳೊಟ್ಟೆ ಜುಂಜಪ್ಪ ಮಾದಪ್ಪನಿಗೆ ಗುಡಿಕಟ್ಟಿಸಲು ಹಿಂಜರಿದ್ದಾಗ ಮಾದಪ್ಪ ಬಸವಣ್ಣನಿಗೆ ಹಾಲು ತುಂಬಿಸಿ ಶಿಕ್ಷೆ ನೀಡುತ್ತಾನೆ. ಮಾದಪ್ಪನ ಪವಾಡಕ್ಕೆ ಹೆದರಿ ಡೊಳ್ಳೊಟ್ಟೆ ಜುಂಜಪ್ಪ ಶಿಷ್ಯನೆನಿಸಿಕೊಳ್ಳುತ್ತಾನೆ. ಮಂಟೇಸ್ವಾಮಿ ಕಾವ್ಯದಲ್ಲಿನ ಮಂಟೇಸ್ವಾಮಿಗಳು ರಾಚಪ್ಪಾಜಿಯ ಮೂಲಕ ಮೋಡಿಕಾರಿಗೆ ಜೋಳಿಗೆ ಎತ್ತುವ ಮೋಡಿಯನ್ನು ನೀಡಿ, ಅದರಲ್ಲಿ ಜೋಳಿಗೆಯನ್ನು ಎತ್ತಲಾಗದೇ ಸೋತು ಶರಣಾಗಿ ಶಿಷ್ಟರೆನಿಸಿಕೊಳ್ಳುತ್ತಾರೆ. ಮಲೆಮಾದೇಶ್ವರ ಕಾವ್ಯದಲ್ಲಿನ ಬೊಪ್ಪೇಗೌಡನ ಮಂಟೇಸ್ವಾಮಿಗೆ ಮಲಗುವುದಕ್ಕೆ ಕುರಿಕೊಟ್ಟಿಗೆಯನ್ನು ನೀಡಿದ್ದು, ಅದರಲ್ಲಿದ ಕುರಿಗಳನ್ನೆಲ್ಲಾ ಮಂಟೇಸ್ವಾಮಿ ಮಾಯ ಮಾಡಿದ್ದರಿಂದ ಬೊಪ್ಪೇಗೌಡನು ಮಂಟೇಸ್ವಾಮಿಗೆ ಶರಣಾಗಿ ಬೊಪ್ಪೇಗೌಡನ ಮನೆಯನ್ನು ಮಠದ ಮನೆಯನ್ನಾಗಿ ಮಾಡಿ ಬಿಟ್ಟುಹೋಗುತ್ತಾನೆ. ಮಲೆಮಾದೇಶ್ವರ ಕಾವ್ಯದಲ್ಲಿನ ನೀಲಯ್ಯ ಸಂಕಮ್ಮಳ ಮೇಲಿನ ಅನುಮಾನದಿಂದ ಅವಳನ್ನ ಚಿತ್ರಹಿಂಸೆಗಳಿಗೆ ಒಳಪಡಿಸಿದ್ದು, ಮಾದಪ್ಪನಿಂದ ಸಂಕಮ್ಮ ಸಕಲ ಸಂಪತ್ತನ್ನು ಪಡೆದು, ಮಕ್ಕಳಿಬ್ಬರನ್ನು ಪಡೆಯುವುದರೊಂದಿಗೆ ನೀಲಯ್ಯನಲ್ಲಿ ಮತ್ತಷ್ಟು ಅನುಮಾನಗಳು ಅಧಿಕವಾಗಲು ಕಾರಣವಾಗುತ್ತವೆ. ಇವರಿಬ್ಬರ ನಡುವಿನ ದಾಂಪತ್ಯವನ್ನು ಸರಿದೂಗಿಸಬೇಕೆಂದು ಮಾದಪ್ಪ ಸಂಕಮ್ಮಳಿಗೆ ಹಲವು ಪರೀಕ್ಷೆಗಳನ್ನು ನೀಡಿದ್ದು, ಅವುಗಳಲ್ಲಿ ಸಂಕಮ್ಮಳನ್ನು ಜಯಶೀಲೆಯನ್ನಾಗಿ ಮಾಡಿದ್ದರಿಂದ ನೀಲಯ್ಯನ ದುಷ್ಟತನದ ಭಾವನೆಗಳು ಪರಿವರ್ತನೆಯಾಗುತ್ತವೆ. ರಾಮವ್ವ ತನ್ನ ಗಂಡನಾದ ಸರಗೂರಪ್ಪನನ್ನು ಮಾದಪ್ಪನ ಅಚ್ಚೆಳ್ಳಿನ ಮಜ್ಜನಕ್ಕೆ ಒಕ್ಕಲನ್ನಾಗಿ ಕಳುಹಿಸಲು ಹಿಂಜರಿದಾಗ, ಅವರಿಬ್ಬರಿಗೆ ಸಂತೆಯಲ್ಲಿ ಸೊಪ್ಪನ್ನು ಮಾರಾಟ ಮಾಡದಂತೆ, ಬಡತನ ಪ್ರಾಪ್ತಿಯಾಗುವಂತೆ ಮಾಡಿದಾಗ ರಾಮವ್ವ ಸರಗೂರಪ್ಪನನ್ನು ಒಕ್ಕಲನ್ನಾಗಿ ಕಳುಹಿಸಲು ಸಿದ್ಧಳಾಗಿ ಶಿಷ್ಟರೆನಿಸಿಕೊಳ್ಳುತ್ತಾಳೆ.

ಮೈಲಾರಲಿಂಗನ ಕಾವ್ಯದಲ್ಲಿನ ಕೋಮಾಲೆಯ ಪಾತ್ರ ಅತ್ಯಂತ ವಿಶಿಷ್ಟತೆಯಿಂದ ಕೂಡಿದೆ. ಮೈಲಾರನು ಕೋಮಾಲೆಯನ್ನು ಪಡೆಯುವಲ್ಲಿ ಕುರಿಗಳನ್ನು ಮಾಯ ಮಾಡುವ ಮೂಲಕ ಕೋಮಾಲೆಯನ್ನು ಅವಳ ಅಣ್ಣಂದಿರಾದ ಕುರುಬರನ್ನು ತನ್ನನ್ನು ಒಪ್ಪುವ ಹಾಗೆ ಮಾಡುತ್ತಾನೆ. ಇದರಿಂದ ಕೋಮಾಲೆಯನ್ನು ಮಲ್ಲಯ್ಯನಿಗೆ ಕೊಡಲು ಸಿದ್ಧರಾದಾಗ ಕುರಿಗಳು ಮತ್ತೆ ಬದುಕಿ ಬರುತ್ತವೆ. ಈ ಎಲ್ಲಾ ಪ್ರಸಂಗಗಳಲ್ಲಿ ಸಾಮ್ಯತೆಗಳಿಲ್ಲದ ಕಾರಣ ಒಂದಕ್ಕೊಂದು ಪೂರಕವಾಗಿಲ್ಲ. ಆದರೆ ಅವರಲ್ಲಿನ ದುಷ್ಟ ಬುದ್ದಿಗಳನ್ನು ಹೋಗಲಾಡಿಸಿ ಶಿಷ್ಟತೆಯನ್ನು ಮೂಡಿಸಿ, ಶಿಷ್ಟರನ್ನು ಸಂರಕ್ಷಿಸುವ ಧೋರಣೆಗಳು ಮುಖ್ಯವಾಗಿವೆ. ಇವನ್ಯಾರು ಕೂಡ ನಾಯಕರಿಂದ ಕ್ರೂರವಾದ ಶಿಕ್ಷೆಗಳನ್ನು ಅನುಭವಿಸದೇ ನಾಯಕರ ಶಕ್ತಿ ಸಾಮಾರ್ಥಗಳನ್ನು ಅರ್ಥಮಾಡಿಕೊಂಡು ಭಕ್ತರಾಗಿ ಮುಂದುವರೆಯುತ್ತಾರೆ. ಇವರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಶಿಷ್ಟರೇ ಆಗಿರುವುದು ಈ ಪ್ರಸಂಗಗಳಲ್ಲಿ ಕಂಡು ಬಂದಿದ್ದು, ಅವರು ಬಹುಬೇಗ ನಾಯಕರಿಗೆ ಶರಣಾಗಿ ತಮ್ಮ ತಪ್ಪುಗಳನ್ನು ತಿದ್ದಿಕೊಳ್ಳುತ್ತಾರೆ. ಸಂಕಮ್ಮ, ಸಾಕಮ್ಮ, ಸಿನ್ನಮ್ಮ ಮೊದಲಾದವರು ಪತಿವ್ರತೆಯರು ಆಗಿರುವುದರಿಂದ ಪಾತಿವ್ರತ್ಯವನ್ನು ಸಾಬೀತು ಮಾಡುವಾಗ ಮಾತ್ರ ಸತ್ವ ಪರೀಕ್ಷೆಗಳಿಗೆ ಒಳಗಾಗಿ ನಂತರ ಜಯಸಾಧಿಸುವುದರೊಂದಿಗೆ ಶಿಷ್ಟತೆಯನ್ನು ಹೊಂದಿರುವ ಮಹಾಮಾತೆಯರು ಎನಿಸಿಕೊಂಡಿದ್ದಾರೆ. ಈ ಕನ್ನಡ ಜನಪದ ಮಹಾಕಾವ್ಯಗಳಲ್ಲಿ ದುಷ್ಟರನ್ನು ಶಿಕ್ಷಿಸಬೇಕು ಶಿಷ್ಟರನ್ನು ಕಾಪಾಡಬೇಕು ಎಂಬ ಧೋರಣೆ ಅತ್ಯಂತ ಮುಖ್ಯವೆನಿಸಿದೆ. ದುಷ್ಟತೆಗೆ ಶಿಕ್ಷೆ ಶಿಷ್ಟತೆಗೆ ರಕ್ಷೆ

ಎಂಬುದು ಮನುಷ್ಯ ಕುಲದ ಧರ್ಮವೂ ಆಗಿದೆ. ನಮ್ಮ ದೇಶದ ಭಗವದ್ಗೀತೆಯಲ್ಲಿ ಈ ಧೋರಣೆಗೆ ಮಾನ್ಯತೆಯಿದೆ. ಸಮಾಜದಲ್ಲಿ ಶಿಷ್ಟತೆಯನ್ನು ಉಳಿಸಬೇಕಾದರೆ ದುಷ್ಟರನ್ನು ಸದೆಬಡಿಯಲೇಬೇಕೆಂಬ ದೃಢನಿರ್ಧಾರವನ್ನು ಕನ್ನಡ ಜನಪದ ಮಹಾಕಾವ್ಯಗಳಲ್ಲಿ ಕಾಣಬಹುದಾಗಿದೆ.

**ಆಕರ ಗ್ರಂಥಗಳು**


- ಭಟ್ಟ ಜಿ.ಎಸ್. (1996). ಮಹಾಕಾವ್ಯ ಒಂದು ಅವಲೋಕನ. ಚೇತನ ಬುಕ್ ಹೌಸ್.
- ಬೋರಲಿಂಗಯ್ಯ ಹಿ.ಚಿ. (ಸಂ.) (1997). *ಮಂಟೆಸ್ವಾಮಿ–ಬುಡಕಟ್ಟು ಕಾವ್ಯಮಾಲೆ.* ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ.
- ಚೆಲುವರಾಜು. (1997). ಜುಂಜಪ್ಪ ಬುಡಕಟ್ಟು ಕಾವ್ಯಮಾಲೆ. ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ.
- ಕೇಶವನ್ ಪ್ರಸಾದ್ ಕೆ. (1997). *ಮಲೆಮಾದೇಶ್ವರ–ಬುಡಕಟ್ಟು ಕಾವ್ಯಮಾಲೆ.* ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ.
- ಒಗ್ಗರು ಹನುಮಂತಪ್ಪ. (ಸಂ.) (1999). *ಮೈಲಾರಲಿಂಗನ ಕಾವ್ಯ.* ಕರ್ನಾಟಕ ಜನಪದ ಕಾವ್ಯಮಾಲೆ.
- ಪರಮಶಿವಯ್ಯ ಜೀ.ಶಂ. (1979). *ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು.* ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 48-56
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಕಲ್ಯಾಣ ಚಾಲುಕ್ಯರ ಕಾಲದ ಶಾಸನೋಕ್ತ ತೂಕ ಮತ್ತು ಅಳತೆ ಮಾಪನಗಳು

**ಡಾ. ಮಂಜುನಾಥ ಕೆ. ಆರ್**

ಕನ್ನಡ ಭಾಷಾ ಅಧ್ಯಾಪಕರು, ಎಸ್. ಬಿ. ಸಿ. ಪ್ರಥಮ ದರ್ಜೆ ಮಹಿಳಾ ಕಾಲೇಜು, ದಾವಣಗೆರೆ.

***Abstract:***

*ಕಲ್ಯಾಣ ಚಾಲುಕ್ಯರು ಕ್ರಿ.ಶ. 973 ರಲ್ಲಿ ಪ್ರಾಬಲ್ಯಕ್ಕೆ ಬಂದು ಸುಮಾರು ಎರಡು ಶತಮಾನಗಳಿಗಿಂತ ಹೆಚ್ಚು ಕಾಲ ಸಾರ್ವಭೌಮಾಧಿಕಾರವನ್ನು ಅನುಭವಿಸಿ ದಕ್ಷಿಣ ಭಾರತದ ಕೆಲವು ಸಣ್ಣಪುಟ್ಟ ಮನೆತನಗಳು ತಮಗೆ ತಲೆಬಾಗುವಂತೆ ಮಾಡಿ ಸುವ್ಯವಸ್ಥಿತವಾಗಿ ಆಡಳಿತವನ್ನು ಮಾಡುವ ಮೂಲಕ ಉತ್ತಮವಾದ ಸಾಮ್ರಾಜ್ಯವನ್ನು ನಿರ್ಮಿಸಲು ಶ್ರಮಿಸಿದ ಪ್ರಮುಖ ರಾಜಮನೆತನವಾಗಿದೆ. ಪ್ರಸ್ತುತ ಲೇಖನದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಶಾಸನೋಕ್ತ ತೂಕ ಮತ್ತು ಅಳತೆ ಮಾಪನಗಳ ಮೇಲೆ ಬೆಳಕು ಚೆಲ್ಲಲಾಗಿದೆ.*

***Keywords:*** *ಕನ್ನಡ ಸಾಹಿತ್ಯ, ಕರ್ನಾಟಕ ಇತಿಹಾಸ, ಕಲ್ಯಾಣ ಚಾಲುಕ್ಯರು, ಶಾಸನಗಳು, ತೂಕ ಮತ್ತು ಅಳತೆ ಮಾಪನಗಳು.*

## ಪೀಠಿಕೆ

ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯವು ಪೂರ್ವದಲ್ಲಿ ಆಂಧ್ರಪ್ರದೇಶದ ವಿಶಾಖಪಟ್ಟಣವನ್ನೊಳಗೊಂಡಂತೆ ಗುಂಟೂರು ಜಿಲ್ಲೆಯವರೆಗೆ, ಪಶ್ಚಿಮದಲ್ಲಿ ಅರಬ್ಬಿಸಮುದ್ರದವರೆಗೆ, ದಕ್ಷಿಣದಲ್ಲಿ ಕಾವೇರಿ ನದಿಯ ದಡದಿಂದ, ಉತ್ತರದಲ್ಲಿ ನರ್ಮದಾ ನದಿಯವರೆಗೆ ವಿಸ್ತರಿಸಿಕೊಂಡಿತ್ತು. ಕ್ರಿ.ಶ. 973ರ ವೇಳೆಗೆ ರಾಷ್ಟ್ರಕೂಟರ ಸಾಮಂತನಾಗಿದ್ದ ಎರಡನೆಯ ತೈಲಪನು ಅವರನ್ನು ಸದೆಬಡಿದು ಕಲ್ಯಾಣ ಚಾಲುಕ್ಯ ಸಾಮ್ರಾಜ್ಯವನ್ನು ಸ್ಥಾಪಿಸುತ್ತಾನೆ. ಈ ರಾಜವಂಶದಲ್ಲಿ ಎರಡನೆಯ ತೈಲಪ, ಸತ್ಯಾಶ್ರಯ ಇರಿವೆಬೆಡಂಗ, ಐದನೆಯ ವಿಕ್ರಮಾದಿತ್ಯ, ಅಯ್ಯಣದೇವ, ಎರಡನೆಯ ಜಯಸಿಂಹ, ಒಂದನೆಯ ಸೋಮೇಶ್ವರ, ಎರಡನೆಯ ಸೋಮೇಶ್ವರ, ಆರನೆಯ ವಿಕ್ರಮಾದಿತ್ಯ, ಮೂರನೆಯ ಸೋಮೇಶ್ವರ, ಎರಡನೆಯ ಜಗದೇಕಮಲ್ಲ, ಮೂರನೆಯ ತೈಲಪ, ಮೂರನೆಯ ಜಗದೇಕಮಲ್ಲ, ನಾಲ್ಕನೆಯ ಸೋಮೇಶ್ವರ ಇವರು ಪ್ರಮುಖ ದೊರೆಗಳಾಗಿ ಚಾಲುಕ್ಯ ಸಾಮ್ರಾಜ್ಯವನ್ನು ಕ್ರಿ.ಶ. 973 ರಿಂದ 1200 ರವರೆ ಆಳ್ವಿಕೆ ಮಾಡುತ್ತಾರೆ.

ಕಲ್ಯಾಣ ಚಾಲುಕ್ಯರ ಆಡಳಿತ ವ್ಯವಸ್ಥೆಯಲ್ಲಿ ತೂಕ ಮತ್ತು ಅಳತೆ ಮಾಪನಗಳ ಪಾತ್ರ ಅತ್ಯಂತ ಪ್ರಮುಖವಾಗಿರುತ್ತದೆ. ಇವೆರಡು ವ್ಯಾಪಾರ ಸಾಮಾಗ್ರಿಗಳಾಗಿ ಕಂಡುಬರುತ್ತವೆ. ನಾಣ್ಯಗಳು ಕೊಡುಕೊಳ್ಳುವ ವಿನಿಮಯದ ವಸ್ತುಗಳಾದರೆ, ಪದಾರ್ಥಗಳನ್ನು ಅಳೆದು ತೂಗಿ ಕೊಡುವ ಪದ್ಧತಿಯನ್ನೇ 'ತೂಕ ಮತ್ತು ಅಳತೆ' ಎಂದು ಕರೆಯಲಾಗುತ್ತದೆ. ಕಲ್ಯಾಣ ಚಾಲುಕ್ಯರ ಕಾಲಾವಧಿಯಲ್ಲಿ ದವಸ ಧಾನ್ಯಗಳನ್ನು ತೂಕ ಮಾಡುವ ಮತ್ತು ಅಳತೆ ಮಾಡುವ ಪದ್ಧತಿ ಪ್ರಚಲಿತದಲ್ಲಿತ್ತು. ವಚನಗಳಲ್ಲಿ ತೂಗುವ ತಕ್ಕಡಿಗಳ ಉಲ್ಲೇಖವು ಬಂದಿದ್ದು, ಅವುಗಳನ್ನು 'ತ್ರಾಸ'

***Please cite this article as:*** ಮಂಜುನಾಥ ಕೆ. ಆರ್. (2024). ಕಲ್ಯಾಣ ಚಾಲುಕ್ಯರ ಕಾಲದ ಶಾಸನೋಕ್ತ ತೂಕ ಮತ್ತು ಅಳತೆ ಮಾಪನಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವಲಪ್‌ಮೆಂಟ್,* 3(3), 48–56

ಎಂದಿವೆ.[1] ಬಣಜಿಗರು ತೂಗಲು ಬೆನಕವನ್ನು ಉಪಯೋಗಿಸುತ್ತಿದ್ದುದರ ಉಲ್ಲೇಖ ಬಸವಣ್ಣನವರ ವಚನಗಳಲ್ಲಿ ಕಂಡುಬರುತ್ತದೆ. ತೂಕದ ಸರಕುಗಳನ್ನು ಕುರಿತು[2] 'ಅಳವ ತೂಗವಯ್ನಂಬರಂಗಳಲುಂ ಎಣಿಸುವ ದವಸಂ' ಎಂದು ಹೇಳಿ ಮತ್ತು "ಭಣ್ಡವಂ ತೂಗಿಸಿ ಕೊಂಡಲ್ಲಿ" ಎನ್ನುವ ಹೇಳಿಕೆಗಳು ತೂಕದ ಸರಕುಗಳನ್ನು ಕುರಿತು ಸೂಚಿಸುತ್ತವೆ. ಸರಕುಗಳನ್ನು ತೂಗಲು[3] ಬಾರ, ಮಳವೆ, ಪಲ, ಬಿಸಿಗೆ, ಕೊಡಿಗೆ, ಬೆಲ್ಲಳಿಗೆ ಇನ್ನು ಮುಂತಾದ ತೂಕ ವಿಶೇಷಣ ವಸ್ತುಗಳನ್ನು ಬಳಸುತ್ತಿದ್ದರು.

ತೂಕದ ಮಾಪನಗಳನ್ನು ಕುರಿತು ರಾಜಾದಿತ್ಯನು ಈ ರೀತಿಯಾಗಿ ತಿಳಿಸಿದ್ದಾನೆ.

4 ಸುವರ್ಣ = 1 ಕರ್ಷ

4 ಕರ್ಷ = 1 ಪಲ

20 ಪಲ = 1 ಬಿಸಿಗೆ

5 ಬಿಸಿಗೆ = 1 ತೊಲಿ

20 ತೊಲಿ = 1 ಭಾರ

ಎಂದು ರಾಜಾದಿತ್ಯನು ತನ್ನ ಈ ಕೃತಿಯಲ್ಲಿ ಉಲ್ಲೇಖಿಸಿದ್ದಾನೆ.[4]

ತೂಕದ ವಿಷಯವನ್ನು ಕುರಿತು ಹೆಚ್ಚಾಗಿ ಶಾಸನಗಳು ಕಂಡುಬರುವುದಿಲ್ಲ. ಕೊಳಗ ಎನ್ನುವುದೇ ಅಳತೆ ಮಾನಗಳಲ್ಲಿ ಸಿಗುವ ಒಂದು ಮಾಪನವಾಗುತ್ತದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕಂಡುಬರುವ ಒಂದು ಶಾಸನವು[5] ಜುಕ್ಕಿಕೊಳಗ, ಧರ್ಮಕೊಳಗ, ದನಗೊಳಗ ಎಂಬುದರ ತಿಳಿಸುತ್ತದೆ. ಈ ಊರಿನ ಪ್ರತಿಯೊಬ್ಬರು ಕೂಡ ಪೂಜಾರಿಗೆ, ದೋಣಿ ನಡೆಸುವವರಿಗೆ, ವರ್ಷಕ್ಕೆ ಇಂತಿಷ್ಟು ಎಂದು ರಾಗಿ, ಭತ್ತ ಮುಂತಾದ ದವಸ-ಧಾನ್ಯಗಳನ್ನು ನೀಡಬೇಕೆಂದು ನಿಗದಿಪಡಿಸಲಾಗಿತ್ತು. ಇದನ್ನು ದೇವಗೊಳಗ (ದೇವಕೋಳಗ)[6] ಎಂದು ಕರೆಯುತ್ತಾರೆ. ಚಾಲುಕ್ಯ ದೊರೆ ಆರನೆಯ ವಿಕ್ರಮಾದಿತ್ಯನ ಶಾಸನವೊಂದರಲ್ಲಿ[7] ಇವನ ದಂಡನಾಯಕ ಚಟ್ಟಪ್ಪಯ್ಯ ಎಂಬುವವನ ಹೆಸರನ್ನು ಉಲ್ಲೇಖಿಸುತ್ತಾ, ಸೌಟು, ಕೊಳಗ, ಸೊಲ್ಲಗೆ ಇನ್ನು ಮುಂತಾದ ಧಾನ್ಯದ ಅಳತೆಯ ಮಾಪನಗಳನ್ನು ಉಲ್ಲೇಖಿಸುತ್ತದೆ. ಶಾಸನದಲ್ಲಿ ಧಾನ್ಯಗಳಿಗೆ ಸಂಬಂಧಿಸಿದ ಅಳತೆ/ತೂಕದ ಮಾಪನವನ್ನು ತಿಳಿಯಬಹುದು. ಈ ರೀತಿಯಾಗಿ ಧಾನ್ಯ ಮತ್ತು ಎಣ್ಣೆ ಪದಾರ್ಥಗಳನ್ನು ಇವುಗಳಲ್ಲಿ ತುಂಬಿ ಅಳತೆ ಮಾಡುತ್ತಿದ್ದರು. ಅಕ್ಕಿ, ಭತ್ತ, ಮೆಣಸು, ಎಳ್ಳು, ಎಣ್ಣೆ ಮೊದಲಾವುಗಳನ್ನು ಅಳೆಯಲು ಬಳ್ಳ, ಮಾನ, ಸೊಲ್ಲಗೆ, ಅರ್ಧಸೊಲ್ಲಗೆ, ಸಟ್ಟುಗ, ಸೊಳಸ, ದಳ, ಹಾಸೆ, ಪಳಗೆ, ಖಂಡುಗ ಹೀಗೆ ಇನ್ನು ಮುಂತಾದವುಗಳನ್ನು ಅಳತೆ ಮಾಡಲು ಬಳಸುತ್ತಿದ್ದರು. ಇವುಗಳಲ್ಲಿ ಕೊಳಗವೇ ಅತ್ಯಂತ ದೊಡ್ಡ ಮಾಪನವಾಗಿತ್ತು. ಹಾನೆ/ದಳ ಎಂಬುದು ಅತಿ ಸಣ್ಣವಾದ ತೂಕದ ಮಾಪನವಾಗಿತ್ತು.

ಕ್ರಿ.ಶ. 1079ರ ಬಾಗಳಿ ಶಾಸನದಲ್ಲಿ[8]ದಾನ ಬಿಡುವಾಗ ತೂಗುವ ಮತ್ತು ಅಳೆಯುವುದನ್ನು ಕುರಿತು 'ಹಾರಿಕಾಯವಳದ ತೂಗುವ ಭಂಡಕ್ಕೆ ಹೊಂಗೆ ಹಾಗೆ-1, ಗಾಣವಾರಿ ಗಾಣಂಪ್ರತಿಮಾನ-1, ಉಪ್ಪುಕೊಳಗ-5' ಎಂದು ಉಲ್ಲೇಖಿಸುತ್ತದೆ.ರಾಜಾದಿತ್ಯನು ಶಾಸನಗಳಲ್ಲಿ ಕಂಡುಬರುವಂತಹ ಅಳತೆಯ ಮಾಪನಗಳನ್ನು ಕುರಿತು ತನ್ನ ಕೃತಿಯೊಂದರಲ್ಲಿ[9]ಈ ರೀತಿಯಾಗಿ ತಿಳಿಸಿದ್ದಾರೆ.

4 ಗಿದ್ದ = 1 ಸೊಲ್ಲಿಗೆ

4 ಸೊಲ್ಲಿಗೆ = 1 ಮಾನ

4 ಮಾನ = 1 ಬಳ್ಳ

4 ಬಳ್ಳ = 1 ಕೊಳಗ

20 ಕೊಳಗ = 1 ಖಂಡುಗ

ಹೀಗೆ ಅಳತೆ ಮಾಪನಗಳ ಬಗ್ಗೆ ತಿಳಿಯಲಾಗುತ್ತದೆ. ಬಟ್ಟೆ, ಹಣ್ಣು, ಕಬ್ಬು, ಅಡಿಕೆ ಇನ್ನು ಮೊದಲಾದ ಪದಾರ್ಥಗಳನ್ನು ಎಣಿಕೆ/ಏಣಿಸಿ ಕೊಡಲಾಗುತ್ತಿತ್ತು. ಬಳ್ಳಾರಿ ಜಿಲ್ಲೆಯ ಕುರುಗೋಡು ಶಾಸನದಲ್ಲಿ[10] ಬಳಕೆಯಾಗಿರುವ 'ಎಣಿಸುವ ದವಸಂ' ಎಂಬ ಪದಗಳು ಇವುಗಳನ್ನೆ ಕುರಿತು ಹೇಳುತ್ತವೆ.

ಅಂದರೆ ದವಸ ಧಾನ್ಯಗಳನ್ನು ಏಣಿಸಲಾಗುತ್ತಿತ್ತು ಎಂದು ತಿಳಿಸುತ್ತದೆ. ಎಲೆ, ಹುಲ್ಲು, ಕಾಯಿಪಲ್ಯ ಇನ್ನು ಮುಂತಾದವುಗಳನ್ನು ಸೂಡುಗಳಾಗಿ ಇಲ್ಲವೆ ಹೇರು(ಹೊರೆ)ಗಳಾಗಿ ಮಾಡಿ ಮಾರಾಟ ಮಾಡುತ್ತಿದ್ದರು.

ಕ್ರಿ.ಶ. 1078ರ ಮಹಾರಾಷ್ಟ್ರದ ನಾಂದೇಡ್ ಜಿಲ್ಲೆಯ ಊರಿಗೆಯ ಶಾಸನವು[11] ಚಾಲುಕ್ಯ ದೊರೆ ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದ್ದು, ಅವನ ದಂಡನಾಯಕನಾದ ಚಟ್ಟಪ್ಪಯ್ಯನ ಆಡಳಿತವನ್ನು ತಿಳಿಸುತ್ತಾ ಧಾನ್ಯಗಳನ್ನು/ಪದಾರ್ಥಗಳನ್ನು ಅಳೆಯುವ ಮಾಪನಗಳಾದ ಸೌಟು, ಕೊಳಗ, ಸೊಲ್ಲಗ ಎಂಬ ಅಳತೆ ಮಾಪನಗಳ ಹೆಸರುಗಳು ಕಂಡುಬರುತ್ತವೆ. ಇವುಗಳಲ್ಲಿ ಧಾನ್ಯಗಳನ್ನು, ಎಣ್ಣೆ, ತುಪ್ಪ, ಇನ್ನು ಮುಂತಾದ ಪದಾರ್ಥಗಳನ್ನು ಅಳೆಯಲು ಈ ಸಾಧನಗಳನ್ನು ಬಳಸುತ್ತಿದ್ದರು. ಕ್ರಿ.ಶ. 1162ರ ಮಹಾರಾಷ್ಟ್ರದ ವಂಗಿ ಶಾಸನವು[12] ಕಲ್ಯಾಣ ಚಾಲುಕ್ಯರ ಸಾಮಂತಾಧಿಕಾರಿಗಳಾದ ಕಲಚೂರಿ ವಂಶಕ್ಕೆ ಸೇರಿದ್ದು, ದೊರೆ ಬಿಜ್ಜಳನ ಆಡಳಿತವನ್ನು ಉಲ್ಲೇಖಿಸುತ್ತದೆ. ಅಳತೆ ಮಾಪನಗಳ ಬಗ್ಗೆ ತಿಳಿದುಕೊಳ್ಳಲು ಈ ಶಾಸನವು ಉತ್ತಮವಾದ ಆಕರವಾಗಿದೆ. ಈ ಶಾಸನದಲ್ಲಿ ಅಳತೆ ಮಾಪನಗಳಾದ ಸೊಲ್ಲಗೆ, ಅರ್ಧಸೊಲ್ಲಗೆ, ಹೇರು(ಕಟ್ಟು) ಹೆಡಗೆ (ಕಾಳುಗಡಿ, ಕಾಯಿಪಲ್ಲೆ, ಇತರೆ ಪದಾರ್ಥಗಳನ್ನು ಒಯ್ಯುವ ನಿರ್ದಿಷ್ಟ ಪ್ರಮಾಣದ ಬುಟ್ಟಿ) ಹೀಗೆ ಇತರೆ ಅಳತೆ ಮಾಪನಗಳು ಇಲ್ಲಿ ಕಂಡುಬರುತ್ತವೆ.

**ಭೂಮಾಪನ (ಉದ್ದಳತೆ)**

ಕಲ್ಯಾಣ ಚಾಲುಕ್ಯರು ಮತ್ತು ಅವರ ಮಾಂಡಳಿಕರ ಅರ್ಥವ್ಯವಸ್ಥೆಯಲ್ಲಿ ಭೂಮಾಪನದ ಪಾತ್ರವು ಅತ್ಯಂತ ಪ್ರಮುಖವಾಗಿದೆ. ಒಂದು ರಾಜ್ಯದ ಆಡಳಿತ ವ್ಯವಸ್ಥೆಯಲ್ಲಿ ರಾಜನ ಬೊಕ್ಕಸಕ್ಕೆ ಬರುತ್ತಿದ್ದ ಬಹುಪಾಲು ತೆರಿಗೆಯು ಭೂ ಉತ್ಪಾದನೆಯಿಂದಲೆ ಬರುತ್ತಿತ್ತು. ಪ್ರಾಚೀನ ಕಾಲದಿಂದಲೂ ಭೂತೆರಿಗೆಗಳನ್ನು ವಿಧಿಸಬೇಕಾದರೆ ಭೂಮಿಯ ಫಲವತ್ತತೆ, ವಿಸ್ತಾರ ಇನ್ನು ಮುಂತಾದವುಗಳನ್ನು ಪರಿಗಣಿಸುವುದರ ಮೂಲಕ ಭೂಆದಾಯವನ್ನು ಸಂಗ್ರಹಣೆ ಮಾಡುತ್ತಿರುವುದು ಕಂಡುಬರುತ್ತದೆ. ಇದನ್ನು ಗಮನಿಸಿದರೆ ಪ್ರಾಚೀನ ಕಾಲದಿಂದಲೂ ಭೂಮಿಯನ್ನು ಅಳತೆ ಗೋಲುಗಳಿಂದಲೆ ಅಳೆಯುವುದರ ಮೂಲಕ ಭೂಮಿಯ ವಿಸ್ತಾರ/ಸೀಮೆಯನ್ನು ಗುರುತಿಸುವ ಪ್ರಕ್ರಿಯೆಯು ಅಸ್ತಿತ್ವದಲ್ಲಿತ್ತು.

ರಾಜಾದಿತ್ಯನು ಉದ್ದಳತೆಯನ್ನು ಕುರಿತು ತನ್ನ ಕೃತಿಯಲ್ಲಿ[13] ಈ ರೀತಿಯಾಗಿ ಉಲ್ಲೇಖಿಸಿದ್ದಾನೆ.

12 ಬೆರಳು = 1 ಗೇಣು
2 ಗೇಣು = 1 ಮೊಳ
2 ಮೊಳ = 1 ಹಸ್ತ
4 ಮೊಳ = 1 ದಂಡ
200 ದಂಡ = 1 ಕ್ರೋಶ
400 ಕ್ರೋಶ = 1 ಯೋಜನೆ

ಎಂದು ತಿಳಿಸಿದ್ದಾರೆ. ಉದ್ದಳತೆಯನ್ನು ಕುರಿತಂತೆ ವಚನಕಾರರಾದ ಬಸವಣ್ಣನವರು[14] ತಮ್ಮ ವಚನಗಳಲ್ಲಿ ಈ ರೀತಿಯಾಗಿ ಹೇಳಿದ್ದಾರೆ.

12 ಅಂಗುಲ = 1 ಗೇಣು
2 ಗೇಣು = 1 ಮೊಳ
2 ಮೊಳ = 1 ಹಸ್ತ
2 ಹಸ್ತ = 1 ಮಾರು
2 ಮಾರು = 1 ಜಂಪೆ
770 ಜಂಪೆ = 1 ಪದದಾಯಿ
2800 ಪದಚ್ಚಯ= 1 ತೂಗಳತೆ
4 ತೂಗಳತೆ = 1 ಹರದಾರಿ
4 ಹರದಾರಿ = 1 ಯೋಜನ

ಎಂದು ತಿಳಿಸಿದ್ದಾರೆ.

ಕ್ರಿ.ಶ. 1026ರ ಗದಗ ಜಿಲ್ಲೆಯ ಅಸುಂಡಿ ಗ್ರಾಮದ ಶಾಸನವು[15]ಉದ್ದಳತೆಯಲ್ಲಿ ಕಂಡುಬರುವ ಅಳತೆ ಮಾಪನವಾದ ಗೇಣಿನ ಉಲ್ಲೇಖವನ್ನು

ನೀಡುತ್ತದೆ. ಚಾಲುಕ್ಯ ರಾಜ ಎರಡನೇಯ ಜಯಸಿಂಹನ ಮಹಾಸಾಮಂತಾಧಿಪತಿಯಾದ ಸೌಚಯನಾಯಕನು ಭೋಗೇಶ್ವರದೇವರ ಅಂಗಭೋಗಕ್ಕಾಗಿ (ಅಭಿಷೇಕ, ಅರ್ಚನೆ, ಹೂವು, ಆಭರಣ) 28 ಗೇಣ ಗಳೆಯಲ್ಲಿ 6 ಮತ್ತರು ಭೂಮಿಯನ್ನು ದತ್ತಿ ಬಿಟ್ಟ ವಿವರಣೆಯನ್ನು ನೀಡುತ್ತದೆ. ಶಿಲ್ಪಿ ರತ್ನಾಕರ ಎಂಬುವವನು 'ಅಷ್ಟಸೂತ್ರ' ಎಂಬ ಕೃತಿಯಲ್ಲಿ[16] 8 ಅಳತೆ ಮಾನಗಳನ್ನು ಉಲ್ಲೇಖಿಸಿದ್ದು, ಅವುಗಳನ್ನು ಈ ರೀತಿಯಾಗಿ ತಿಳಿಸಿರುತ್ತಾರೆ.

ಅಳತೆ ಪಟ್ಟಿ
ಹಗ್ಗ
ಚಾರ್ದ (ಮುಂಜಿನ ದಾರ)
ಲಂಬಕ ತೂಗೂ ಗುಂಡು
ತ್ರಿಕೋಣಾಕೃತಿ
ಕೈವಾರ
ಮಟ್ಟಕೋಲು
ದೃಷ್ಠಿ ಆಲೋಕ

ಎಂದು ಹೇಳಿದ್ದಾರೆ. ಆದರೆ ಈ ಎಲ್ಲಾ ಅಳತೆ ಮಾಪನಗಳ ಬಗೆಗೆ ನಿಖರವಾದ ದಾಖಲೆಗಳು ದೊರೆತಿರುವುದಿಲ್ಲ. ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ[17] ಭೂಮಾಪನ ಸಾಧನಗಳನ್ನು ಕುರಿತು ಅಂಗುಲ ಹಸ್ತ, ಪ್ರಜಾಪತ್ಯ, ಧನುರ್ಗ್ರಹ, ಕಂಸ, ವ್ಯಾಮ, ಪೌರುಷ, ದಂಡ ರಜ್ಜುಪರಿದೇಶ, ನಿವರ್ತನ, ಧನು, ಗೋರುತ, ಯೋಜನ ಎಂದು ಭೂಮಾಪನ ಸಾಧನಗಳನ್ನು ಹೆಸರಿಸಿರುವುದು ಕಂಡುಬರುತ್ತದೆ.

**ಅಳತೆ ಕೋಲು**

ಕ್ರಿ.ಶ. 1138ರ ಬೀದರ್ ಜಿಲ್ಲೆಯ ಅಣಂದೂರು ಶಾಸನದಲ್ಲಿ[18] ನಿಗರಂ ಕೋಲು, ಕದಂಬ ಕೋಲು ಮತ್ತು ಕರಿದು ಕೋಲು ಎಂಬ ಮೂರು ಬಗೆಯ ವಿಭಿನ್ನ ಅಳತೆ ಕೋಲುಗಳ ಹೆಸರುಗಳು ಕಂಡುಬರುತ್ತವೆ. ಎರಡನೇ ಜಗದೇಕಮಲ್ಲನ ಆಡಳಿತದ ಅವಧಿಯಲ್ಲಿ ಗೋಪದೇವ ಎಂಬ ದಂಡಾಧೀಶನು ಊರಿನ ಉತ್ತರಕ್ಕೆ ಇರುವ ಗುರುಕುಂಟೆಯ ಸ್ಥಳದಲ್ಲಿ ಕಂಬಟಾಣದ ಗಡಿಂಬದಲ್ಲಿ [ಅಳತೆ ಕೋಲು] ನಿಗರಂ ಕೋಲಿನಲ್ಲಿ ನಾರಾಯಣದೇವರ ಪೂಜೆ ನೈವೇದ್ಯ ಮತ್ತು ಜೀರ್ಣೋದ್ಧಾರಕ್ಕಾಗಿ 2 ಮತ್ತರನ್ನು, ಊರಿನಲ್ಲಿರುವ ದೇವರಿಗೆ ನಿಗರಂಕೋಲಿನಲ್ಲಿ 3 ಮತ್ತರನ್ನು, ಬ್ರಾಹ್ಮಣ ವೃತ್ತಿಗಾಗಿ ಕರಿದು ಕೋಲಿನಲ್ಲಿ 6 ಮತ್ತರನ್ನು, ಮತ್ತು ಒಂದು ಮತ್ತರು ಗದ್ದೆಯನ್ನು ಹಾಗೂ ಕದಂಬ ಕೋಲಿನಲ್ಲಿ 20 ಮತ್ತರು ಭೂಮಿಯನ್ನು ಅಳೆದು ದಾನವಾಗಿ ನೀಡುತ್ತಾನೆ. ಹಾಗೆಯೇ ಬಿನ್ನಣಿಬಸವ ಎಂಬುವವನಿಗೆ ಕರಿದುಕೋಲಿನಲ್ಲಿ ಅಳೆದು 6 ಮತ್ತರು ಭೂಮಿಯನ್ನು ದಾನವಾಗಿ ನೀಡುತ್ತಾನೆಂದು ತಿಳಿದುಬರುತ್ತದೆ. ಹೀಗೆ ದಂಡನಾಯಕನು ದೇವರ ಸೇವೆಗಾಗಿ ಮತ್ತು ಬ್ರಾಹ್ಮಣರ ವೃತ್ತಿಗಾಗಿ ಈ ಅಳತೆ ಕೋಲುಗಳನ್ನು ಬಳಸಿ ಭೂಮಿಯ ಇಂತಿಷ್ಟು ಪ್ರಮಾಣವನ್ನು ದಾನವಾಗಿ ನೀಡಲಾಗಿದೆ. ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ರೂಗಿಯಲ್ಲಿ ದೊರೆತಿರುವ ಎರಡನೇ ಜಯಸಿಂಹನ ಶಾಸನವು[19] ಸಿಂಘನ ಗರುಡ ಎಂದು ಖ್ಯಾತಿಯನ್ನು ಪಡೆದ ಶ್ರೀಮಜ್ಜಗದೇಕ ಮಲ್ಲದೇವರ ಮಗ ಮಹಾ ಸಾಮಂತನಾದ ದಾಸರಸನ ಆಳ್ವಿಕೆಯ ಕಾಲದಲ್ಲಿ ದಸವರ್ಮನ ಕಾಲದಿಂದಲೂ ಬಳಕೆಯಲ್ಲಿರುವಂತಹ ತೆರೆ ಅಳತೆಯ ಹಿರಿಯಕೋಲಿನ ಉಲ್ಲೇಖವು ಬರುತ್ತದೆ. ಈ ಕೋಲಿನಿಂದ 150 ಮತ್ತರು ಭೂಮಿಯನ್ನು ಅಳೆದು ಪಂಡಿತರಿಗೆ ಈ ಸಾಮಂತನು ದಾನ ಬಿಡುತ್ತಾನೆ ಎಂದು ಈ ಶಾಸನದಿಂದ ತಿಳಿದುಬರುತ್ತದೆ.

ಕ್ರಿ.ಶ. 1028ರ ಗದಗ ಜಿಲ್ಲೆಯ ಹೊಸೂರು ಗ್ರಾಮದ ಶಾಸನದಲ್ಲಿ[20] ಮಲೆಪರಮಾರಿಯ ಕೋಲು ಎಂಬ ಅಳತೆಕೋಲಿನ ಹೆಸರು ಕಂಡುಬರುತ್ತದೆ. ಎರಡನೇ ಜಯಸಿಂಹನ ಕಾಲಾವಧಿಯಲ್ಲಿ ಆಯ್ಚಗಾವುಂಡನು ತನ್ನ ಪತ್ನಿಯಾದ ಕಂಚಿಕಬ್ಬೆ ಗಾವುಂಡಿಗೆ ಪರೋಕ್ಷ ವಿನಯವಾಗಿ ಬಸದಿಯನ್ನು

ಮಾಡಿಸಿ ಮಲೆಪರಮಾರಿಯ ಕೋಲು ಎಂಬ ಅಳತೆ ಕೋಲಿನಲ್ಲಿ ಅಳೆದು ನಾಲ್ಕು ಮತ್ತರು ಭೂಮಿಯನ್ನು ದಾನವಾಗಿ ನೀಡುತ್ತಾನೆ. ಗಾವುಂಡನೊಬ್ಬನು ತನ್ನ ಹೆಂಡತಿಗಾಗಿ ಭೂಮಿಯನ್ನು ಅಳತೆಕೋಲಿನಲ್ಲಿ ಅಳತೆಮಾಡಿ ದಾನ ನೀಡಿರುವುದು ಈ ಶಾಸನದ ವಿಶೇಷತೆಯಾಗಿದೆ. ಕ್ರಿ.ಶ. 981ರ ಕಂಚುಗಾರ ಬೆಳಗಲ್ಲು ಶಾಸನದಲ್ಲಿ[21]ಅಳತೆಕೋಲನ್ನು ಪಿರಿಯಕೋಲು ಎಂದು ಕರೆಯಲಾಗಿದೆ. ಚಾಲುಕ್ಯ ದೊರೆಯಾದ ತೈಲಪದೇವನ ಆಳ್ವಿಕೆಯಲ್ಲಿ ಅವನ ಸಾಮಂತನಾದ ವೀರನೊಳಂಬ ಪೆರ್ಮ್ಮಾಡಿದೇವನ ಹೆಂಡತಿಯಾದ ರೇವಲದೇವಿ ಎಂಬುವವಳು ವಿಷ್ಣುದೇವರಿಗೆ ಪಿರಿಯಕೋಲಿನಲ್ಲಿ ಭೂಮಿಯನ್ನು ಅಳೆದು 6 ಮತ್ತರು ಭೂದಾನ ನೀಡುತ್ತಾಳೆ ಎಂದು ಶಾಸನವು ತಿಳಿಸುತ್ತದೆ. ಹೀಗೆ ಈ ಶಾಸನವು ಅಳತೆ ಕೋಲನ್ನು ಕುರಿತು ಮಾಹಿತಿ ನೀಡುತ್ತದೆ.

ಕ್ರಿ.ಶ. 1140 ರ ಬಳ್ಳಾರಿ ಜಿಲ್ಲೆಯ ಕುಡಿತಿನಿ ಶಾಸನದಲ್ಲಿ[22] ನವಿಲು ಕೋಲು ಎಂಬ ಅಳತೆ ಮಾಪನದ ಹೆಸರು ಕಂಡುಬರುತ್ತದೆ. ಎರಡನೇಯ ಜಗದೇಕ ಮಲ್ಲದೇವನ ದಂಡನಾಯಕನಾದ ದುರ್ಗರಾಜನ ಮಗಳಾದ ಚಾವಣ ದೇವಿಯು ದುರ್ಗ್ಗೇಶ್ವರದೇವರಿಗೆ ನವಿಲು ಕೋಲಿನಲ್ಲಿ ಅಳೆದಂತಹ 476 ನವಿಲ ಮತ್ತರು ಭೂಮಿಯ ಪ್ರಮಾಣವನ್ನು ದಾನವಾಗಿ ನೀಡುತ್ತಾಳೆ. ಈ ದಾನವನ್ನು ಕುರಿತು 'ಚಾವಣದೇವಿ ದೇವರ್ಗ್ಗೆ ಬಿಟ್ಟ ಸ್ಥಳ.....ಮಯ್ಯನ ಕೆರೆಯಿ ಕೆಯಿಂ ನಾಯೂರು ಬೀವಮಣಿಯಗಾವುಂಡಗೆಯಿ ನವಿಲಮತ್ತರು ಕಮ್ಮ 476 ದಾನ ಭುಜೆ ಪಡುವ 60, ಬಡಗ 62, ಮೂ 40, ತೆಂ 30' ಎಂದು ಉಲ್ಲೇಖಿಸುತ್ತದೆ. ಅಂದರೆ ದಂಡನಾಯಕನ ಮಗಳಾದ ಚಾವಣದೇವಿಯು ಬೀವಮಣಿ ಎಂಬ ಗಾವುಂಡನಿಗೆ ನವಿಲಕೋಲಿನಲ್ಲಿ ಅಳೆದು ಭೂಮಿಯನ್ನು ದಾನವಾಗಿ ಬೀಡುತ್ತಾಳೆ. ದಾನ ಬಿಟ್ಟ ಭೂಮಿಯ ನಾಲ್ಕು ದಿಕ್ಕುಗಳ ಉಲ್ಲೇಖವು ಈ ಶಾಸನದಲ್ಲಿ ಕಂಡುಬರುತ್ತದೆ. ಕ್ರಿ.ಶ. 1147ರ ಬಾದಾಮಿ ತಾಲೂಕಿನ ತೆಗ್ಗಿ ಗ್ರಾಮದ ಶಾಸನವು[23] ಚಾಲುಕ್ಯ ರಾಜ ಎರಡನೆಯ ಜಗದೇಕಮಲ್ಲನ ಕಾಲದಲ್ಲಿ ಹುನಗುಂದ ಮೂವತ್ತರ ಸೀಮೆಯ ಆದಂಡಗೆ ಗ್ರಾಮವನ್ನು ಆಳುತ್ತಿದ್ದಂತಹ ಕಾಟಿಗಾವುಂಡ ಎಂಬುವವನನ್ನು ಹೆಸರನ್ನು ತಿಳಿಸುತ್ತಾ 'ಹಿರಿಯ ಕೋಲು' ಎಂಬ ಹೆಸರಿನ ಅಳತೆಕೋಲನ್ನು ಉಲ್ಲೇಖಿಸುತ್ತದೆ. ಈ ಅಳತೆಕೋಲಿನಿಂದ ಗಾವುಂಡನು ಭೂಮಿಯನ್ನು ಅಳೆದು ತಮ್ಮೂರಿನ ಕಲಿದೇವರಿಗೆ 3 ಮತ್ತರನ್ನು ದಾನವಾಗಿ ನೀಡುತ್ತಾನೆಂದು ತಿಳಿಸುತ್ತದೆ.

ಕ್ರಿ.ಶ. 1124ರಲ್ಲಿ ರಾಯಚೂರು ಜಿಲ್ಲೆಯ ಲಿಂಗಸೂಗೂರಿನಲ್ಲಿ ದೊರೆತಿರುವ ಶಾಸನವು[24] ಚಾಲುಕ್ಯ ದೊರೆ ತ್ರಿಭುವನಮಲ್ಲನ ಆಳ್ವಿಕೆಯ ಕಾಲದಲ್ಲಿ ಬನವಾಸಿಪುರವರೇಶ್ವರನಾದ ಕದಂಬಕುಲದ ಮಹಾಮಂಡಳೇಶ್ವರನಾದ ಮಾಧವತ್ತಿಯರಸ ಎಂಬುವವನ ಹೆಸರನ್ನು ತಿಳಿಸುತ್ತಾ, ಈ ಶಾಸನದಲ್ಲಿ ಮೂವತ್ತಾರು ಗೇಣ ಕೋಲಿನಲ್ಲಿ ಅಳೆದು ಎಂದು ಅಳತೆ ಕೋಲಿನ ಬಗ್ಗೆ ತಿಳಿಸುತ್ತಾ ಅಳತೆ ಕೋಲಿನಲ್ಲಿ ಮೂರು ಮತ್ತರು ಭೂಮಿಯನ್ನು ಅಳೆದು ದೇವರ ಧೂಪ ದೀಪ ನೈವೇದ್ಯಕ್ಕೆ ದಾನ ನೀಡುತ್ತಾನೆಂದು ಈ ಶಾಸನವು ಉಲ್ಲೇಖಿಸುತ್ತದೆ. ಶಾಸನದಿಂದ ತಿಳಿದು ಬರುವುದೇನೆಂದರೆ ದೇವರಿಗೆ ಭೂಮಿ ದಾನ ನೀಡುವಾಗಲೂ ಕೂಡ ಅಳತೆಗೋಲಿನಲ್ಲಿ ಅಳೆದು ದಾನ ನೀಡುತ್ತಿದ್ದರು ಎಂದು ತಿಳಿದುಬರುತ್ತದೆ. ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನಲ್ಲಿ ದೊರೆತಿರುವ ಶಾಸನವು[25] ಸಿಂಧರ ವಂಶದ ಗೋನರಸ ಎಂಬುವವನನ್ನು ಹೆಸರಿಸುತ್ತಾ ದಂಡನಾಯಕನಾದ ಮಾತ್ಯಾಂಡನ ಹೆಸರನ್ನು ಉಲ್ಲೇಖಿಸುತ್ತಾ, ಇಲ್ಲಿ ದೊರೆತಿರುವ ಶಾಸನದಲ್ಲಿ ನಾಲ್ವತ್ತುಗೇಣ ಘಳೆ ಎಂದು ಉಲ್ಲೇಖಿಸಲಾಗಿದೆ. ಇಲ್ಲಿ ಅಳತೆ ಮಾಪನವಾಗಿ ಗೇಣನ್ನು ಬಳಸಲಾಗಿದೆ. ಹೀಗೆ ಗೇಣಿನ ಮೂಲಕ 50 ಮತ್ತರು ಭೂಮಿಯನ್ನು ಅಳೆದು ದಾನವಾಗಿ ನೀಡಿರುವುದನ್ನು ಈ ಶಾಸನವು ತಿಳಿಸುತ್ತದೆ.

ರಾಯಚೂರು ಜಿಲ್ಲೆಯ ಇದೇ ತಾಲ್ಲೂಕಿನಲ್ಲಿ ದೊರೆತಿರುವ ಇನ್ನೊಂದು ಶಾಸನವು[26]1097ರ ಕಾಲಘಟ್ಟಕ್ಕೆ ಸೇರುತ್ತದೆ. ಈ ಶಾಸನವು ಚಾಲುಕ್ಯ ದೊರೆ ಆರನೆಯ ವಿಕ್ರಮಾದಿತ್ಯನ ಮಾಂಡಳಿಕನಾದ ಮಹಾಮಂಡಳೇಶ್ವರ ಸಿಂಧಕುಲದ ಬಾಚರಸನ ಹೆಸರನ್ನು ಉಲ್ಲೇಖಿಸುತ್ತಾ, ಅಳತೆ ಮಾಪನಗಳಾದ ಗೇಣ, ಗಳೆ, ಸಾಲಿಗುನ್ದೆಯ ಕಲಿಯಮಗೆರೆಯ ಕೋಲು, ಮಾಣಿಕೇಶ್ವರದ 24 ಗೇಣ ಕೋಲು ಎಂದು ತಿಳಿಸುತ್ತದೆ. ಬಹುಶಃ ಈ ಶಾಸನದಲ್ಲಿ ಬಳಕೆಯಾಗಿರುವ ಅಳತೆಕೋಲುಗಳು ಊರಿನ ಹೆಸರನ್ನು ಮತ್ತು ದೇವಾಲಯದ ಹೆಸರನ್ನು ಹೊಂದಿರುವ ಅಳತೆ ಕೋಲುಗಳಾಗಿದ್ದವು ಎಂದು ಹೇಳಲಾಗುತ್ತದೆ. ಆಂಧ್ರಪ್ರದೇಶದ ಮೆಹಬೂಬ್ ನಗರ ಜಿಲ್ಲೆಯಲ್ಲಿ ದೊರೆತಿರುವ ಶಾಸನವು[27] ತ್ರಿಭುವನಮಲ್ಲನ ಆಳ್ವಿಕೆಯಲ್ಲಿ ತಿಳಿಸುತ್ತಾ ಮಾಹೇಶ್ವರ ಎಂಬ ದಂಡನಾಯಕನೊಬ್ಬನು ನೀಡಿದ ದತ್ತಿಯೊಂದು ಹೇಳುತ್ತದೆ. ಈ ಶಾಸನದಲ್ಲಿ ಸಣಿವಾರಸಿದ್ಧಿಯಕೋಲು ಎಂಬ ಅಳತೆಕೋಲಿನ ಹೆಸರು ಬಂದಿದ್ದು, ಈ ಕೋಲಿನ ಮೂಲಕ ಭೂಮಿಯನ್ನು ಅಳೆದು ದತ್ತಿಯಾಗಿ ನೀಡಲಾಗುತ್ತಿತ್ತು. ಈ ಅಳತೆ ಕೋಲು ಸನಿವಾರ ಎಂಬ ವಾರದ ಹೆಸರಿನ್ನು ಹೊಂದಿರುವುದು ಆಶ್ಚರ್ಯಕರ ವಿಭಿನ್ನವಾಗಿರುತ್ತದೆ.

ಬಿಜಾಪುರ ಜಿಲ್ಲೆ ಬಿಜಾಪುರ ತಾಲೂಕಿನಲ್ಲಿ ದೊರೆತಿರುವ ಶಾಸನವು[28] ಚಾಲುಕ್ಯ ಚಕ್ರವರ್ತಿಯಾದ ಜಗದೇಕಮಲ್ಲದೇವನ ಆಳ್ವಿಕೆಯ ಕಾಲವನ್ನು ತಿಳಿಸುತ್ತಾ, ಗೋಮಭೂಪಾಲ ಎಂಬುವವನ ಹೆಸರನ್ನು ಉಲ್ಲೇಖಿಸುತ್ತದೆ. ಹಾಗೂ ಈ ಶಾಸನವು ರಾಜನ ಮಹಾಮಂಡಳೇಶ್ವರನಾದ ಯಾದವ ವಂಶದ ಹೆಮ್ಮಡಿ ಅರಸನ ಹೆಸರನ್ನು ತಿಳಿಸುತ್ತದೆ. ಇದೊಂದು ವಿಶಿಷ್ಟವಾದ ಶಾಸನವಾಗಿದೆ. ಕಾರಣ ಗೋಮಭೂಪಾಲನ ಹೆಸರಿನಲ್ಲಿ ಅಳತೆ ಕೋಲನ್ನು ನಿರ್ಮಿಸಲಾಗಿದೆ. ಇದರಿಂದ ತಿಳಿದುಬರುವ ಅಂಶವೇನೆಂದರೆ ವ್ಯಕ್ತಿಯ ಹೆಸರಿನಲ್ಲಿಯೂ ಕೂಡ ಅಳತೆಕೋಲುಗಳಿರುವುದು ಕಂಡುಬರುತ್ತದೆ. ಈ ಅಳತೆಕೋಲಿನಿಂದ ಭೂಮಿಯನ್ನು ಅಳೆದು ದಾನ ನೀಡಲಾಗುತ್ತದೆ. ಈ ಶಾಸನದಲ್ಲಿ ಅಳತೆ ಕೋಲನ್ನು 'ಕೊಂಡಿರೆವ ಗೋಮನ ಗಡಿಂಬ' ಎಂದು ಕರೆಯಲಾಗಿದೆ. ಬಿಜಾಪುರ ಜಿಲ್ಲೆ ಇಂಡಿ ತಾಲೂಕಿನ ಭೂಯಾರ್ನಲ್ಲಿ ದೊರೆತಿರುವ ಶಾಸನವು[29] ಕಳಚೂರಿ ದೊರೆ ತ್ರಿಭುವನಮಲ್ಲನ ಪ್ರಧಾನಿಯಾದ ಲಕ್ಷ್ಮೀದೇವ ದಂಡನಾಯಕನ ಹೆಸರನ್ನು ಉಲ್ಲೇಖಿಸುತ್ತಾ ಮಾಣಿಕೇಶ್ವರದ ಕೋಲು ಎಂಬ ಹೆಸರಿನ ಅಳತೆಕೋಲನ್ನು ಹೆಸರಿಸುತ್ತದೆ. ಈ ಕೋಲಿನಲ್ಲಿ ಭೂಮಿಯನ್ನು ಅಳೆದು ದಂಡನಾಯಕನು ತನ್ನ ಹೆಗ್ಗಡೆಯಾದ ನಾಗಣ್ಣನಾಯಕ ಹಾಗೂ ಮಾಚಗಾವುಂಡನ ಸಮ್ಮುಖದಲ್ಲಿ ಬಸವಯ್ಯ ಎಂಬುವವನಿಗೆ ಭೂದಾನ ನೀಡಿದನೆಂದು ಈ ಶಾಸನವು ದಾಖಲಿಸುತ್ತದೆ.

ಬಿಜಾಪುರ ಜಿಲ್ಲೆಯ ಬಾಗೇವಾಡಿ ತಾಲೂಕಿನ ಮನಗೂಳಿಯಲ್ಲಿ ದೊರೆತಿರುವ ಶಾಸನವು[30] 1161 ರ ಕಾಲಘಟ್ಟಕ್ಕೆ ಸೇರಿದ್ದು, ಇದರಲ್ಲಿ ಮೂರು ಬಗೆಯ ಅಳೆಯ ಕೋಲುಗಳ ಹೆಸರುಗಳು ಕಂಡುಬರುತ್ತವೆ. ಅವುಗಳೆಂದರೆ

1. ಕಟ್ಟಿದಲಗಿನ 40 ಗೇಣ ಹಂದಿಯ ಗಡಿಂಬ
2. ಹಾರುವ ಗೋಲು
3. ನಾಲ್ಗೇಣ ಪ್ರಮಾಣಿಕ ಕೈ ಎಂಬ ಹೆಸರಿನ ಅಳತೆ ಕೋಲುಗಳ ಉಲ್ಲೇಖಿಸುತ್ತದೆ. ಈ ಎಲ್ಲಾ ಅಳತೆ ಕೋಲುಗಳನ್ನು ಬಳಸಿ ಭೂಮಿಯನ್ನು ಅಳತೆ ಮಾಡಿ ಭೂದಾನ ಮಾಡುತ್ತಿದ್ದರು ಎಂದು ಶಾಸನದಿಂದ ಮಾಹಿತಿ ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯರು ಮತ್ತು ಅವರ ಮಾಂಡಲಿಕರ ಆರ್ಥಿಕ ವ್ಯವಸ್ಥೆಯಲ್ಲಿ ತೂಕ ಮತ್ತು ಅಳತೆ ಮಾಪನಗಳ ಉಲ್ಲೇಖಗಳು ಕಂಡುಬಂದಿವೆ. ಇವುಗಳಲ್ಲದೇ ಇನ್ನು ಅನೇಕ ರೀತಿಯ ಅಳತೆ ಮಾಪನಗಳು ಬಳಕೆಯಲ್ಲಿದ್ದವು. ಈ ಅವಧಿಯಲ್ಲಿ ಅಂತರ, ಕಾಲಮಾನ, ಕಟ್ಟಡ, ನಿವೇಶನ, ಮೇರೆ ಇನ್ನು

ಮೊದಲಾದವುಗಳನ್ನು ಅಳೆಯುವ ಪದ್ಧತಿಯು ಅಸ್ತಿತ್ವದಲ್ಲಿದ್ದುದು ಕೆಲವು ಶಾಸನಗಳಿಂದ ತಿಳಿದುಬರುತ್ತದೆ.

ಶಾಸನಗಳಲ್ಲಿ ಎರಡು ಪ್ರದೇಶಗಳ ನಡುವಿನ ಅಂತರವನ್ನು ಪತ್ತೆ ಹಚ್ಚಲು/ಅಳತೆ ಮಾಡಲು ಅಳತೆ ಮಾಪನವನ್ನು ಬಳಸಿರುವುದು ಕಂಡುಬರುತ್ತದೆ. ಇದಕ್ಕೆ ಉದಾಹರಣೆಯಾಗಿ ಕ್ರೋಶ,[31] ಗವ್ಯೂತಿ,[32] ಪುಟ್ಟ,[33] ಎಂಬ ಪದಗಳು ಕೆಲವು ಶಾಸನಗಳಲ್ಲಿ ಬಳಕೆಯಾಗಿದ್ದು, ಇವು 2 ಪ್ರದೇಶಗಳ ನಡುವಿನ ಅಂತರವನ್ನು ಅಳೆಯಲು ಬಳಸುತ್ತಿದ್ದ ಅಳತೆ ಮಾಪನಗಳಾಗಿವೆ. ಸೋಮೇಶ್ವರನ ಮಾನಸೋಲ್ಲಾಸವು[34] ಕಾಲಮಾನದ ಬಗೆಗೆ ಘಳಿಗೆ, ವಾರ, ತಿಂಗಳು, ವರ್ಷ, ಗತಶತಕಗಳನ್ನು ಲೆಕ್ಕ ಹಾಕುವ ಕ್ರಮವನ್ನು ವಿವರಿಸಿರುವುದು ಕಂಡುಬರುತ್ತದೆ. ಈ ಹೇಳಿಕೆಗೆ ಪುಷ್ಠಿಕರಣ ಎನ್ನುವಂತೆ ಶಾಸನಗಳಲ್ಲಿ ಮಾಹಿತಿ ದೊರಕುತ್ತದೆ. ಘಳಿಗೆ,[35] ತಿಂಗಳು,[36] ಪಲ,[37] ಇನ್ನು ಮುಂತಾದ ಪದಗಳು ಶಾಸನಗಳಲ್ಲಿ ಬಳಕೆಯಾಗಿರುವ ಕಾಲಮಾನದ ಸೂಚಕ ಪದಗಳಾವೆ. ಆಘಾಟ,[38] ಚತುರಘಾಟ,[39] ಚತಃ ಸೀಮಾಘಾಟ[40] ಎಂಬ ಪದಗಳು ಕೆಲವು ಶಾಸನಗಳಲ್ಲಿ ಬಳಕೆಯಾಗಿದ್ದು, ಇವು ಮೇರೆಗಳನ್ನು ಸೂಚಿಸುವ ಪದಗಳಾಗಿದ್ದವು. ಕೆಲವೊಂದು ಶಾಸನಗಳಲ್ಲಿ ಭೂ ಗುರುತಿಗಾಗಿ ಕಲ್ಲುಗಳನ್ನು ನಿಲ್ಲಿಸುವುದು/ ಹಾಕುವುದರ ಮೂಲಕ ತಮ್ಮ ತಮ್ಮ ಹೊಲ ಮತ್ತು ನಿವೇಶನವನ್ನು ಕಂಡುಹಿಡಿಯುತ್ತಿದ್ದರು. ಉದಾಹರಣೆಗಾಗಿ ಹೇಳುವುದಾದರೆ ಧರ್ಮದ ಕಲ್ಲು[41] ಲಿಂಗದ ಕಲ್ಲು[42] ಕವಿಲೆಯಕಲ್ಲು ಎಂಬ ಕಲ್ಲುಗಳ ಹೆಸರು ಶಾಸನಗಳಲ್ಲಿ ಕಂಡುಬರುತ್ತದೆ.

ಹೀಗೆ ಕಲ್ಯಾಣ ಚಾಲುಕ್ಯರು ಮತ್ತು ಅವರ ಮಾಂಡಳಿಕ ಅರಸರ ಆರ್ಥಿಕ ವ್ಯವಸ್ಥೆಯಲ್ಲಿ ತೂಕ ಮತ್ತು ಅಳತೆ ಮಾಪನಗಳ ಹೆಸರುಗಳು ಕಂಡುಬರುತ್ತವೆ. ಹಾಗೂ ಇವರ ಕಾಲದಲ್ಲಿಯೇ ರಾಜ್ಯದ ಅಂತರ, ಕಾಲ, ಸೀಮೆ ಮೊದಲಾದವುಗಳನ್ನು ನಿರ್ಧರಿಸಲು ವಿವಿಧ ಅಳತೆ ಮಾಪನಗಳನ್ನು ಇವರು ತಮ್ಮ ಆಡಳಿತಾವಧಿಯಲ್ಲಿ ಬಳಸಿರುವುದು ಕಂಡುಬರುತ್ತದೆ. ಕಲ್ಯಾಣ ಚಾಲುಕ್ಯರ ಆಡಳಿತ ವ್ಯವಸ್ಥೆಯಲ್ಲಿ ಆರ್ಥಿಕತೆಯನ್ನು ನಿರ್ಧರಿಸು ಅಂಶಗಳಲ್ಲಿ ತೂಕ ಮತ್ತು ಅಳತೆ ಮಾಪನಗಳು ಪ್ರಮುಖ ಪಾತ್ರವಹಿಸುತ್ತವೆ. ಕಲ್ಯಾಣ ಚಾಲುಕ್ಯರ ಆಡಳಿತ ವ್ಯವಸ್ಥೆಯಲ್ಲಿ ಮಾಂಡಳಿಕ ಅಧಿಕಾರಿಗಳು ರಾಜನ ಕೈಕೆಳಗಿನ ಅಧಿಕಾರಿಗಳಾಗಿದ್ದು, ಆಡಳಿತದಲ್ಲಿ ಆಜ್ಞಾಪಾಲಕರಾಗಿ ಸೇವೆಮಾಡುತ್ತಿದ್ದರು. ಇವರು ಕೃಷಿ, ಭೂಕಂದಾಯ, ತೆರಿಗೆ ವ್ಯವಸ್ಥೆ, ನಾಣ್ಯವ್ಯವಸ್ಥೆ ಹಾಗೂ ತೂಕ ಮತ್ತು ಅಳತೆ ಮಾಪನ ಹೀಗೆ ಇನ್ನು ಹಲವು ಅಂಶಗಳನ್ನು ವ್ಯವಸ್ಥಿತವಾಗಿ ನಿರ್ವಹಿಸಿಕೊಂಡು ಹೋಗುತ್ತಿದ್ದರು. ಹೀಗಾಗಿ ರಾಜ್ಯದ ಆರ್ಥಿಕತೆಯನ್ನು ಹೆಚ್ಚಿಸುವಲ್ಲಿ ಮತ್ತು ಕಡಿಮೆ ಮಾಡುವಲ್ಲಿ ಚಾಲುಕುರ ಸಾಮಂತ ಅರಸರ ಪಾತ್ರ ಅತ್ಯಂತ ಮಹತ್ವವಾಗಿತ್ತು.ಈ ಮೇಲಿನವುಗಳಂತೆ ಚಾಲುಕ್ಯರ ಕಾಲದ ಉಲ್ಲೇಖಿತ ಶಾಸನಗಳಲ್ಲಿ ಕಂಡುಬರುವ ತೂಕ ಮತ್ತು ಅಳತೆ ಮಾಪನಗಳನ್ನು ಈ ಲೇಖನದ ಮೂಲಕ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಕೊನೆ ಟಿಪ್ಪಣಿಗಳು**


1. ನಾರಾಯಣ ಪಿ.ವಿ. (1983). ವಚನ ಸಾಹಿತ್ಯ: ಒಂದು ಸಾಂಸ್ಕೃತಿಕ ಅಧ್ಯಯನ. ವೀರಶೈವ ಅಧ್ಯಯನ ಸಂಸ್ಥೆ. ಪುಟ. 184.
2. ಸೌತ್ ಇಂಡಿಯನ್ ಇನಸ್ಕ್ರಿಪ್ಸನ್ಸ್. ಸಂಪುಟ.9, ಭಾಗ,1 ನಂ.297
3. ಹಿರೇಮಠ ಬಿ. ಆರ್. (1986) *ಶಾಸನಗಳಲ್ಲಿ ಕರ್ನಾಟಕದ ವರ್ತಕರು.* ಪುಟ. 130
4. ಮರಿಯಪ್ಪಭಟ್ಟ ಎಂ. (ಸಂ.) (1955). *ರಾಜಾದಿತ್ಯನ ವ್ಯವಹಾರ ಗಣಿತ,* ಪುಟ. 1–25.
5. ಎಪ್ಪಿಗ್ರಫಿಯಾ ಕರ್ನಾಟಿಕಾ. ಸಂ.4, ನಂ.83
6. ನಾಗರಾಜು ಡಿ. ಎಂ. (2012). *ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಶಾಸನಗಳ ಸಾಂಸ್ಕೃತಿಕ ಅಧ್ಯಯನ.* ಗೌತಮ ಪ್ರಕಾಶನ. ಪುಟ. 84.

7. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ–6, (2001) *ಮಹಾರಾಷ್ಟ್ರದ ಕನ್ನಡ ಶಾಸನಗಳು*, ಶಾ.ಸಂ–66, ಪುಟ. 91.
8. ಸೌತ್ ಇಂಡಿಯನ್ ಇನಸ್ಕ್ರಿಪ್ಸನ್ಸ್. ಸಂಪುಟ.9, ಭಾಗ,1 ನಂ.145
9. ಮರಿಯಪ್ಪಭಟ್ಟ ಎಂ. (ಸಂ.) (1955). ಪೂರ್ವೋಕ್ತ. ಪಟ. 1–26.
10. ಸೌತ್ ಇಂಡಿಯನ್ ಇನಸ್ಕ್ರಿಪ್ಸನ್ಸ್. ಸಂಪುಟ.9, ಭಾಗ,1 ನಂ.297
11. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ–6, (2001) *ಮಹಾರಾಷ್ಟ್ರದ ಕನ್ನಡ ಶಾಸನಗಳು*, ಶಾ.ಸಂ–66, ಪುಟ. 91.
12. *ಅದೇ.* ಶಾ.ಸಂ–160, ಪುಟ. 263.
13. ಮರಿಯಪ್ಪಭಟ್ಟ ಎಂ. (ಸಂ.) (1955). ಪೂರ್ವೋಕ್ತ. ಪುಟ. 1–28
14. ಉಮಾಪತಿ. (ಸಂ.). ಬಸವಣ್ಣನವರ ಹೆಚ್ಚಿನ ವಚನ, ಸಂಪುಟ–2, ಪುಟ.47.
15. ನಾಗಯ್ಯ ಜೆ.ಎಂ., (ಸಂ.). (2011). *ಕಲ್ಯಾಣ ಚಾಲುಕ್ಯರ ಶಾಸನಗಳು ಸಂ–1*, ಶಾ.ಸಂ–47, ಪುಟ. 249.
16. ಜಗದೀಶ. (2005). ಮೆಸರ್‌ಮೆಂಟ್ ಸಿಸ್ಟಮ್ ಇನ್ ಕರ್ನಾಟಕ. ಅಪ್ರಕಟಿತ ಪ್ರೌಢ ಪ್ರಬಂಧ, ಕುವೆಂಪು ಯೂನಿವರ್ಸಿಟಿ. ಪುಟ.110.
17. ಶ್ರೀ ಕೂಡಲೀ ಶೃಂಗೇರಿ ಜಗದ್ಗುರು ಮತ್ತು ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು (ಅನು.). (1963) *ಕೌಟಿಲ್ಯ ಅರ್ಥಶಾಸ್ತ್ರ.* ಪುಟ. 171–172.
18. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ–8, (2006) *ಬೀದರ್ ಜಿಲ್ಲೆ*, ಶಾ.ಸಂ–63, ಪುಟ. 172.
19. ಸೌತ್ ಇಂಡಿಯನ್ ಇನಸ್ಕ್ರಿಪ್ಸನ್ಸ್. ಸಂಪುಟ.20, ನಂ.21
20. ನಾಗಯ್ಯ ಜೆ.ಎಂ., (ಸಂ.). (2011). *ಕಲ್ಯಾಣ ಚಾಲುಕ್ಯರ ಶಾಸನಗಳು ಸಂ–1*, ಶಾ.ಸಂ–51, ಪುಟ. 255.
21. ಸೌತ್ ಇಂಡಿಯನ್ ಇನಸ್ಕ್ರಿಪ್ಸನ್ಸ್. ಸಂಪುಟ.9, ನಂ.74
22. ಸೌತ್ ಇಂಡಿಯನ್ ಇನಸ್ಕ್ರಿಪ್ಸನ್ಸ್. ಸಂಪುಟ.9, ನಂ.199
23. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ–8, (2006) *ಬಾಗಲಕೋಟೆ ಜಿಲ್ಲೆ*, ಶಾ.ಸಂ–25, ಪುಟ. 166
24. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ–7, (2006) *ರಾಯಚೂರು ಜಿಲ್ಲೆ*, ಶಾ.ಸಂ–1, ಪುಟ. 123
25. ಅದೇ, ಶಾ.ಸಂ–9, ಪುಟ. 364.
26. ಅದೇ, ಶಾ.ಸಂ–7, ಪುಟ. 358.
27. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ–5. (2001) *ಆಂಧ್ರಪ್ರದೇಶದ ಕನ್ನಡ ಶಾಸನಗಳು.* ಭಾಗ– 2, ಶಾ.ಸಂ–506, ಪುಟ. 168.
28. ಸೌತ್ ಇಂಡಿಯನ್ ಇನಸ್ಕ್ರಿಪ್ಸನ್ಸ್. ಸಂಪುಟ.28, ನಂ.161
29. ಸೌತ್ ಇಂಡಿಯನ್ ಇನಸ್ಕ್ರಿಪ್ಸನ್ಸ್. ಸಂಪುಟ.20, ನಂ.138
30. ಸೌತ್ ಇಂಡಿಯನ್ ಇನಸ್ಕ್ರಿಪ್ಸನ್ಸ್. ಸಂಪುಟ.15, ನಂ.101
31. ಎಪ್ಪಿಗ್ರಫಿಯಾ ಕರ್ನಾಟಿಕಾ. ಸಂಪುಟ.8, ನಂ.179
32. ಎಪ್ಪಿಗ್ರಫಿಯಾ ಕರ್ನಾಟಿಕಾ. ಸಂಪುಟ.18, 10 ಸೆಂಚುರಿ.
33. ಎಪ್ಪಿಗ್ರಫಿಯಾ ಕರ್ನಾಟಿಕಾ. ಸಂಪುಟ.3, ನಂ.32
34. ಕಲಬುರ್ಗಿ ಎಂ. ಎಂ., (ಸಂ.). (1998). *ಸೋಮೇಶ್ವರನ ಮಾನಸೋಲ್ಲಾಸ.* ಕರ್ನಾಟಕ ವಿಶ್ವವಿದ್ಯಾಲಯ. ಪುಟ. 46–47.
35. ಎಪ್ಪಿಗ್ರಫಿಯಾ ಕರ್ನಾಟಿಕಾ. ಸಂಪುಟ.2(ಆರ್). ನಂ.156
36. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ–6. (2001). *ಮಹಾರಾಷ್ಟ್ರದ ಕನ್ನಡ ಶಾಸನಗಳು.* ಶಾ.ಸಂ–63, ಪುಟ. 89.
37. ಎಪ್ಪಿಗ್ರಫಿಯಾ ಕರ್ನಾಟಿಕಾ. ಸಂಪುಟ.15, ನಂ.10
38. ಎಪ್ಪಿಗ್ರಫಿಯಾ ಕರ್ನಾಟಿಕಾ. ಸಂಪುಟ.6, ನಂ.4
39. ಸೌತ್ ಇಂಡಿಯನ್ ಇನಸ್ಕ್ರಿಪ್ಸನ್ಸ್. ಸಂಪುಟ.15, ನಂ.128
40. ಸೌತ್ ಇಂಡಿಯನ್ ಇನಸ್ಕ್ರಿಪ್ಸನ್ಸ್. ಸಂಪುಟ.20, ನಂ.158
41. ಸೌತ್ ಇಂಡಿಯನ್ ಇನಸ್ಕ್ರಿಪ್ಸನ್ಸ್. ಸಂಪುಟ.7, ನಂ.213
42. ಎಪ್ಪಿಗ್ರಫಿಯಾ ಕರ್ನಾಟಿಕಾ. ಸಂಪುಟ.11, ನಂ.110

**ಪರಾಮರ್ಶನ ಗ್ರಂಥಗಳು**


- ಎಫ್ರಿಗ್ರಫಿಯಾ ಕರ್ನಾಟಿಕಾ. ಆರ್ಕೀಯೋಲಾಜಿಕಲ್ ಸರ್ವೇ ಆಫ್ ಇಂಡಿಯಾ.
- ಹಿರೇಮಠ ಬಿ.ಆರ್. (1989). *ಶಾಸನಗಳಲ್ಲಿ ಕರ್ನಾಟಕದ ವರ್ತಕರು.* ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ.
- ಕಲಬುರ್ಗಿ ಎಂ.ಎಂ., (ಸಂ), (1998) ಸೋಮೇಶ್ವರ ವಿರಚಿತ, **ಮಾನಸೋಲ್ಲಾಸ,** ಸಂಪುಟ–1, 2, ಕರ್ನಾಟಕ ವಿಶ್ವವಿದ್ಯಾಲಯ.
- ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು. (2005). *ಕೌಟಿಲ್ಯನ ಅರ್ಥಶಾಸ್ತ್ರ.* ಅಂಕಿತ ಪುಸ್ತಕ.
- ಮರಿಯಪ್ಪಭಟ್ಟ ಎಂ., (ಸಂ.) (1955). *ರಾಜಾದಿತ್ಯನ ವ್ಯವಹಾರ ಗಣಿತ.* ಶ್ರೀವತ್ಸ ಮುದ್ರಾಣಾಲಯ.
- ನಾಗಯ್ಯ ಜೆ. ಎಮ್. (1987). *ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ.* ಕರ್ನಾಟಕ ವಿಶ್ವವಿದ್ಯಾಲಯ.
- ನಾಗರಾಜು ಡಿ.ಎಂ. (2012). *ಕಲ್ಯಾಣ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಶಾಸನಗಳ ಸಾಂಸ್ಕೃತಿಕ ಅಧ್ಯಯನ.* ಗೌತಮ ಪ್ರಕಾಶನ.
- ರಿತ್ತಿ ಶ್ರೀನಿವಾಸ್. (ಸಂ.) (2000). *ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾ ಕೋಶ.* ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ.
- *ಶಾಸನ ಸಂಪುಟಗಳು.* (2006). ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ವಾಸುದೇವ ಬಡಿಗೇರ. (2012). *ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 57-60
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಪ್ರಗತಿಶೀಲ ಪಂಥದ ಸಂದರ್ಭದಲ್ಲಿ ಶಿಕ್ಷಣದ ಮೂಲಕ ಸಾಮಾಜಿಕ ಪಲ್ಲಟ

**ಡಾ. ಕರಿಯಣ್ಣ ಎಸ್**
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು, ಕನ್ನಡ ವಿಭಾಗ, ಸಿಂಧಿ ಕಾಲೇಜು, ಕೆಂಪಾಪುರ, ಬೆಂಗಳೂರು.

***Abstract:***
*ಭಾರತೀಯವ ವ್ಯವಸ್ಥೆಯಲ್ಲಿ ಪರಂಪರೆಯಿಂದಲೂ ನಡೆದುಕೊಂಡು ಬಂದಿರುವ ಹೀನ ವ್ಯವಸ್ಥೆಯೆಂದರೆ ಮೇಲು ಕೀಳಿನದು ಈ ಮೇಲು ಕೀಳು ಕಲ್ಪನೆಗಳ ಉಗಮಕ್ಕೆ ಮೂಲಭೂತವಾಗಿ ಜಾತಿಯೇ ಕಾರಣ. ಸಾಮಾಜಿಕವಾಗಿ ಶುರುವಾದ ಈ ಪ್ರಕ್ರಿಯೆ ಕ್ರಮೇಣ ಉಳಿದ ಕ್ಷೇತ್ರಗಳಿಗೂ ಹರಡುತ್ತಾ ಬಂದು ಇಂದು ಬೃಹದಕಾರವಾಗಿ ಬೆಳೆದು ನಿಂತಿದೆ. ಜಾತಿ, ಶೋಷಣೆಯ ಅಸ್ತ್ರವೂ ಹೌದು ಹಾಗೆಯೇ ಶೋಷಣೆಯ ಕೇಂದ್ರವೋ ಹೌದು, ಶೋಷಿಸುವವರಿಗೆ ಜಾತಿಯೇ ಪ್ರಬಲ ಮಾಧ್ಯಮ. ಹಾಗೆಯೇ ಶೋಷಣೆಗೊಳಗಾದವರಿಗೆ ಅದು ಸಂಕಟವೂ ಹೌದು. ಪ್ರಸ್ತುತ ಲೇಖನದಲ್ಲಿ ಪ್ರಗತಿಶೀಲ ಪಂಥದ ಸಂದರ್ಭದಲ್ಲಿ ಶಿಕ್ಷಣದ ಮೂಲಕ ಸಾಮಾಜಿಕ ಪಲ್ಲಟ ಕುರಿತು ಚರ್ಚಿಸಲಾಗಿದೆ.*

***Keywords:*** *ಜಾತಿವ್ಯವಸ್ಥೆ, ಶೋಷಣೆ, ಪ್ರಗತಿಶೀಲ ಪಂಥ, ಶಿಕ್ಷಣ, ಸಾಮಾಜಿಕ ಪಲ್ಲಟ.*

## ಪೀಠಿಕೆ

ಮನುಷ್ಯರ ನಡುವೆ ಮುಟ್ಟುವ – ಮುಟ್ಟದಿರುವ ಎರಡು ರೀತಿಯ ಕ್ರಿಯೆಗಳು ನಡೆಯುತ್ತವೆ. ಪರಂಪರೆಯಿಂದ ಅನುಚೂನವಾಗಿ ಕಾಪಾಡಿಕೊಂಡು ಬಂದಿರುವ ಕುಲ ಕಸುಬುಗಳು ಇದಕ್ಕೆ ಸಾಕಷ್ಟು ನೀರೆರೆದು ಪೋಷಿಸುತ್ತಿವೆ. ಜಾತಿಯಿಂದ ಮೇಲಿರುವ ಬ್ರಾಹ್ಮಣ ಎಲ್ಲಾ ಸಮುದಾಯಗಳಿಗೂ ಪೂಜ್ಯನಾಗಿ ಶೋಷಣೆಯ ಆರಂಭದ ಪಾಲುದಾರನಾದ, ಸಾಮಾಜಿಕ ನೀತಿನಿಯಮಗಳ ಒಡೆಯನಾದ. ಹೀಗೆ ಸಾಮಾಜಿಕ ಏಕಸ್ವಾಮ್ಯ ಸಿಕ್ಕಿದ್ದೇ, ನೀತಿ ನಿಯಮಗಳ ಅಮಾನವೀಯತೆಯನ್ನು ಬೋಧಿಸುವುದಕ್ಕೆ ಪ್ರಬಲ ಕಾರಣವಾಯಿತು. ಸೇವಕನಾದ ಶೂದ್ರ ತೀರಾ ಕರುಣಾಜನಕ ಸ್ಥಿತಿಗಿಳಿದ. ಶೋಷಿತ–ಶೋಷಕರ ಪಡೆ ಅನಿವಾರ್ಯ ಅನ್ನುವ ರೀತಿಯಲ್ಲಿ ಅಸ್ತಿತ್ವ ಪಡೆಯಿತು. ಸ್ಥೂಲವಾಗಿ ಇದನ್ನು ಗಮನಿಸಿದಾಗ, ಎರಡು ಅಂಶಗಳು ಗಮನ ಸೆಳೆಯುತ್ತವೆ.

ಸೂಕ್ಷ್ಮವಾಗಿ ಗಮನಿಸಿದಾಗ "ಸಾಂಪ್ರದಾಯಿಕವಾಗಿ ದತ್ತವಾದದು ಕಸುಬಿನಿಂದ ಬಂದ ಜಾತಿ ಅಥವಾ ಜಾತಿಯಿಂದ ಬಂದ ಕಸುಬು ಇದನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳಲೇಬೇಕಾಗಿತ್ತು. ಇನ್ನೊಂದು ಜಾತಿಯ ಕಾರಣವಾಗಿ ಮುಂದುವರೆದ ಶೋಷಣೆಯ ವಲಯ ಬದುಕುವ ಯಾವ ಘಟ್ಟದಲ್ಲೂ ಎಲ್ಲರೂ ಸಮಾನರಲ್ಲ ಎಂಬುದನ್ನು ಮನವರಿಕೆಯಾಗಿಸಿತು, ನಡೆದಾಡುವ ದಾರಿಯಿಂದ ಹಿಡಿದು ಜೀವಜಲದವರೆಗೆ ಈ ಅಸಮಾನತೆ ಕ್ರೂರವಾಯಿತು. ಮಡಿ ಮೈಲಿಗೆಗಳು ಉತ್ಪನ್ನವಾದವು"[1] ಈ ಮಾತಿನಲ್ಲಿಯೂ ಶೋಷಣೆಯ ಪರಂಪರೆಯನ್ನು ಕುರಿತಂತೆ

***Please cite this article as:*** ಕರಿಯಣ್ಣ, ಎಸ್. (2024). ಪ್ರಗತಿಶೀಲ ಪಂಥದ ಸಂದರ್ಭದಲ್ಲಿ ಶಿಕ್ಷಣದ ಮೂಲಕ ಸಾಮಾಜಿಕ ಪಲ್ಲಟ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್*, 3(3), 57–60

ವಿವರಣೆಯಿದೆ. ಇಂಥ ಶೋಷಣೆಯ ಸಮಾಜದ ವಿರುದ್ಧ ಕಟ್ಟೀಮನಿ ಮತ್ತು ನಿರಂಜನರ ಪ್ರತಿಕ್ರಿಯೆ ವಿಶಿಷ್ಟವಾದುದಾಗಿದೆ. "ಅಂದಂದಿನ ಸಾಹಿತ್ಯವು ಎಷ್ಟೆಷ್ಟರ ಮಟ್ಟಿಗೆ ತನ್ನ ಸುತ್ತಣ ಸಮಾಜದೊಂದಿಗೆ ಸಂಬಂಧವನ್ನು ಸ್ಥಾಪಿಸಿಕೊಳ್ಳತೊಡಗಿದೆಯೋ ಅಷ್ಟಷ್ಟರಮಟ್ಟಿಗೆ ಅಂದಂದಿನ ಸಾಹಿತ್ಯದಲ್ಲಿ ಅದರ ಸಾಮಾಜಿಕ ಕಾಳಜಿಗಳನ್ನು ನಾವು ಗುರುತಿಸಬಹುದು. ಈ ದೃಷ್ಟಿಯಿಂದ ಇಡೀ ಕನ್ನಡ ಸಾಹಿತ್ಯವು ಚರಿತ್ರೆಯ ಸಾಮಾಜಿಕ ಪ್ರಜ್ಞೆ ಜಾಗೃತವಾಗುತ್ತ ಬಂದಿದ್ದರ ಚರಿತ್ರೆಯಾಗದೆ"[2]. ಈ ನಿಲುವನ್ನೆ ಕಟ್ಟೀಮನಿ ಮತ್ತು ನಿರಂಜನರು ಸಾಧಿಸುತ್ತಾ ಬಂದರು. ನೋಟವನ್ನೆ ಸಾಮಾಜಿಕ ಪ್ರಜ್ಞೆಯಾಗಿಸುತ್ತ ಸಾಗಿದರು. ತಾವೇ ಅನುಭವಿಸಿದ ಸಾಮಾಜಿಕ ಸಂಕಟಗಳನ್ನು ಅಭಿವ್ಯಕ್ತಿಸುತ್ತಲೇ ಕಂಡುಕೊಂಡ ಪರಿಹಾರದ ದಾರಿಯನ್ನು ಇಲ್ಲಿ ಗ್ರಹಿಸಲು ಪ್ರಯತ್ನಿಸಲಾಗಿದೆ.

ಭಾರತೀಯ ಸಂಪ್ರದಾಯ ಸಮಾಜ ಭಾವಿಸಿಕೊಂಡಂತೆ ಶಿಕ್ಷಣವನ್ನು ಕೆಳವರ್ಗದವರಿಗೆ ಕಲ್ಪಿಸಿದರೆ ನಮ್ಮನ್ನ ಪ್ರಶ್ನೆ ಮಾಡುವುದರೊಂದಿಗೆ ತಿರುಗಿ ಬೀಳುತ್ತಾರೆ ಎಂಬ ಭಯವಿತ್ತು. ಆ ಕಾರಣಕ್ಕೆ ಶಿಕ್ಷಣವನ್ನ ಕೇಂದ್ರೀಕರಣಗೊಳಿಸಿಕೊಂಡು ತಾವು ಬೆವರು ಸುರಿಸಿ ದುಡಿಯದಂತೆ, ಉಳಿದವರಷ್ಟೇ ದುಡಿಯುವಂತೆ ಶಾಸ್ತ್ರೋಕ್ತವಾದ ವಿಚಾರಗಳನ್ನು ಶಾಸನ ರೂಪದಲ್ಲಿ ಹುಟ್ಟುಹಾಕಿದರು. ಶ್ರಮಿಕ ವರ್ಗಗಳು ತಮ್ಮ ಸ್ವ–ಸಾಮರ್ಥ್ಯದಿಂದ ಶಿಕ್ಷಣವನ್ನು ಕಲಿತು ಇಂಥ ಮತೀಯ ಶಕ್ತಿಗಳ ಎದುರು ತಿರುಗಿ ಬೀಳುವುದಕ್ಕೆ ಮುಂಚಿತವಾಗಿಯೇ ಆರೋಪದಿಂದ ಅವುಗಳನ್ನು ದಮನಗೊಳಿಸಿದವು. ಶಂಭೂಕ, ಏಕಲವ್ಯ ದುರಂತ ಇದೇ ತರಹದ್ದು. ಮುಂದೆ ಈ ರೀತಿಯ ಪ್ರತಿರೋಧಗಳು ಹುಟ್ಟಿಕೊಳ್ಳದಂತೆ ಎಚ್ಚರ ವಹಿಸಲು ಹವಣಿಸಿದವು. ಆದರೆ ವಸಾಹತುಶಾಹಿಯ ಆಗಮನದಿಂದ ಭಾರತೀಯ ಇಂಥ ಸಾಮಾಜಿಕ ವ್ಯವಸ್ಥೆಯನ್ನು ಕದಡಿ ಶಿಕ್ಷಣದಿಂದ ಹೊಸಪ್ರಜ್ಞೆಯೊಂದು ಸಾರ್ವತ್ರಿಕಗೊಂಡಂತೆ ಚಿಗುರೊಡೆಯುವಂತಾಯಿತು. ಈ ನಿಟ್ಟಿನಲ್ಲಿ 'ಬ್ರಿಟಿಷರು ಭಾರತಕ್ಕೆ ಬಾರದೇಹೋಗಿದ್ದರೆ ನಾನು ಹಾರುವರ ಮನೆಯಲ್ಲಿ ಸಗಣಿ ಬಾಚಬೇಕಿತ್ತು' ಎಂಬ ಕುವೆಂಪುರವರ ಮಾತು ವಸಾಹತುಪೂರ್ವ ಭಾರತೀಯ ಸಾಮಾಜಿಕ ವ್ಯವಸ್ಥೆಗೆ ಕನ್ನಡಿ ಹಿಡಿದಂತಿದೆ. ಈ ವ್ಯವಸ್ಥೆಗೆ ಆಧುನಿಕ ಶಿಕ್ಷಣ ವ್ಯವಸ್ಥೆ ಭಾರತೀಯ ವ್ಯವಸ್ಥೆಯಲ್ಲಿ ಪಲ್ಲಟ ಉಂಟುಮಾಡಿತು. ಮೆಕಾಲೆ ಉದ್ದೇಶವೇನೆ ಇರಲಿ, ಭಾರತೀಯ ಸಮಾಜ ಪಡೆದುಕೊಂಡ ಹೊಸಜಗಿತ ಬಹಳ ಮುಖ್ಯವಾದದು. ಈ ಆಂಶವೇ ಮಹಾತ್ಮಜ್ಯೋತಿ ಬಾಪುಲೆಯವರಿಂದ ಹಿಡಿದು ಗಾಂಧೀಜಿಯವರೆಗೆ ಸಾಮಾಜಿಕ ಹೋರಾಟಕ್ಕೆ ಕಾರಣವಾಯಿತು.

ವ್ಯವಸ್ಥೆಯ ಜಾಡ್ಯವನ್ನು ತೊಡೆದು ಹೊಸ ಸಂರಚನೆಯೊಡನೆ ಹೊಸ ಸ್ಫೂರ್ತಿಯನ್ನು ತಂದುಕೊಟ್ಟವರು ಇವರು. ಬದುಕನ್ನು ಸಮಗ್ರವಾಗಿ ಸ್ಪಂದಿಸುವ ಇವರ ಚಿಂತೆನೆಗಳಲ್ಲಿ ಬಹಳ ಮುಖ್ಯವಾದುದೆಂದರೆ, 'ಅಕ್ಷರ'ದ ಸಾರ್ವತ್ರಿಕತೆ. ಇದರಿಂದ ಸಾವಿರಾರು ವರ್ಷಗಳಿಂದ ಅಕ್ಷರ ವಂಚಿತ ಸಮೂಹ ಸಾರ್ವಜನಿಕರ ಬದುಕಿನಲ್ಲಿ ಪ್ರವೇಶಿಸಲು ಸಾಧ್ಯಾವಾಯಿತು. ಈ ಕಾರಣಕ್ಕಾಗಿಯೇ ಅರವಿಂದರು ಶಿಕ್ಷಣದ ಸ್ವರೂಪವನ್ನು ಕುರಿತು ಹೇಳುವ ಮಾತು ಸಮಂಜಸವೆನಿಸುತ್ತದೆ, "ನೈಜವೂ ಜೀವಂತವೂ ಆದ ಶಿಕ್ಷಣವು ಮನುಷ್ಯನಿಗೆ ಮತ್ತು ಅವನ ವ್ಯಕ್ತಿನಿಷ್ಠತೆಗೆ ರಾಷ್ಟ್ರಕ್ಕೆ ಜನಾಂಗಕ್ಕೆ ಮತ್ತು ವಿಶ್ವ ಮಾನ್ಯತೆಗೆ ಮಹತ್ತರ ಸ್ಥಾನವನ್ನು ಕೊಡುತ್ತದೆ, ಇಂತಹ ಶಿಕ್ಷಣವು ವ್ಯಕ್ತಿಯಲ್ಲಿ ಹುದುಗಿರುವ ಮಾನವ ಜೀವನದ ಭಾವಲಹರಿಗಳನ್ನು ಬಡಿದೆಚ್ಚರಿಸುತ್ತದೆ. ಸಾಮೂಹಿಕ ಜೀವನದ ಅವಿಭಾಜ್ಯ ಭಾಗವಾದ ವ್ಯಕ್ತಿಗೆ ಈ ವಿಶ್ವಜೀವನದ ಮಹಾಮನಸ್ಸು, ಆತ್ಮವನ್ನು ಅರ್ಥವಿಸಿಕೊಳ್ಳಲು ಮಾರ್ಗ ಕಲ್ಪಿಸುತ್ತದೆ"[3] ಈ ಅಂಶ ಬ್ರಿಟಿಷ್ ಶಿಕ್ಷಣ ಪದ್ಧತಿಯ ಸ್ವರೂಪಕ್ಕೆ ಕೊಟ್ಟ ಪ್ರತಿಕ್ರಿಯೆ ಮಹಾತ್ತರವಾದುದೆ ಆಗಿದೆ. ಇಂಥ ಕ್ರಿಯೆ ಪ್ರತಿಕ್ರಿಯೆಗಳು ನಡೆಯುತ್ತಿದ್ದ ಸಂದರ್ಭದಲ್ಲಿ ಸಾಹಿತ್ಯವೆಂಬುದು ಶಿಷ್ಟೀಕರಣದ ಪೊರೆಯನ್ನ ಕಳಚಿಕೊಂಡು ಜನಮುಖಿಯಾಗುತ್ತಿದ್ದು ಬದುಕಿನ

ಮಗ್ಗಲುಗಳನ್ನು ಹಿಡಿದಿಡುವ ಹವಣಿಕೆಯಲ್ಲಿತ್ತು ಸಮುದಾಯಗಳು ಕೂಡ ವಿಭಿನ್ನ ಮಗ್ಗಲಿಗೆ ಹೊರಳಿ ತಮ್ಮನ್ನು ತಾವು ರಕ್ಷಿಸಿಕೊಳ್ಳುವ ನಿಲುವನ್ನು ತಾಳಿದವು. ಈ ಆಧುನಿಕ ಶಿಕ್ಷಣ, ಸಮುದಾಯಗಳಲ್ಲಿ ಉಂಟು ಮಾಡಿದ ಬದಲಾವಣೆಯನ್ನು ಮೂರು ನೆಲೆಯಲ್ಲಿ ಗುರುತಿಸಬಹುದು.

1. ಮೇಲ್ವರ್ಗದಲ್ಲಿ ಉಂಟಾದ ಸಮುದಾಯದ ಸಂಘಟನೆ ಮತ್ತು ವಿಘಟನೆ.
2. ಶೂದ್ರ ಸಮುದಾಯಗಳು ಮತ್ತು ಶ್ರಮಿಕ ಸಮುದಾಯಗಳು ಕಂಡುಕೊಂಡ ಹೊರಳು ದಾರಿ ಮತ್ತು ತಮ್ಮ ಹಿತದ ಮಾಧ್ಯಮವಾಗಿಸಿಕೊಂಡದ್ದು
3. ಕೆಳ ಸಮುದಾಯಗಳು ಕಂಡುಕೊಂಡ ಹೊರಳು ದಾರಿ.

ಈ ಮೂರು ನೆಲೆಗಳಲ್ಲಿ ಆಧುನಿಕ ಶಿಕ್ಷಣ ಉಂಟುಮಾಡಿದ ಪರಿಣಾಮವನ್ನು ಕುರಿತು ಈ ಸಂದರ್ಭದ ಸಾಹಿತ್ಯ ದಾಖಲಿಸುತ್ತದೆ. ಆಧುನಿಕ ಶಿಕ್ಷಣ ಯಾವಾಗ ಗೂಳಿಯಂತೆ ಒಂದು ಸಾಂಪ್ರದಾಯಿಕ ಭಾರತೀಯ ಸಾಂಸ್ಕೃತಿಕ ನಂಬಿಕೆಗಳಿಗೆ ಗುದ್ದಿದಾಗ ಹುಟ್ಟಿಕೊಂಡ ಈ ತಲ್ಲಣಗಳು ಒಂದು ಕಡೆ ಈ ಹೊಸ ಸಂವೇದನೆಗಳಿಗೆ ನೇರ ಮುಖಾಮುಖಿ ಮಾಡಿದರೆ ಕೆಲವೆಡೆ ರಕ್ಷಣಾತ್ಮಕ ನಿಲುವನ್ನು ತಳೆದುಬಿಟ್ಟವು. ಈ ಎರಡು ರೀತಿಯ ನಿಲುವಿಗೆ ಆ ಹೊತ್ತಿನ ವಾಸ್ತವ, ಪ್ರೇರಣೆಗಳು ಮತ್ತು ಪರಿಸರ ಮುಖ್ಯ ಕಾರಣವಾಗಿದ್ದವು.

ಗುಲ್ವಾಡಿ ವೆಂಟರಾವ್ ಅವರು ಬರೆಯುತ್ತಿದ್ದ ಕಾಲಕ್ಕೆ ರಾಷ್ಟ್ರದಾದ್ಯಾಂತ ಸುಧಾರಣಾ ಪರವಾಗಿ ಆಂದೋಲನಗಳು ಚುರುಕಾಗಿದ್ದವು. ಕ್ರಿಶ್ಚಿಯನ್ ಮತ ಪ್ರಚಾರಕ ಉದ್ದೇಶ ಪ್ರದಾನವಾಗಿದ್ದು ಅದರ ಆನುಷಂಗಿಕ ಫಲಗಳೆಂಬಂತೆ ಆಗುತ್ತಿದ್ದ ಸುಧಾರಣೆಗಳು, ಪರಿವರ್ತನೆಗಳು ಹಾಗು ಭಾರತದ ಬ್ರಿಟಿಷ್ ಸರ್ಕಾರವು ತನ್ನ ಆಡಳಿತ ವ್ಯವಸ್ಥೆಯ ಅಂಗವಾಗಿ ಕಾರ್ಯರೂಪಕ್ಕೆ ತರುತ್ತಿದ್ದ ಸುಧಾರಣೆಗಳು, ಬದಲಾವಣೆಗಳು ಒಂದು ಕಡೆಗಾದರೆ ಭಾರತದ ಸಾಮಾಜಿಕ, ಧಾರ್ಮಿಕ ಆಧ್ಯಾತ್ಮಿಕ ಪುನರುತ್ಥಾನದ ಉದ್ದೇಶ ಪ್ರಧಾನವಾಗಿದ್ದ ರಾಜರಾಮ ಮೋಹನ ರಾಯರ ಬ್ರಹ್ಮಸಮಾಜ, ದಯಾನಂದ ಸರಸ್ವತಿಯವರ ಆರ್ಯಸಮಾಜ, ರಾಮಕೃಷ್ಣ, ವಿವೇಕನಂದರ ಆಧ್ಯಾತ್ಮಿಕ ಆಂದೋಲನಗಳು ಇವು ಇನ್ನೊಂದು ಕಡೆಗೆ ಕ್ರಿಯಾಶೀಲವಾಗಿದ್ದವು. ಇಂಥ ವಾಸ್ತವದ ಗ್ರಹಿಕೆಯ ಧೋರಣೆಯ ನಲೆಯಲ್ಲಿ ಮುಖ್ಯವಾಗಿ 'ಇಂದಿರಾಬಾಯಿ' ಮತ್ತು 'ಇಂದಿರಾ' ಕಾದಂಬರಿಗಳನ್ನು ಮುಖ್ಯ ದಾಖಲೆಯಾಗಿ ಗಮನಿಸಬಹುದು. ಇಂದಿರಾಬಾಯಿಯಲ್ಲಿ ಬರುವ ಭಾಸ್ಕರ ಆಧುನಿಕ ಶಿಕ್ಷಣವನ್ನು ತನ್ನದಾಗಿಸಿಕೊಂಡಿದ್ದಾನೆ. ಇದರಿಂದ ಮೂಡಿದ ವೈಚಾರಿಕತೆಯೊಂದಿಗೆ ಸಂಪ್ರದಾಯದ ಮೌಲ್ಯಗಳನ್ನೇ ಪ್ರಶ್ನಿಸುತ್ತಾನೆ. "ಒಬ್ಬ ಮ್ಲೇಚನು ನನ್ನನ್ನು ಮುಟ್ಟಿದರೆ ನನ್ನ ಶರೀರವು ಅಶುದ್ಧಿಯಾಗುವುದೇನು? ಹಾಗಾದರೆ ನಾನು ಮ್ಲೇಚನ ಮೈಯನ್ನು ಮುಟ್ಟಿದರೆ ನನ್ನ ಶರೀರವು ಶುದ್ಧವಾಗುವುದಷ್ಟೇ"[4] ಎಂದು ಹೇಳುವ ಭಾಸ್ಕರನು ಆಧುನಿಕ ಶಿಕ್ಷಣವನ್ನು ಕಲಿತು ಒಟ್ಟು ಸಮಾಜದ ಸುಧಾರಕನಾಗಿ ಕಂಡು ಬರುವುದಿಲ್ಲ, ಅದರ ಬದಲಿಗೆ ತನ್ನ ಸಮುದಾಯದ ಒಳಗಡೆ ಇರುವ ನಂಬಿಕೆ, ನಡವಳಿಕೆಗಳನ್ನು ಪ್ರಶ್ನಿಸುತ್ತಾನೆ. ಇದು ಒಂದು ಮಿತಿ ಎಂದು ಭಾವಿಸುವಂತೆಯೂ ಇಲ್ಲ. ಕಾರಣ ಆ ಹೊತ್ತಿನ ಆಧುನಿಕ ಶಿಕ್ಷಣ ಸಂಪ್ರದಾಯ ಸಮಾಜಕ್ಕೆ ಕೊಟ್ಟ ದಿಕ್ಕು ಏನಿದೆ ಅದು ತನ್ನನ್ನ ತಾನೇ ಪರಿಷ್ಕರಿಸಿಕೊಳ್ಳುವ ರೀತಿಯದು.

ಆಧುನಿಕ ಶಿಕ್ಷಣದ ಬಗೆಗೆ ಮುಖ್ಯವಾಗಿ ಮೇಲ್ವರ್ಗಕ್ಕೆ ವಿರೋಧವಿತ್ತು. ಅದರಿಂದ ಉದ್ದರಿಸಿಕೊಳ್ಳುವ ಅಗತ್ಯತೆ, ಜ್ಞಾನ ಪಡೆಯುವ ಆಕಾಂಕ್ಷೆ ಇವು ಯಾವೂ ಬೇಕಾಗಿರಲಿಲ್ಲ. ಆಗಲೇ ತಮ್ಮ ಸರ್ವಹಿತ ಉದ್ಧಾರಕ್ಕೆ ಎಲ್ಲಾ ಆಯಾಮಗಳನ್ನು ದಕ್ಕಿಸಿಕೊಂಡುಬಿಟ್ಟಿದ್ದವು. ಆದರೆ ಈ ಎಲ್ಲಾ

ಊನುಗಳನ್ನು ಸರಿಗೊಳಿಸಿಕೊಳ್ಳಬೇಕಾದ್ದುದು ಶೂದ್ರ ಸಮುದಾಯ. ದೇಶಿ ಶಿಕ್ಷಣ ನಮಗೆ ದಕ್ಕದ್ದು ಎಂದು ಯಾವತ್ತೋ ತೀರ್ಮಾನಿಸಿಕೊಂಡಿದ್ದು, ಆಧುನಿಕ ಶಿಕ್ಷಣದ ಕಡೆಗೆ ಕೈಚಾಚಿದ್ದು ಈ ಶಿಕ್ಷಣ ಕೂಡ ಸುಲಭವಾಗಿ ದೊರೆಯಿತು ಎಂಬುದಾಗಿ ಭಾವಿಸುವಂತಿಲ್ಲ ನಮ್ಮ ಚರಿತ್ರೆಯನ್ನು ನೋಡಿದಾಗ ಇದು ತಿಳಿಯುತ್ತದೆ. "ಪುಲೆಯವರು ಐದನೇ ತರಗತಿಯಲ್ಲಿ ಉತೀರ್ಣರಾದಾಗ ಇವರ ಅಂಗಡಿಯಲ್ಲಿ ಕೆಲಸಕ್ಕಿದ್ದ ಬ್ರಾಹ್ಮಣ ಗುಮಾಸ್ತ ಪುಲೆ ವಿದ್ಯಾವಂತನಾದರೆ ತನಗೆ ಕುತ್ತು ಬರಬಹುದೆಂದು ಭಾವಿಸಿ ಹುನ್ನಾರ ಮಾಡಿ ಪುಲೆ ತಂದೆ ಗೋವಿಂದರಾವ್ ಪುಲೆಯವರ ಬಳಿಗೆ ಹೋಗಿ 'ನೋಡಿ ಸ್ವಾಮಿ ನೀವು ಶೂದ್ರ ಜಾತಿಗೆ ಸೇರಿದವರು ವಿದ್ಯಾಭ್ಯಾಸವನ್ನು ಮಾಡುವ ಹಾಗಿಲ್ಲ ಆದರೂ ನಿಮ್ಮ ಮಗ ಓದಿದ್ದಾನೆ. ಈ ವಿಷಯ ನಮ್ಮ ಬ್ರಾಹ್ಮಣ ಜಗದ್ಗುರುಗಳಿಗೆ ತಿಳಿದರೆ ನಿಮಗೆ ಬಹಿಷ್ಕಾರ ಹಾಕಬಹುದು' ಎಂದು ಭಯಹುಟ್ಟಿಸಿ ಪಿತೂರಿಯಿಂದ ಜೋತಿಬಾ ಪುಲೆಯನ್ನು ಶಾಲೆ ಬಿಡಿಸುವಂತೆ ಮಾಡುತ್ತಾನೆ"[5] ಇದು ಶೂದ್ರರಿಗಿದ್ದ ಅಂದಿನ ಇಕ್ಕಟ್ಟಿನ ಸಂದರ್ಭವನ್ನು ತೋರಿಸುತ್ತದೆ. ಶಿಕ್ಷಣವೇ ಶೂದ್ರ ಮತ್ತು ಕೆಳವರ್ಗಗಳಿಗೆ ತಾಕದಂತೆ ನೋಡಿಕೊಂಡಿದ್ದ ಶಕ್ತಿಗಳ ಎದುರು ವಸಾಹತುಶಾಹಿ ತನ್ನ ಶಿಕ್ಷಣವನ್ನು ಸಾರ್ವತ್ರಿಕವಾಗಿಸಿತು. ಇಂಥ ಆಧುನಿಕ ಸಂದರ್ಭ ಉಳಿದ ವರ್ಗಕ್ಕೆ ದಕ್ಕಿಸಿದ ಅವಕಾಶವಿದು.

**ಕೊನೆಟಿಪ್ಪಣಿಗಳು**

1. ಕೋದಂಡರಾಮ ಎಸ್.ಕೆ. (1999). *ಕನ್ನಡ ಕಥಾಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ.* ಗಾಯಿತ್ರಿ ಸ್ಮಾರಕ ಗ್ರಂಥಮಾಲೆ. ಪುಟ. 36
2. ಶಿವರುದ್ರಪ್ಪ, ಜಿ. ಎಸ್. (1982). *ಪ್ರತಿಕ್ರಿಯೆ.* ಪೂರ್ವಗಾಮಿ ಪ್ರಕಾಶನ. ಪುಟ. 22
3. ಅರವಿಂದ ಮಾಲಗತ್ತಿ. (2021). ದಲಿತ ಮಾರ್ಗ. ಪುಸ್ತಕ ಪ್ರಾಧಿಕಾರ. ಪುಟ. 402
4. ಗುಲ್ವಾಡಿವೆಂಕಟರಾಯ. (2018). ಇಂದಿರಾಬಾಯಿ ಅಥವಾ ಸದ್ಧರ್ಮ ವಿಜಯವು. ಕನ್ನಡ ಪುಸ್ತಕ ಪ್ರಾಧಿಕಾರ. ಪುಟ. 105
5. *ಬಹುಜನ ಸಮಾಜ.* (1961). ಕನ್ನಡ ಸಾಹಿತ್ಯ ಪರಿಷತ್ತು. ಪುಟ. 50

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 61-64
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ವಡ್ಡರಾಧನೆಯಲ್ಲಿ ಶೈಕ್ಷಣಿಕ ಆಯಾಮಗಳು

**ಶಶಿಕುಮಾರ್ ನಾಯ್ಕ ಎಸ್ (ಇಸಿಲಾ)**
ಸಂಶೋಧನಾ ವಿದ್ಯಾರ್ಥಿ, ಕನ್ನಡ ಭಾರತಿ, ಸಹ್ಯಾದ್ರಿ ಕಲಾ ಕಾಲೇಜು, ಶಿವಮೊಗ್ಗ.

**Abstract:**
*ಕನ್ನಡ ಸಾಹಿತ್ಯದಲ್ಲಿಯೇ 'ವಡ್ಡರಾಧನೆ'ಯು ಅಪೂರ್ವ ಕೃತಿಯಾಗಿದೆ. ಈ ಕೃತಿಯ ಲೇಖಕರಾದ ಶಿವಕೋಟ್ಯಾಚಾರ್ಯನ ಮೂಲ ಉದ್ದೇಶ ಹತ್ತೊಂಬತ್ತು ಕಥೆ ಮತ್ತು ಉಪಕಥೆಗಳ ಮೂಲಕ ಧರ್ಮವನ್ನು ಪ್ರತಿಪಾದಿಸುವುದು. ಈ ಕಥೆಗಳಲ್ಲಿ ತತ್ವ, ಆಚರಣೆ, ಸಿದ್ಧಾಂತಗಳಿಂದ ಅಭಿವ್ಯಕ್ತಿಸುತ್ತದೆ. ಇವುಗಳ ನಡೆ ನುಡಿಗಳಿಂದ ವರ್ತಿಸುವ ಪಾತ್ರವನ್ನು ಒಳಹೊಕ್ಕು ನೋಡಿದಾಗ, ಶುದ್ಧ ಧಾರ್ಮಿಕತೆಯ ಶಿಕ್ಷಣ ಇರುವುದನ್ನು ಕಾಣಬಹುದಾಗಿದೆ. ಮನುಷ್ಯನ ಜೀವನದ ಪ್ರತಿ ಘಟನೆಯು ಕವಿ ತನ್ನ ಕಾಲ, ಪರಿಸರದಲ್ಲಿ ಅನುಭವ ಪಡೆದು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾರ ಆಶ್ರಯ ಅಥವಾ ಹಂಗನ್ನು ಪಡೆಯದೇ ಶುದ್ಧ ಜಾನಪದ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ, ಆರ್ಥಿಕ, ಎಲ್ಲ ಮಾಹಿತಿಯನ್ನು ಕಥಾ ಹಂದರವಾಗಿ ಈ ಕಥೆಗಳಲ್ಲಿ ವಿಸ್ತರಿಸಿದ್ದಾನೆ. ಪ್ರಸ್ತುತ ಲೇಖನದಲ್ಲಿ ವಡ್ಡರಾಧನೆ ಕೃತಿಯಲ್ಲಿನ ಶೈಕ್ಷಣಿಕ ಆಯಾಮಗಳನ್ನು ಕುರಿತು ಚರ್ಚಿಸಲಾಗಿದೆ.*

***Keywords:*** *ವಡ್ಡರಾಧನೆ, ಶೈಕ್ಷಣಿಕ ಆಯಾಮಗಳು, ಧರ್ಮ ಪ್ರತಿಪಾದನೆ, ಭಾರತೀಯ ಸಂಸ್ಕೃತಿ.*

**ಪೀಠಿಕೆ**

ಭಾರತೀಯ ಸಂಸ್ಕೃತಿಯಲ್ಲಿ ಹಿಂದೂ, ಬೌದ್ಧ, ಜೈನ ಧರ್ಮಗಳನ್ನೊಳಗೊಂಡಂತೆ ಎಲ್ಲಾ ಧರ್ಮಗಳು ಗುರುವಿಗೆ ವಿಶಿಷ್ಟ ಸ್ಥಾನಮಾನವನ್ನು ನೀಡುತ್ತದೆ. ಇವುಗಳಲ್ಲದೆ ಪುರಾಣ, ಕಾವ್ಯ, ಗದ್ಯ ಕೃತಿಗಳು ಗುರು ಪರಂಪರೆಯನ್ನು ಸ್ತುತಿ ಪದ್ಯಗಳ ಮೂಲಕ ನೆನೆದುಕೊಳ್ಳುತ್ತವೆ. ಆದರೆ ವಡ್ಡರಾಧನೆಯಲ್ಲಿ ಗಾಹೆಗಳ ಮೂಲಕ 'ಕಥೆಯು ಪೇಟ್ಟಿಂ' ಎಂದು ಹೇಳುತ್ತಲೇ ಅದು ಗುರುವಿನ ಬಾಯಿಂದಲೇ ಹೇಳಿಸಿದ ರೀತಿಯಾಗಿದೆ ಎಂಬುದನ್ನು ಅರಿಯಬಹುದು.

ಶಿಕ್ಷಣ ಎಂಬ ಪರಿಭಾಷೆ ಸಂಕೀರ್ಣವಾದುದ್ದು ಇದು ತಿಳುವಳಿಕೆ, ಕಲಿಯುವಿಕೆ, ಜ್ಞಾನಾರ್ಜನೆ, ಕಲಿಸುವಿಕೆ, ಬೋಧಿಸುವಿಕೆ, ತರಬೇತಿ ಎಂಬ ಅರ್ಥದಲ್ಲಿಯು ಪ್ರಯೋಗಿಸಲಾಗಿದೆ. "ಒಂದರ್ಥದಲ್ಲಿ ವ್ಯಕ್ತಿ ಕಟ್ಟಿಕೊಂಡು ಬರುತ್ತಿರುವ ಅನುಭವವೇ ಶಿಕ್ಷಣ. ಈ ಶಿಕ್ಷಣಕ್ಕೆ ಆಧಾರವಾದದ್ದು ಜೀವನ ಎಂಬ ಮಾತುಗಳು ಇಂದಿನ ಶಿಕ್ಷಣ ಕ್ಷೇತ್ರದಲ್ಲಿ ಪ್ರಸಿದ್ಧವಾದವು"[1] ಎನ್ನುವ ಮಾತು ಹೆಚ್ಚು ಉಪಯುಕ್ತವಾಗಿದೆ. ವಿದ್ಯಾಭ್ಯಾಸ ಅಥವಾ ಶಿಕ್ಷಣ ಕುರಿತು ಪ್ರಾಚೀನತೆಯಲ್ಲಿ ಗುರುತಿಸುವಾಗ ಭರತ ಖಂಡದ ವಿದ್ಯಾಭ್ಯಾಸ ಪದ್ಧತಿಯು ಬಹುಪಾಲು ಧಾರ್ಮಿಕವಾಗಿರುತ್ತದೆ. ಜೈನ, ಬೌದ್ಧ, ಹಿಂದೂ ಧರ್ಮದ ಗುರುಗಳೆಲ್ಲರೂ ನಿರಾಡಂಬರವಾಗಿ ಸಾರ್ವಜನಿಕ ಲಕ್ಷ್ಯ ಸೆಳೆಯದೆ ಶಿಕ್ಷಣ,

***Please cite this article as:*** ಶಶಿಕುಮಾರ್ ನಾಯ್ಕ ಎಸ್ (ಇಸಿಲಾ). (2024). ವಡ್ಡರಾಧನೆಯಲ್ಲಿ ಶೈಕ್ಷಣಿಕ ಆಯಾಮಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 3(3), 61–64

ಧರ್ಮಬೋಧನೆಗೆ ಜೀವನ ಮುಡಿಪಿಡುತ್ತಿದ್ದರು. ಇಲ್ಲಿ ಶಿಕ್ಷಕನು ಧರ್ಮಬೋಧಕನೂ ಹೌದು, ಧರ್ಮಪ್ರಚಾರಕ ಶಿಕ್ಷಕನು ಹೌದು. ಅದರಂತೆಯೇ ಅವರಲ್ಲಿ ಶಿಕ್ಷಣ, ಧರ್ಮ, ಅಧ್ಯಯನಗಳು ಸಕ್ರಿಯವಾಗಿ ನಡೆದಿದೆ. "ಮನುಷ್ಯನ ಜೀವನದ ಆತ್ಮಜ್ಞಾನ ಅಥವಾ ಮೋಕ್ಷ, ವಿದ್ಯಾಭ್ಯಾಸವೆನ್ನುವುದನ್ನು ಈ ಆತ್ಮ ಜ್ಞಾನವನ್ನು ಪಡೆಯಲು ಒಂದು ಮಾರ್ಗ, ವಿದ್ಯೆಯು ಎರಡು ತೆರೆನಾದದ್ದು. ಪರಾವಿದ್ಯೆ ಮತ್ತು ಅಪರಾವಿದ್ಯೆ. ಮನುಷ್ಯನ ಆತ್ಮದ ವಿಕಾಸಕ್ಕೆ ಸಾಧಕವಾದದ್ದು ಪರಾವಿದ್ಯೆ ಇದೇ ಶ್ರೇಷ್ಠವಾದದ್ದು. ಇನ್ನುಳಿದುದೇನಿದ್ದರು ಲೌಖಿಕ ಸುಖಕ್ಕೆ ಸಾಧಕವಾದದ್ದು"[2] ಈ ಮೇಲಿನ ಮಾತಿನಂತೆ ವಡ್ಡರಾಧನೆಯಲ್ಲಿ ಎರಡು ಬಗೆಯ ವಿದ್ಯೆಗಳ ಉಲ್ಲೇಖವಾಗಿರುವುದು ಕಾಣಬಹುದು.

ವಡ್ಡರಾಧನೆಯು ಪ್ರಾಚೀನ ಶಿಕ್ಷಣ ಪದ್ಧತಿಯ ಬಗ್ಗೆ ಹತ್ತೊಂಭತ್ತು ಕಥೆಗಳಲ್ಲಿ ವಿವರಿಸುತ್ತಾ ಹೋಗುತ್ತದೆ. ಐದಾರು ವರ್ಷದವರಿದ್ದಾಗಲೇ ಶಾಸ್ತ್ರಗಳೆಲ್ಲವನ್ನು ಪ್ರಾರಂಭಿಸುತ್ತಿದ್ದರೆಂಬುದು 'ವಿದ್ಯುಚ್ಛೋರ ಋಷಿಯ ಕಥೆ'ಯಿಂದ ತಿಳಿದು ಬರುತ್ತದೆ. 'ಗುರುದತ್ತ ಭಟ್ಟಾರರ ಕಥೆ'ಯಲ್ಲಿ ಗುರುದತ್ತನು "ಏಳು ವರ್ಷದೊಳಗೆ ಚತುಷ್ಷಷ್ಟಿ ಕಳೆಗಳಂ ದ್ವಾಸಪ್ತತಿ ವಿಜ್ಞಾನಂಗಳು ಮನೆಲ್ಲಮಂ ನಿರವಶೇಷಂ ಕಲ್ತು"[3] ಎನ್ನುವುದು ಏಳು ವರ್ಷಗಳ ಅವಧಿಯಲ್ಲಿ ಅರವತ್ತನಾಲ್ಕು ಕಲೆಗಳಾದ ವ್ಯಾಕರಣ, ಛಂದಸ್ಸು, ಅಲಂಕಾರ, ನಿಘಂಟು, ಕಾವ್ಯ, ನಾಟಕ, ಸಾಮುದ್ರಿಕ, ಶಾಲಿಹೋತ್ರ, ವೈದ್ಯ, ಎಪ್ಪತ್ತೆರಡು ವಿಜ್ಞಾನಗಳನ್ನು ವಿದ್ಯಾರ್ಥಿಗಳು ಕಲಿಯುತ್ತಿದ್ದರೆಂಬುದು ತಿಳಿಯುತ್ತದೆ. 'ಸುಕುಮಾರಸ್ವಾಮಿ ಕಥೆಯ ಉಪಕಥೆ'ಯಲ್ಲಿ "ಎಟೆಂಟು ವರುಷದಿಂದೊಳಗೆ ನಾಲ್ಕು ವೇದಮುಮ್ ಆಱುಂಗಮುಂ ಪದಿನೆಂಟು ಧರ್ಮ ಶಾಸ್ತ್ರಂಗಳುಂ ಮೀಮಾಂಸಾ ನ್ಯಾಯ ವಿಸ್ತರಂ ವ್ಯಾಕರಣಂ ಪ್ರಮಾಣಂ ಛಂದ ಮಲಂಕಾರಂ ನಿಘಂಟುಕಾವ್ಯ ನಾಟಕಗಳಂ ಚಾಣಕ್ಯಂ ಸಾಮುದ್ರಿಕಂ ಶಾಲಿಹೋತ್ರಂ (ಅಶ್ವವೈದ್ಯ) ಪಾಳಕಾಪ್ಯಂ (ಗಜವೈದ್ಯ) ಹಾನಿತಂ ಚರಕಮಶ್ವಿನೀಮತಂ ಬಾಹಲಂ ಸುಸ್ರುತಂ (ವೈದ್ಯಗ್ರಂಥ) ಕ್ಷಾರಪಾನೀಯಂ ಮೊದಲಾದೊಡೆಯ ನರವೈದ್ಯಂಗಳುಂ ಜ್ಯೋತಿಷಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮಂ"[4] ಎಂದು ಅಗ್ನಿಭೂತಿ ಮತ್ತು ವಾಯುಭೂತಿಯ ಕಲಿತ ವಿದ್ಯೆಗಳ ಕುರಿತು ಹೇಳಲಾಗಿದೆ. ಈ ಮೇಲೆ ಹೇಳಿದ ವಿದ್ಯೆಗಳು ಕಲಿಯಬೇಕಾದರೇ ಏಳು–ಎಂಟು ವರ್ಷಗಳು ಬೇಕಾಗುತ್ತಿತ್ತು. ಹಾಗೆಯೇ ಸತತ ಶ್ರದ್ಧೆಯಿಂದ ಏಕ ಚಿತ್ತದಿಂದ ಅಧ್ಯಯನ ಮಾಡುತಿದ್ದರು ಎಂಬುದನ್ನು ತಿಳಿಯಲಾಗಿದೆ.

ವಿದ್ಯಾಭ್ಯಾಸದ ಸಮಯದಲ್ಲಿ ಅನೇಕ ರೀತಿಯ ಕಟ್ಟುಪಾಡುಗಳು ನಿರ್ಬಂಧನೆಗಳನ್ನು ವಿದ್ಯಾರ್ಥಿಗಳ ಮೇಲೆ ಹಾಕಲಾಗುತ್ತಿತ್ತು. 'ಸುಕುಮಾರ ಸ್ವಾಮಿ ಕಥೆ'ಯಲ್ಲಿ ಸೂರ್ಯಮಿತ್ರನಲ್ಲಿ ವಿದ್ಯಾಭ್ಯಾಸಕ್ಕೆಂದು ಬಂದ ಅಗ್ನಿಭೂತಿ ಮತ್ತು ವಾಯುಭೂತಿಯರಿಗೆ ವಿದ್ಯಾರ್ಥಿಗಳಾಗಿ ಓದನ್ನು ಕಲಿಯಲು ಬಂದಿರುವಿರಾದರೆ "ಬೈಕಂದಿರಿದು ಕಪ್ಪಡಮ ಉಟ್ಟು ಇರುಳಂ ಪಗಲುಂ ಮಲಸದೆ ನಿರ್ಬಂಧದಿಂದ ಓದಲಾರ್ಪೊಡೆ ನಿಮ್ಮನ ಓದಿಸಲಕ್ಕುಂ"[5] ಎಂದು ಹೇಳಿದುದನ್ನು ನೋಡಬಹುದು ಮುಂದೆ ವಿದ್ಯಾಭ್ಯಾಸ ಮುಗಿದ ಮೇಲೆ ವಾಯುಭೂತಿ ನಮ್ಮ ಮಾವನು ನಾವು ಭಿಕ್ಷೆ ಬೇಡಿತಂದ ಭಿಕ್ಷಾನ್ನಕ್ಕೆ ನಂಜಿಕೊಳ್ಳಲು ಎಂದು ಎಣ್ಣೆಯನ್ನಾಗಲೀ ಉಪ್ಪನ್ನಾಗಲಿ ಹಾಕಲಿಲ್ಲ ಕೆರೆಗೆ ಹೋಗಿ ಮಿಂದು ಬಂದ ನಮ್ಮ ತಲೆಗೆ ಹಚ್ಚಿಕೊಳ್ಳಲು ಎಂದು ಎಣ್ಣೆಯನ್ನು ಕೂಡ ಕೊಡುತ್ತಿರಲಿಲ್ಲ. ಹಬ್ಬದ ದಿನಗಳಲ್ಲಿಯು ಕೂಡ ನಮಗೆ ಊಟ ಹಾಕುತಿರಲಿಲ್ಲ ಎಂದು ಸಿಡುಕಿದದನ್ನು ಗಮನಿಸುತ್ತೇವೆ"[6]. ಅಂದಿನ ವಿದ್ಯಾರ್ಥಿ ಜೀವನ ಎಷ್ಟು ಕಷ್ಟಕರವಾಗಿತ್ತೆಂಬುವುದು ನಮಗೆ ಅರಿವಾಗುತ್ತದೆ.

ಗುರುಗಳು ವಿದ್ಯಾರ್ಥಿಗಳ ಜಾಣತನವನ್ನು ನೋಡಿ ಅವರಿಗೆ ವಿದ್ಯಾಭ್ಯಾಸ ಮಾಡಿಸಲು ಇಚ್ಛೆ

ಪಡುತ್ತಿದ್ದರು. ಭದ್ರಬಾಹು ಭಟ್ಟಾರರ ಕಥೆಯಲ್ಲಿ ಗೋವರ್ಧನ ಭಟ್ಟಾರರು ಗೆಳೆಯರೊಡನೆ ಆಟವಾಡುತ್ತಿದ್ದಾಗ ಭದ್ರಬಾಹುವಿನ ಜಾಣ್ಮೆಯನ್ನು ನೋಡಿ, ಮೆಚ್ಚಿ ಆತನ ತಂದೆ–ತಾಯಿಗಳ ಬಳಿಗೆ ಹೋಗಿ ಈತನನ್ನು ನಮಗೆ ಒಪ್ಪಿಸಿಕೊಡಿ ಎಲ್ಲ ಶಾಸ್ತ್ರಗಳನ್ನು ಕಲಿಸಿ ಪಂಡಿತರನ್ನಾಗಿ ಮಾಡಿ ಹಿಂದಕ್ಕೆ ಕಳುಹಿಸಿ ಕೋಡುತ್ತೆನೆಂದು ಹೇಳಿರುವುದನ್ನು ತಿಳಿಯಲಾಗಿದೆ. ವಿದ್ಯೆ ಕಲಿತ ನಂತರ ಭದ್ರಬಾಹುವಿಗೆ ಗುರುಗಳಾದ ಗೋವರ್ಧನ ಭಟ್ಟಾರರು ನೀನು "ಕಲ್ತವಿದ್ಯೆಯಂ ಪಂಡಿತಿಕ್ಕೆ ಯಮಾನ ಪೊಟಲೊಳ ನೆಗಳ್ಚಿ ನೆಗಳ್ದ ಪಂಡಿತರ್ಕಳೊಡನೆವಾದಂಗೆಯ್ದು ಅವರಂಗೆಯ್ದು ದಶದಿಶೆಗಳೆಳೆಲ್ಲಂ ನಿನ್ನ ಪಾಂಡಿತ್ಯದ ಯಶಮಂ ಪಸರಿಸಿ ನಿನ್ನನಾಮೊಡಗೊಂಡ ಬಂದುದರ್ಕೆ ತಾಯ್ತಂದೆಗಂ ಸಂತೋಷಂ ಮಾಡು"[7] ಎಂದು ತನ್ನ ಶಿಷ್ಯನಿಗೆ 'ಭದ್ರ ಬಾಹುವಿಗೆ' ಹೇಳಿರುವುದನ್ನು ಗಮನಿಸಿದಾಗ ಕಲಿತ ವಿದ್ಯೆಯಿಂದ ಸಾರ್ಥಕವಾಗಬೇಕಾದರೆ ತನ್ನ ಪಾಂಡಿತ್ಯವನ್ನು ಎದುರಾಳಿಗೆ ತೋರಿಸುವ ಕರ್ತವ್ಯವು ಇರುವುದನ್ನು ಸ್ಪಷ್ಟವಾಗುತ್ತದೆ. ಹಾಗಾಗಿ ಇದರಿಂದ ತಂದೆ–ತಾಯಿಯರಿಗೂ ಸಂತೋಷವಾಗಿರುವುದನ್ನು ತಿಳಿಯಲಾಗಿದೆ.

ಮುಂದೆ ಕಲಿತ ವಿದ್ಯೆಗಳನ್ನು ರಾಜನ ಮುಂದೆ ಪ್ರದರ್ಶನ ಕುರಿತು ಇನ್ನೊಂದು ಕಥೆಯಲ್ಲಿ ನೋಡಬಹುದು. ಅಂತಹ ಕಲಿತ ವಿದ್ಯೆಯಿಂದ ರಾಜನ ಮುಂದೆ ಪ್ರದರ್ಶಿಸಿ ಅವರಿಂದ ಅಗ್ರಹಾರ ಅಥವಾ ಇತರ ಕಾಣಿಕೆಗಳನ್ನು ಪಡೆಯುತ್ತಿದ್ದ ದಾಖಲೆಯು ಉಂಟು. ಯಾವ ವಿದ್ಯೆಯನ್ನು ಕಲಿಯದೆ ಮಂತ್ರಿ ಪದವಿಯನ್ನು ಕಳೆದುಕೊಂಡ ಅಗ್ನಿಭೂತಿಯ ವಿದ್ಯೆಯನ್ನು ಪಡೆಯದೇ ಇದ್ದಾಗ ಆದ ಪರಿಸ್ಥಿತಿ ಕುರಿತು ಈ ಕಥೆ ವಿವರಿಸುತ್ತದೆ. ಮುಂದೆ ವಾಯುಭೂತಿಯ ಸಕಲ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಪಂಡಿತರಾಗಿ ಬಂದು ಮಹಾರಾಜನನ್ನು ಕಂಡು ಇಬ್ಬರೂ "ಬೇಟಿ ಬೇಟಿ ಉಪಶ್ಲೋಕಿಸಿ ಕ್ರಿಯಾಕಾರಕ ಸಂಬಂಧದಿಂದ ವಖ್ಯಾಣಿಸಿ"[8] ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸಿದಾಗ "ಸಭೆಯೊಳಿರ್ದ್ದ ಪಂಡಿತ ಜನವೆಲ್ಲಂ ಮೆಚ್ಚಿ ಬಿಚ್ಚಳಿಸಿ ಪೊಗಟಿಕ್ಕೊಡೆ ಬಾಜುಮಂ ಕೈಕೊಳ್ಳಿ"[9] ಎಂದು ಕೊಟ್ಟೊಡೆ "ಮಹಾಪ್ರಸಾದವೆಂದಜಿಗಿ ಪೊಡೆವಟ್ಟು ಕೈಕೊಂಡು ಸುಖದೊಳ್ ಬಾಜುತ್ತಂ ಪಲಂಬರ್ ಪಂಡಿತರ್ಕ್ಕಳ್ಗೋದುಗಳಂ ವಖ್ಯಾಣಿಸುತ್ತಂ ಲೋಕದೊಳರಮನೆಯೊಳಂ ಪೂಜ್ಯರಾಗಿ ಸಿಖ ಸಂಕಥಾ ವಿನೋದದಿಂ"[10] ಎಂದು ಕಾಲ ಕಳೆಯುತ್ತಾರೆ. ಎಂಬುವುದನ್ನು 'ಸುಕುಮಾರ ಸ್ವಾಮಿ ಕಥೆ'ಯಿಂದ ತಿಳಿದು ಬರುತ್ತದೆ.

'ಸುಕುಮಾರ ಸ್ವಾಮಿ ಕಥೆ'ಯಲ್ಲಿ ಬ್ರಾಹ್ಮಣನಾದ ಸೂರ್ಯಮಿತ್ರನು ಜ್ಯೋತಿಷ್ಯಶಾಸ್ತ್ರ ಕಲಿಯುವ ಇಚ್ಛೆಯಿಂದ ಸುಧರ್ಮಚಾರ್ಯರರ ಬಳಿಗೆ ಹೋದಾಗ ಅವರು "ಎಮ್ಮ ಜೊಯಿಸಂ ಎಮ್ಮಂತಪ್ಪ ರೂಪಿನ ಋಷಿಯರ್ಗ್ಗಲ್ಲದೆ ಪೇಟಲುಂ ಕಲಲುಂಆಗದು"[11] ಎಂದು ಹೇಳಿದ ಮಾತನ್ನು ಗಮನಿಸಬಹುದು. ಅದು ಜೈನ ಋಷಿಗಳು ತಮ್ಮ ವಿದ್ಯಾರ್ಥಿಗಳಿಗೆ ಪಂಚ ನಮಸ್ಕಾರ ಮಂತ್ರಗಳನ್ನು ಉಪದೇಶಿಸಿ, ಧಾರ್ಮಿಕ ಆಚರಣೆಗಳನ್ನು ಮತ್ತು ತ್ರಿಷಷ್ಠಿ ಶಲಾಕ ಪುರುಷರ ಚರಿತ್ರೆಗಳನ್ನು ಆಗಮ ಗ್ರಂಥಗಳ ಮೂಲಕ ಹೇಳಿ ಕೊಡುತ್ತಿದ್ದರು. ಮುಂದೆ ದ್ವಾದಶಾಂಗ ಚತುರ್ದಶಪೂರ್ವಮಪ್ಪ ಆಗಮನವನ್ನು ದ್ರವ್ಯಾನು ಯೋಗಾದಿಗಳನ್ನು ಓದಿಸುತ್ತಿದ್ದರು. ಇವೆಲ್ಲವು ಹನ್ನೆರಡು ವರ್ಷದವರಿದ್ದಾಗಲೇ ಈ ಅವಧಿಯಲ್ಲಿ ಮುಗಿಯುತ್ತಿತ್ತು ಎನ್ನುವುದು ಪರಾವಿದ್ಯೆಯ ಉಲ್ಲೇಖವು ಅಭಿವ್ಯಕ್ತಿಸಿದೆ.

ಶಿಕ್ಷಣವೇ ಕೇಂದ್ರ ಪ್ರಧಾನವಾದ ಮುಖ್ಯ ಕಸುಬಿನ ಆಗಮವು ಒಂದೊಂದು ಕಥೆಯಲ್ಲಿ ವಿಸ್ತರಿಸಿದ್ದು ಅಲ್ಲದೇ ಹಲವಾರು ರೀತಿಯ ಶಿಕ್ಷಣವನ್ನು ಪ್ರತಿನಿಧಿಸುತ್ತದೆ. ಅದು ಮಾಂತ್ರಿಕ ಶಿಕ್ಷಣ, ಸ್ತ್ರೀಯರ ಶಿಕ್ಷಣ, ವಿದ್ಯಾಭ್ಯಾಸ, ರಸ ಕುರಿತ ವಿದ್ಯೆಗಳು, ವೈದ್ಯ ಶಿಕ್ಷಣ ಮುಂತಾದ ಧಾರ್ಮಿಕತೆಯ ಹಂದರದಲ್ಲಿ ಎಲ್ಲ ರೀತಿಯಲ್ಲಿಯು ನಡೆಯಿತ್ತಿತ್ತು. ಹೀಗೆ ಆ ದಿನಗಳಲ್ಲಿ ಹೇಳಿಕೊಟ್ಟ ಶೈಕ್ಷಣಿಕ ಅಂಶಗಳು ನಾಗರಿಕ

ಬೆಳವಣಿಗೆಯಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆಯುತ್ತವೆ. ಬದುಕಿನ ವಿಧಾನವನ್ನು ಕಲಿಸುವ ವಿದ್ಯೆಗಳು ಮತ್ತು ಔಪಚಾರಿಕ ನೆಲೆಯ ವಿದ್ಯೆಗಳು ಎರಡು ವಿದ್ಯೆಗಳು ಕೂಡ ಮಾಡಿದ ಕಾರ್ಯ ಮಹತ್ತರವಾದದ್ದು ಎಂಬುದನ್ನು ಈ ಸಮಯದಲ್ಲಿ ನೆನೆಯುತ್ತೇವೆ. ಕಾಲ ಕಾಲಕ್ಕೆ ಧರ್ಮಕ್ಕನುಗುಣವಾಗಿ ಶಿಕ್ಷಣ ಬೆಳೆಯುತ್ತಲೆ ಅದರ ಷುಂಖಾನು–ಷುಂಖತೆಯು ಜನಗಳೊಂದಿಗೆ ಬೆರೆತು ಆಗು ಹೋಗುಗಳಿಗೆ ಸ್ಪಂದಿಸಿ ಸೂಕ್ತವಾದ ಮಾರ್ಗ ದರ್ಶನವನ್ನು ನೀಡುವುದೇ ಶೈಕ್ಷಣಿಕ ಉದ್ದೇಶವಾಗಿದೆ.

**ಕೊನೆಟಿಪ್ಪಣಿಗಳ**

1. ಸರಸ್ವತಿ ವಿಜಯಕುಮಾರ್. (2012). *ಜೈನ ಸಾಹಿತ್ಯ ಪರಿಸರ.* ಪುಟ. 02
2. ಚಿದಾನಂದ ಮೂರ್ತಿ. (2015). *ಶಾಸನಗಳ ಸಾಂಸ್ಕೃತಿಕ ಅಧ್ಯಯನ.* ಪುಟ. 226
3. ಕೇಶವ ಭಟ್ಟ, ಟಿ. (2017). *ವಡ್ಡರಾಧನೆ.* ಪುಟ. 248
4. ಅದೇ. ಪುಟ. 45
5. ಅದೇ. ಪುಟ. 12
6. ಅದೇ. ಪುಟ. 14
7. ಅದೇ. ಪುಟ. 132
8. ಅದೇ. ಪುಟ. 13
9. ಅದೇ. ಪುಟ. 13
10. ಅದೇ. ಪುಟ. 13
11. ಅದೇ. ಪುಟ. 14

**ಆಕರ ಗ್ರಂಥಗಳು**

- ನರಸಿಂಹಚಾರ್ ಡಿ.ಎಲ್. (1986). *ವಡ್ಡಾರಾಧನೆ.* ಡಿವಿಕೆ ಮೂರ್ತಿ ಪ್ರಕಾಶನ.
- ಕೇಶವಭಟ್ಟ, ಟಿ. (2017). *ವಡ್ಡಾರಾಧನೆ ಗದ್ಯಾನುವಾದ.* ಕನ್ನಡ ಸಾಹಿತ್ಯ ಪರಿಷತ್ತು.

**ಪರಾಮರ್ಶನ ಗ್ರಂಥಗಳು**

- ಚಿದಾನಂದ ಮೂರ್ತಿ. (2015). *ಶಾಸನಗಳ ಸಾಂಸ್ಕೃತಿಕ ಅಧ್ಯಯನ.* ಸಪ್ನ ಬುಕ್‌ಹೌಸ್.
- ಹಂಪ ನಾಗರಾಜಯ್ಯ. (ಸಂ.). *ಜೈನ ಕಥಾಕೋಶ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ಹಂಪ ನಾಗರಾಜಯ್ಯ, (1999). *ವಡ್ಡಾರಾಧನೆ ಸಮಗ್ರ ಅಧ್ಯಯನ.* ಸಿ.ವಿ.ಜಿ. ಪಬ್ಲಿಕೇಷನ್ಸ್.
- ಪುಟ್ಟಯ್ಯ, ಬಿ, ಎಂ. (ಸಂ.) (2006). *ವಡ್ಡಾರಾಧನೆ ಸಾಂಸ್ಕೃತಿಕ ಮುಖಾಮುಖಿ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ಸರಸ್ವತಿ ವಿಜಯಕುಮಾರ್ ಮತ್ತು ಬಾ.ವೇ.ಶ್ರೀಧರ. (2006). ಜೈನ ಪಾರಿಭಾಷಿಕ ಪದ ವಿವರ ಕೋಶ. ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ.
- ಸರಸ್ವತಿ ವಿಜಯಕುಮಾರ್. (2012*).* *ಜೈನ ಸಾಹಿತ್ಯ ಪರಿಸರ.* ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 65-68
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# 'ಕಾರ್ಯ' ಕಾದಂಬರಿಯಲ್ಲಿ ನಂಬಿಕೆ ಮತ್ತು ಸಂಪ್ರದಾಯ

**ಡಾ. ಸಣ್ಣ ಮುಸ್ತಮ್ಮ**
13ನೇ ವಾರ್ಡ್, ಕೆರೆ ಹತ್ತಿರ, ಕಮಲಾಪುರ ಪೋಸ್ಟ್, ಹೊಸಪೇಟೆ ತಾಲೂಕು, ವಿಜಯನಗರ ಜಿಲ್ಲೆ.

***Abstract:***
*ಕನ್ನಡ ದಲಿತ ಕಾದಂಬರಿಗಳಲ್ಲಿ ಅರವಿಂದ ಮಾಲಗತ್ತಿಯವರ 'ಕಾರ್ಯ' ಕಾದಂಬರಿಯು ಪ್ರಮುಖವಾಗಿದೆ. ಈ ಕಾದಂಬರಿಯಲ್ಲಿ ನಂಬಿಕೆ ಮತ್ತು ಸಂಪ್ರದಾಯಗಳನ್ನು ಕಾದಂಬರಿಯುದ್ದಕ್ಕೂ ಹಲವಾರು ಘಟನೆ, ಸನ್ನಿವೇಶಗಳ ಮೂಲಕ ಲೇಖಕರು ತಿಳಿಸಿದ್ದಾರೆ. ಈ ಕಾದಂಬರಿಯಲ್ಲಿ ದಲಿತ ಹೆಣ್ಣು ಬಂಗಾರವ್ವನ ಹೆಣದ ಕಾರ್ಯವನ್ನು ಕೇಂದ್ರವಾಗಿಟ್ಟುಕೊಂಡು ಕಥೆ ಮುಂದುವರೆದಿದೆ. ಈ ಕಾದಂಬರಿಯಲ್ಲಿ ನಂಬಿಕೆ ಮತ್ತು ಸಂಪ್ರದಾಯಗಳ ಮೂಲಕ ದಲಿತ ಸಂಸ್ಕೃತಿಯ ಮೌಲ್ಯಯುತವಾದ ಚರ್ಚೆಯನ್ನು ಲೇಖಕರು ನಡೆಸಿದ್ದಾರೆ.*

**Keywords:** *ದಲಿತ ಸಾಹಿತ್ಯ, ಅರವಿಂದ ಮಾಲಗತ್ತಿ, ಕಾರ್ಯ ಕಾದಂಬರಿ, ದಲಿತ ಸಮುದಾಯ.*

## ಪೀಠಿಕೆ

'ಕಾರ್ಯ' ಕಾದಂಬರಿಯಲ್ಲಿ ದಲಿತರು ತಮ್ಮ ಜನಾಂಗದಲ್ಲಿ ಇರುವಂತಹ ಕಟ್ಟುಪಾಡು ಏನೆಂಬುದನ್ನು ಮತ್ತು ಅದನ್ನು ಮೀರಿದಾಗ ಆಗುವಂತಹ ತೊಂದರೆಗಳನ್ನು ತಮಗೆ ತಾವೇ ಊಹಿಸಿಕೊಂಡು ಮುಗ್ಧ ಜನರ ಮೇಲೆ ತಮ್ಮ ದಬ್ಬಾಳಿಕೆ ಹೇರುವುದನ್ನು ಕಾಣಬಹುದು. "ದಲಿತ ಸಂಸ್ಕೃತಿಯ ಪದ್ಧತಿಗಳು ಮತ್ತು ಆಚರಣೆಗಳು ಕೆಲವರ ಪಾಲಿಗೆ ಮಾತ್ರ ಉಲ್ಲಂಘಿಸಲು ಆಗದಂತಹ ಬಡಪಾಯಿಗಳು ಮತ್ತು ಹೆಂಗಸರು ಈ ವರ್ಗಕ್ಕೆ ಸೇರುತ್ತಾರೆ. ಸಮಾಜದ ಮುಂದಾಳು ಹಿರಿಯರು ಪಂಚರು ಈ ಸಮಾಜದ ನ್ಯಾಯವನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ನಿರ್ಧರಿಸುತ್ತಾರೆ. ಬದಲಾಯಿಸುತ್ತಾರೆ. ಇವರಿಗೆ 'ಸಂಪ್ರದಾಯ' ಎಂಬ ಹೆಸರಿನ ರಕ್ಷೆ ಇದೆ. ಈ ಅರ್ಥದಲ್ಲಿ ದಲಿತ ಸಮಾಜವೊಂದರ ಒಳಗೆಯೇ ಹೆಂಗಸರು ಮತ್ತು ದುರ್ಬಲರು ಶೋಷಣೆಗೆ ಒಳಗಾಗುತ್ತಾರೆ." (ಸೀಮಾತೀತ ಕನ್ನಡ ಸಾಹಿತ್ಯ ಚರಿತ್ರೆ. ಸಂಪುಟ–6, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, 2014) ಶೋಷಣೆಗೆ ಒಳಗಾದ ಹೆಂಗಸರು ಮತ್ತು ದುರ್ಬಲರು ಆ ವ್ಯವಸ್ಥೆಯ ವಿರುದ್ಧವಾಗಿ ಪ್ರತಿಭಟಿಸಿ ತಮ್ಮ ಹಕ್ಕನ್ನು ಪಡೆದುಕೊಳ್ಳುತ್ತಾರೆ.

ಈ ಕಾದಂಬರಿಯಲ್ಲಿ ನಂಬಿಕೆ ಮತ್ತು ಸಂಪ್ರದಾಯಗಳ ಮೂಲಕ ದಲಿತ ಸಂಸ್ಕೃತಿಯ ಮೌಲ್ಯಯುತವಾದ ಚರ್ಚೆಯನ್ನು ಲೇಖಕರು ನಡೆಸಿದ್ದಾರೆ. ಈ ಸಂಪ್ರದಾಯಗಳನ್ನು ಮುಂದುವರಿಸಿಕೊಂಡು ಹೋಗುವಲ್ಲಿ ಸವರ್ಣೀಯರ ಪಾತ್ರ ಎಷ್ಟು ದಟ್ಟವಾದುದು ಎಂಬುದು ಗೌಡ ಮತ್ತು ಜಂಗಮಯ್ಯನ ಪಾತ್ರಗಳು ನಿರೂಪಿಸುತ್ತವೆ. ಆದ ಕಾರಣ ದಲಿತರ ನಂಬಿಕೆ ಮತ್ತು ಸಂಪ್ರದಾಯಗಳ ಆಚರಣೆಗೆ ಕೇವಲ ದಲಿತರು ಮಾತ್ರ ಕಾರಣವಲ್ಲ ಎಂಬುದನ್ನು ಗುರುತಿಸಬಹುದು. ಇಂತಹ ಕಷ್ಟದ ಸಂಪ್ರದಾಯವನ್ನು ವ್ಯವಸ್ಥಿತವಾಗಿ

***Please cite this article as:*** ಸಣ್ಣ ಮುಸ್ತಮ್ಮ. (2024). 'ಕಾರ್ಯ' ಕಾದಂಬರಿಯಲ್ಲಿ ನಂಬಿಕೆ ಮತ್ತು ಸಂಪ್ರದಾಯ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(3), 65–68

ಮುಂದುವರೆಸಿಕೊಂಡು ಹೋಗುವಲ್ಲಿ ಮೇಲ್ವರ್ಗದವರ ಪಾತ್ರವೂ ಅಷ್ಟೇ ಮುಖ್ಯವಾಗಿರುತ್ತದೆ. ಏಕೆಂದರೆ ಇದೇ ಆಚರಣೆಯನ್ನು ಅಸ್ತ್ರವಾಗಿ ಬಳಸಿಕೊಂಡು ಮುಗ್ಧ ದಲಿತರನ್ನು ಆರ್ಥಿಕವಾಗಿ ಶೋಷಣೆ ಮಾಡುವುದನ್ನು ಸಹ ಈ ಕಾದಂಬರಿ ನಿರೂಪಿಸುತ್ತದೆ. ಸಂಪ್ರದಾಯದ ಹೆಸರಿನಲ್ಲಿ ಘಟೇಗಾರ ಮಲ್ಲಪ್ಪ ಮತ್ತು ಪಕ್ಕೀರಪ್ಪನನ್ನು ತುಂಬಾ ಕಟ್ಟುನಿಟ್ಟಾಗಿ ನಡೆಸಿಕೊಂಡು ಅವರನ್ನು ಶಿಕ್ಷೆಗೆ ಗುರಿಮಾಡುವುದನ್ನು ಕಾಣುತ್ತೇವೆ. ಸಂಪ್ರದಾಯಗಳು ನಮಗೆ ನಾವು ಮಾಡಿಕೊಂಡಿದ್ದು, ಆದರೂ ಸಹ ಇಲ್ಲಿ ಮಾನವೀಯತೆ ಮರೆತು ಶಿಕ್ಷೆಗೆ ಗುರಿ ಮಾಡುವುದನ್ನು ನೋಡುತ್ತೇವೆ. ದಲಿತರ ತಾಳ್ಮೆಯ ಕಟ್ಟೆ ಒಡೆದಾಗ ಶೋಷಣೆಗೆ ಗುರಿಯಾದ ದಲಿತ ಪಾತ್ರಗಳು ತಮ್ಮ ಮೇಲಿನ ಶೋಷಣೆಯ ವಿರುದ್ಧ ಧ್ವನಿ ಎತ್ತಿ ಮಾತಾಡಿ ತಮ್ಮ ಪ್ರತಿರೋಧವನ್ನು ವ್ಯಕ್ತಪಡಿಸುತ್ತವೆ.

ಈ ಕಾದಂಬರಿಯಲ್ಲಿ ಬರುವ ಪ್ರಮುಖ ಪಾತ್ರವಾದ ಘಟೇಗಾರ ಮಲ್ಲಪ್ಪ ಬಂಗಾರವ್ವನ ಹೆಣದ ಮುಂದೆ ಕುಳ್ಳಗ್ಗಿಯನ್ನು ಹಿಡಿದ ವ್ಯಕ್ತಿ ಈ ವ್ಯಕ್ತಿಯ ಕೈಯಲ್ಲಿ ಇದ್ದಂತ ಕುಳ್ಳಗ್ಗಿ ಬೆಂಕಿಯಾಗಿ ಅವನ ಕೈ ಸುಟ್ಟು ಕೈಯಲ್ಲಿ ಬೊಬ್ಬೆ ಬಂದರೂ ಸಹ ಆ ಕುಳ್ಳಗ್ಗಿಯನ್ನು ಕೆಳಗಡೆ ಬಿಡದಂತೆ ಅವನಿಗೆ ತನ್ನ ದಲಿತರ ಗುಂಪು ಒತ್ತಡ ಏರುವುದನ್ನು ನೋಡುತ್ತೇವೆ. ಕೊನೆಗೆ ತನ್ನಿಂದ ಆಗದೇ ಇರುವಂತ ಪರಿಸ್ಥಿತಿಯಲ್ಲಿ ಅನಿವಾರ್ಯವಾಗಿ ಕುಳ್ಳಗ್ಗಿಯನ್ನು ನೆಲಕ್ಕೆ ಬಿಡುವನು. ಆ ಸಂದರ್ಭದಲ್ಲಿ ಅವನ ಕೈಯನ್ನು ನೋಡದೇ ತಾನು ಕೆಳಗಡೆ ಬಿಟ್ಟಂತ ಕುಳ್ಳಗ್ಗಿಯನ್ನು ನೋಡಿ ಅವನ ವರ್ತನೆಯಿಂದ ಆ ಜನಾಂಗಕ್ಕೆ ಮತ್ತು ಇಡೀ ಊರಿಗೆ ತೊಂದರೆ ಕಾದಿದೆ ಎಂದು ತಮ್ಮ ಮೂಢನಂಬಿಕೆಯಿಂದ ಆತನನ್ನು ದೂಷಿಸುತ್ತಾರೆ. ಮಲ್ಲಪ್ಪನಿಗೆ "ಏ ಕೈಯನ ಕುಳ್ಳಗ್ಗಿ ಬಿಟ್ಟೀ ಮತ್ತ ಅದು ನೆಲಕ ಬಿಡಬಾರ್ದು, ಬಿಟ್ರ ದೊಡ್ಡ ಅನಾವುತ ಆದೀತು, ಏನಾದ್ರು ಕೈಯಿಂದ ನೆಲಕಿಡಬ್ಯಾಡ ಉರಿ ಆರ್ಸು ಹಚ್ಚಿಸ್ಸಿಗೊಡಬ್ಯಾಡ." (ಪು.ಸಂ.60) ಎಂದು ತನ್ನ ಸುತ್ತಮುತ್ತ ಇದ್ದಂತ ಜನರು ಹೇಳುವರು. ಆದರೆ ಕೈ ಉರಿಯನ್ನು ತಾಳದೇ ಕೈ ಬಿಟ್ಟಾಗ ಎಲ್ಲರೂ ಬೈಯುವ ಸಂದರ್ಭ ಕೀ ಮುಗಿದ ಗೊಂಬೆಯಂತೆ ಮಲ್ಲಪ್ಪ ನಿಂತರೆ ಕೀ ಕೊಟ್ಟವರಂತೆ ಕೋಪ ಸಿಟ್ಟಿನಿಂದ ನೋಡಿದರು. ಇಲ್ಲಿ ಮಾನವೀಯತೆ ಮರೆತು ಮಲ್ಲಪ್ಪನನ್ನು ದೂಷಿಸುವುದನ್ನು ಕಾಣುತ್ತೇವೆ. ಆ ಕ್ಷಣಕ್ಕೆ ಮಲ್ಲಪ್ಪ ಸುಮ್ಮನಿದ್ದರೂ ಸಹ ಅವನ ಮನದಲ್ಲಿನ ಆಕ್ರೋಶ, ನೋವು, ಕಣ್ಣೀರಿನ ರೂಪದಲ್ಲಿ ಹೊರಬರುವುದು ಸಹ ಒಂದು ರೀತಿಯ ಪ್ರತಿರೋಧವಾಗಿದೆ.

ಮತ್ತೊಂದು ಕಡೆ ಪಕೀರಪ್ಪ ಎನ್ನುವ ವ್ಯಕ್ತಿ ಕವಳಮರ ಹಿಡಿದಿರುತ್ತಾನೆ. ಇವನಿಗೂ ತನ್ನಲ್ಲಿರುವ ಶಕ್ತಿಯನ್ನು ಮೀರಿ ನಿಂತು ಸಾಕಾದಾಗ "ಕವಳಮರ ಹಿಡಿದುಕೊಂಡ ಪಕೀರಪ್ಪ ತನ್ನ ಕಾಲು ನೋಯುವುದಾಗಿ ಕಿರುಚ ತೊಡಗಿದ. ಬೀಗಾಗಿ ಅದು ಹಿಡಿದಿದ್ದು ಬಿಡೋದಕ್ಕೆ ಬರಂಗಿಲ್ಲಾ ತಡಕೊ, ಇಲ್ಲಾಂದ್ರ ನಿಂದು ಮಲ್ಲಪ್ಪನ ಗತಿ ಅಕ್ಕದ. ಎಂದವರನ್ನೇ ದುರುಗುಟ್ಟಿ ನೋಡುತ್ತಿದ್ದ." (ಪು.ಸಂ.38) ಇಲ್ಲಿ ಸಹ ನಿಲ್ಲಲು ಸಾಧ್ಯವಾಗುತ್ತಿಲ್ಲ ಎಂದಾಗ ಸಂಪ್ರದಾಯದ ಹೆಸರನ್ನು ಹೇಳಿ ಮರದ ಕೊಂಬೆಗಳನ್ನು ತಂದು ಅದಕ್ಕೆ ದೃಷ್ಟಿ ಗೊಂಬೆಯ ಅವತಾರದಲ್ಲಿ ಪಕೀರಪ್ಪನನ್ನು ಕಟ್ಟಿ ನಿಲ್ಲಿಸುವುದನ್ನು ಕಂಡಾಗ ಎಂತಹ ವ್ಯಕ್ತಿಗಳಲ್ಲಿಯೂ ಮರುಕ ಹುಟ್ಟುತ್ತದೆ, ಆದರೆ ಸಂಪ್ರದಾಯದಲ್ಲಿ ನಂಬಿಕೆಯನ್ನು ಇಟ್ಟಂತ ದಲಿತರಲ್ಲಿ ಇದ್ಯಾವುದು ಕಾಣುವುದಿಲ್ಲ. ಕೊನೆಗೆ ಈ ಸ್ಥಿತಿಯನ್ನು ಕಂಡಂತ ಪಕ್ಕೀರಪ್ಪನ ಹೆಂಡ್ತಿ ಸತ್ತಾಕ್ಕಿ ಸತ್ಲು ಪುಣ್ಯಾತ್ಮಳಾಗಿ ಸ್ವರ್ಗ ಸೇರಿದಳು ಆದರೆ ಅಕಿಯಾ ಹೆಸರಿನಲ್ಲಿ ಬದುಕಿದ್ದ ನನ್ನ ಗಂಡನನ್ನು ಸಾಯಿಸ್ತಾ ಇದಾರೆ. ನಿಂದ್ರು ನಿಂದ್ರು ಅಂದ್ರೆ ಎಷ್ಟೋತ್ತನ ನಿಲ್ಲಲು ಸಾಧ್ಯ, ಅದು ಒಂಟಿ ಕಾಲಿನ ಮೇಲೆ ಅವರೇನು ದನಾನ? ಸತ್ತವರ ಮನೆಗೆ ನಾವು ಬೀಗರಾಗಿ ಹುಟ್ಟಿದ್ದೇ ತಪ್ಪಾ? ಕವಳ ಮರವನ್ನು ಹಿಡಿದಿದ್ದೆ ತಪ್ಪಾ? ಎಂದು ನಾನಾ ರೀತಿಯಲ್ಲಿ ಗೋಳಾಡುವಳು ಇದರಿಂದ ಕವಳಮರ

ಹಿಡಿಯುಂತಹ ವ್ಯಕ್ತಿಯು ಸತ್ತ ವ್ಯಕ್ತಿಗೆ ಬೀಗನಾಗಿರಬೇಕು ಎಂಬುದು ದಲಿತ ಜನರಲ್ಲಿ ಇದ್ದಂತ ನಂಬಿಕೆ ಮತ್ತು ಸಂಪ್ರದಾಯ ಜೊತೆಗೆ ತಮ್ಮ ಸಮುದಾಯದಲ್ಲಿ ಹಿಂದಿನಿಂದ ನಡೆದು ಕೊಂಡು ಬಂದಂತಹ ನಂಬಿಕೆ ಎಂದು ಇಲ್ಲಿ ಸಾಭೀತಾಗುತ್ತದೆ. ಅಲ್ಲದೇ ಆ ಒಂದು ಶಿಕ್ಷೆಯನ್ನು ಪ್ರಶ್ನಿಸಿ ಫಕೀರಪ್ಪನ ಹೆಂಡತಿ ಮಾತನಾಡುವುದು ದಲಿತರ ಮನದಾಳದ ಪ್ರತಿಭಟನೆ ಆಗಿದೆ. ಆಮೇಲೆ ಸತ್ತವರನ್ನು ಮಣ್ಣಲ್ಲಿ ಊತಮೇಲೆ ಇಸಬಾಯಿಯನ್ನು ತೊಳೆಸುವ ಸಂಪ್ರದಾಯ ಸಹ ಇಲ್ಲಿ ನೋಡುತ್ತೇವೆ. ಘಟೇಗಾರ ಮಲ್ಲಪ್ಪ ಬೆಲ್ಲ ಪುಟಾಣಿ ತಂದು ಒಂದು ತಾಟಿನಲ್ಲಿ ಹಾಕಿಕೊಟ್ಟಾಗ ಅದನ್ನು ಎಲ್ಲರೂ ನಾಲ್ಕುಕಾಳು ಪುಟಾಣಿ ಸ್ವಲ್ಪ ಬೆಲ್ಲವನ್ನು ಬಾಯಿಯಲ್ಲಿ ಹಾಕಿಕೊಂಡು ಕಚಪಚ ತಿಂದಂಗೆ ಮಾಡಿ ಉಗುಳಿ ಬಾಯಿ ತೊಳೆದುಕೊಂಡರು. ಇದರಿಂದ ಸತ್ತ ಮನೆಗೆ ಹೋಗಿ ಕಾರ್ಯದಲ್ಲಿ ಭಾಗವಹಿಸಿದವರು ಈ ರೀತಿಯಲ್ಲಿ ತಮ್ಮ ಮೇಲಿನ ಸೂತಕವನ್ನು ಜವಬ್ದಾರಿಯನ್ನು ಕಳೆದುಕೊಳ್ಳಲು ಈ ರೀತಿಯಾಗಿ ಆಚರಣೆ ಮಾಡಿದಾಗ ಮಾತ್ರ ತಮಗೆ ಯಾವುದೇ ರೀತಿಯ ಕೆಡಕು ಆಗುವುದಿಲ್ಲವೆಂದು ದಲಿತರು ನಂಬಿರುತ್ತಾರೆ. ಇದರ ಜೊತೆ ಸತ್ತ ಮನೆಯವರು ಸತ್ತ ದಿನದಿಂದ ಮೂರು ದಿನದವರೆಗೆ ಒಲೆಗೆ ಬೆಂಕಿ ಹಚ್ಚಿ ಅಡುಗೆ ಮಾಡುವಂತಿರಲಿಲ್ಲ ಅಕ್ಕ ಪಕ್ಕದ ಮನೆಗಳಿಂದ ಮತ್ತು ಸಂಬಂಧಿಕರ ಮನೆಯಿಂದ ಮಾಡಿದಂತ ಅಡಿಗೆಯನ್ನು ತಂದು ಕೊಡುವ ಸಂಪ್ರದಾಯ ತುಂಬಾ ದಿನಗಳಿಂದ ಆಚರಣೆಯಲ್ಲಿತ್ತು. ಅದನ್ನೇ ಇವರು ಸಹ ಮುಂದುವರೆಸಿರುವುದು ನಮಗೆ ಕಾಣುತ್ತದೆ.

ಇದು ಅಲ್ಲದೇ ದಲಿತರ ಮೇಲೆ ಎಸಗಿದ ನಂಬಿಕೆ ಸಂಪ್ರದಾಯದ ಆಚರಣೆಯಿಂದ ಮೇಲ್ವರ್ಗದ ಜನ ತಮ್ಮ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳುವುದರ ಜೊತೆಗೆ ಇದೊಂದು ರೀತಿಯ ಸಂಪ್ರದಾಯ ಇದನ್ನು ಮಾಡಲು ಯಾರು ನಿರಾಕರಿಸುವಂತಿಲ್ಲ. ಒಂದು ವೇಳೆ ನಿರಾಕರಿಸಿದರೆ ಇದರಿಂದ ಕೆಡುಕಾಗಿ ಸಾಕಷ್ಟು ಕಷ್ಟ ನೋವುಗಳು ಎದುರಾಗುತ್ತವೆ. ಎಂಬ ಕಲ್ಪನೆಯನ್ನು ಸಹ ದಲಿತ ಜನರ ತಲೆಯಲ್ಲಿ ತುಂಬಿದ್ದರು ಇಲ್ಲಿ ಜನರನ್ನು ಆಯ್ಕೆ ಮಾಡಿಕೊಂಡು ಪೂಜೆ ಪಂಚಾಂಗ ಎಂದು ಹೇಳಿ ಅವರಿಂದ ಹಣ, ದವಸ, ಧಾನ್ಯ, ಮತ್ತು ಹಣ್ಣು ಹಂಪಲುಗಳನ್ನು ಪಡೆದುಕೊಳ್ಳುತ್ತಿದ್ದರು. ಜೊತೆಗೆ ದಕ್ಷಿಣೆಯನ್ನು ಸಹ ಇಲ್ಲಿ ಕೊಡಲೇಬೇಕಾಗಿತ್ತು. ಇದರಿಂದ ಆರ್ಥಿಕ ನಷ್ಟ ಮುಗ್ಧ ದಲಿತರಿಗೆ ಆಗುತ್ತಿತ್ತು. "ಜಂಗಮರಿಗೆ ಹರಿಜನರ ಕೆಲವು ಜಾತಿಯ ಜನಗಳೇ ಗಿರಾಕಿಗಳಿದ್ದಂತೆ ಬಂಡವಾಳವಿಲ್ಲದೆ ನಡೆಸುವ ಈ ವ್ಯಾಪಾರದಲ್ಲಿ ಪಂಚಾಂಗವೇ ಅವರಿಗೆ ಸರಕು, ಮಾರಾಟ ಮಾಡುವ ಗಿಣಿ ಪಾಠದ ಮಾತುಗಳೆ, ಬಾಗಿಲ ಹೊರಗಿದ್ದು ಕೇಳುವ ಗಿರಾಕಿಗಳಿಗೆ ವೇದವಾಖ್ಯೆ ಅವರಿಲ್ಲದಿದ್ದರೆ ಇವರಿಗೆ ಮುಕ್ತಿಯಿಲ್ಲ ಎನ್ನುವ ಮಾತು ಬೇರೂರಿ ನಿಂತಿದೆ. ಈ ಹರಿಜನ ಕೇರಿಗಳನ್ನು ಎರಡು ವರ್ಷಕ್ಕೊಮ್ಮೆ ಒಡೆ ಒಡೆದು ಹಂಚಿಕೊಳ್ಳುವ ರೂಢಿ ಬೇರೆ ಈ ಜಂಗಮರಿಗಿದೆ." (ಪು.ಸಂ.44) ಹೀಗೆ ದಲಿತರಲ್ಲಿ ಇದ್ದಂತ ನಂಬಿಕೆ ಮತ್ತು ಸಂಪ್ರದಾಯದ ಆಚರಣೆಯಿಂದ ಹೆಚ್ಚಿನ ನಷ್ಟವನ್ನು ದಲಿತರು ಅನುಭವಿಸುವುತ್ತಿರುವುದನ್ನು ಕಾಣುತ್ತೇವೆ.

ಹರಿಜನರ ಕೇರಿಯನ್ನು ಎರಡು ವರ್ಷಕ್ಕೊಮ್ಮೆ ಹಂಚಿಕೊಳ್ಳುವುದರಿಂದ ಮಚಗಾರಕೇರಿ ಬುಟಾಲಯ್ಯನ ಪಾಲಿಗೆ ಬಂದಿತ್ತು. ಈ ಕೇರಿಯ ಜನರ ಪ್ರತಿಯೊಂದು ಧಾರ್ಮಿಕ ಆಚರಣೆಗೆ, ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ, ಇನ್ನಿತರ ಒಳ್ಳೆಯ, ಕೆಟ್ಟದಿನಗಳ ಪೂಜೆಗಳಿಗೆ ಬುಟಾಲಯ್ಯ ಇರಲೇಬೇಕು ಎನ್ನುವ ರೂಢಿ ಸಂಪ್ರದಾಯ ದಲಿತರಲ್ಲಿತ್ತು, ಇಂತಹ ಸಂದರ್ಭಗಳಲ್ಲಿ ದಲಿತರ ಮನೆಯ ಪೂಜೆ ಕಾರ್ಯಕ್ಕೆ ಬೇಕಾಗುವ ಕಾಳು,ಹಣ್ಣು,ಹಂಪಲುಗಳನ್ನು ತರಲು ಆ ಬುಟಾಲಯ್ಯನನ್ನು ತಮ್ಮ ಮನೆಗೆ ಕರೆಯಿಸಿದವರೇ ಪೂಜಾ ಸಾಮಗ್ರಿಗಳ ಹಣವನ್ನು ಜೊತೆಗೆ ದಕ್ಷಿಣೆ ಕೊಡಬೇಕು. ಒಂದುವೇಳೆ ಅವರ

ಮನೆಯಲ್ಲಿ ಮೊದಲೇ ಇದ್ದವುಗಳೇ ಪೂಜೆಗೆ ಕೊಡಲು ಬಯಸಿದರೆ ಅವು ಪೂಜೆಗೆ ಅನರ್ಹ ಎನ್ನುವ ಅಪನಂಬಿಕೆಯನ್ನು ಸಹ ಸವರ್ಣೀಯರು ದಲಿತರ ತಲೆಯಲ್ಲಿ ತುಂಬಿದ್ದರು. ಇದರ ಜೊತೆಗೆ ಸತ್ತ ದಿನಗಳಲ್ಲಿಯೂ ಇದೇ ರೀತಿ ಹೆಣವನ್ನು ಮಣ್ಣಿನಲ್ಲಿ ಮುಚ್ಚಿದ ನಂತರ ಸತ್ತವನ ತಲೆಯ ಮೇಲೆ ಬುಟಾಲಯ್ಯನ ಕಾಲು ತೊಳೆಯುವ ಕಾರ್ಯವನ್ನು ಮಾಡುವ ಸಂಪ್ರದಾಯವಿದೆ. ಈ ಕಾರ್ಯದಲ್ಲಿ ಗೋರಿಗೇರಿಸಿದ ಮಣ್ಣಿನ ಮೇಲೆ ಕಲ್ಲಿಟ್ಟು ಬುಟಾಲಯ್ಯನವರು ಏರುತ್ತಾರೆ. ಏರುವುದಕ್ಕಿಂತ ಮುಂಚೆ ಹಲಿಗೆ ಬಾರಿಸಿದವನು ಹಣಕ್ಕೆ ಅತ್ತಂತೆ ಈತನ ಸೆಡವು–ಸಿಟ್ಟು ದೂರು ದುಮ್ಮಾನ ನಡೆಯುತ್ತದೆ. ಅವನ ಕೈಯ ತುಂಬಾ ದಕ್ಷಿಣೆಯನ್ನು ಕೊಟ್ಟಾಗ ಮಾತ್ರ ತನ್ನ ಕಾಲು ತಾನೇ ತೊಳೆದು ಕೊಳ್ಳುತ್ತಾನೆ. ಹೀಗಾದಾಗ ಮಾತ್ರ ಸತ್ತವನಿಗೆ ಮುಕ್ತಿ ಇದ್ದವರಿಗೆ ಸಮಾಧಾನ. ಎಂಬ ಅಪನಂಭಿಕೆಯನ್ನು ದಲಿತರಲ್ಲಿ ತುಂಬಿ ಶೋಷಣೆಗೆ ಗುರಿಮಾಡುತ್ತಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಮೇಲಿನ ಎಲ್ಲಾ ವಿಚಾರಗಳನ್ನು ಗಮನಿಸಿದಾಗ ಅರವಿಂದ ಮಾಲಗತ್ತಿಯವರು ತಮ್ಮ 'ಕಾರ್ಯ' ಕಾದಂಬರಿಯ ಮೂಲಕ ದಲಿತರ ಮೇಲೆ ಸವರ್ಣೀಯರು ಏರಿದ ನಂಬಿಕೆ ಸಂಪ್ರದಾಯಗಳು ಯಾವ ಯಾವ ಹಂತದಲ್ಲಿ ಯಾವ ರೂಪದಲ್ಲಿ ಶೋಷಣೆ, ದಬ್ಬಾಳಿಕೆ, ಅಸ್ಪೃಶ್ಯತೆಯನ್ನು ಏರುತ್ತವೆ ಈ ನಿಯಮಗಳ ಆಚರಣೆಯಲ್ಲಿ ನಂಬಿಕೆಗೆ ಅರ್ಹವಾದ ಜನ ಅನುಭವಿಸುವ ನೋವುಗಳನ್ನು ಪಾತ್ರ–ಚಿತ್ರಣಗಳ ಮೂಲಕ ಲೇಖಕರು ಕಾದಂಬರಿಯಲ್ಲಿ ಅನಾವರಣಗೊಳಿಸಿದ್ದಾರೆ.

**ಆಕರ ಗ್ರಂಥ**


- ಅರವಿಂದ ಮಾಲಗತ್ತಿ. (1988). *ಕಾರ್ಯ.* ಶೈಲ ಪ್ರಕಾಶನ.


**ಪರಾಮರ್ಶನ ಗ್ರಂಥ**


- ಅರವಿಂದ ಮಾಲಗತ್ತಿ. (2014). *ಸೀಮಾತೀತ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ.6)* ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 69-77
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಕಾರ್ನಾಡರ ನಾಟಕಗಳಲ್ಲಿ ನವ್ಯ ಹಾಗೂ ಆಧುನಿಕೋತ್ತರ ಪ್ರವೃತ್ತಿಗಳು

**ಡಾ. ಎ. ಜಯಲಕ್ಷ್ಮಿ**
ಪ್ರಾಧ್ಯಾಪಕರು, ಕೈಸ್ಟ್‌ಕಾಲೇಜು, ಆಲಂಬಾಡಿ, ಮಾಲೂರು, ಕೋಲಾರ ಜಿಲ್ಲೆ.

***Abstract:***
*ಹಲವು ದಶಕಗಳ ಕಾಲ ವಿಜೃಂಭಿಸಿದ ನವ್ಯ ಸಾಹಿತ್ಯ ಹಾಗೂ ಮನೋಧರ್ಮ ಇಂದು ಬದಲಾಗಿದೆ. ಎಲ್ಲೆಡೆಯಿಂದ ಟೀಕೆಗೆ ಗುರಿಯಾಗುತ್ತಿದೆ. ನವ್ಯ ಸಾಹಿತ್ಯ ಇಂದು ಮುಗಿದ ಅಧ್ಯಾಯ ಎಂದು ಅನ್ನಬಹುದಾದರೂ, ಅದರ ಹಲವಾರು ಪರಿಕಲ್ಪನೆಗಳು ಇನ್ನೂ ನಮ್ಮೊಂದಿಗೆ ಉಳಿದಿವೆ. ಹಾಗೆಯೇ ನವ್ಯದಿಂದ ಭಿನ್ನವಾದ ಇನ್ನೊಂದು ಮಾರ್ಗದ, ಜೀವನ ದೃಷ್ಟಿಯ ಶೋಧನೆಯನ್ನು ಇಂದು ಎಲ್ಲ ಬರಹಗಾರರಲ್ಲಿಯೂ ಕಾಣಬಹುದು. ನವ್ಯರ ಭಾಗವಾಗಿದ್ದುಕೊಂಡೆ ನವ್ಯಮನೋಧರ್ಮದ ಮಿತಿಗಳ ಬಗ್ಗೆ, ಲಂಕೇಶ್, ತೇಜಸ್ವಿ, ಮುಂತಾದವರು ನವ್ಯದ ಉಛ್ರಾಯ ಕಾಲದಲ್ಲಿಯೇ ಎಚ್ಚರಿಸಿದ್ದಾರೆ, ಗಿರೀಶ್ ಕಾರ್ನಾಡ್, ಚಂದ್ರಶೇಖರ ಕಂಬಾರ ಮುಂತಾದವರು ನವ್ಯದಿಂದ ಭಿನ್ನವಾದ ಮಾರ್ಗದ ಅನ್ವೇಷಣೆಯಲ್ಲಿ ತೊಡಗಿರುವುದನ್ನು ಅವರ ಈಚಿನ ಕೃತಿಗಳಲ್ಲಿ ಕಾಣಬಹುದಾಗಿದೆ. ನವ್ಯದ ವಕ್ತಾರರಾಗಿ, ಅದರ ಪ್ರಮುಖ ವಿಮರ್ಶಕರಾಗಿ ನವ್ಯ ಸಾಹಿತ್ಯದ ಅಭಿರುಚಿಯನ್ನು ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸಿದ ಅನಂತಮೂರ್ತಿಯವರ ಈಚಿನ ಕೃತಿ, "ಭವ"ದಲ್ಲಿ ಸಹಿತ ನವ್ಯದಿಂದ ಬೇರೆಯಾದ ಆಶೋತ್ತರಗಳನ್ನು ಕಾಣಬಹುದು. ಪ್ರಸ್ತುತ ಲೇಖನದಲ್ಲಿ ಕಾರ್ನಾಡರ ಅವರ ಒಟ್ಟು ನಾಟಕಗಳನ್ನು Modernism, Post Modernism, ನವ್ಯವಾದ ಹಾಗೂ ನವ್ಯೋತ್ತರ ಅಥವಾ ಆಧುನಿಕೋತ್ತರವಾದದ ನೆಲೆಯಲ್ಲಿ ಅರ್ಥೈಸುವ ಪ್ರಯತ್ನ ಮಾಡಲಾಗಿದೆ.*

**Keywords:** *ಗಿರೀಶ್ ಕಾರ್ನಾಡ್, ನಾಟಕಗಳು, ಆಧುನಿಕೋತ್ತರ, ಆಧುನಿಕೋತ್ತರವಾದ, ನವ್ಯವಾದ ನವ್ಯೋತ್ತರ.*

**ಪೀಠಿಕೆ**

ನವ್ಯವಾದ ಬರಿ ಒಂದು ಸಾಹಿತ್ಯ ಸಂಪ್ರದಾಯ ಮಾತ್ರವಾಗಿರಲಿಲ್ಲ. ಅದೊಂದು ತಾತ್ವಿಕ ನಿಲುವಾಗಿ, ಜೀವನ ದೃಷ್ಟಿಯಾಗಿ ಬದುಕನ್ನು ಗ್ರಹಿಸುವ ರೀತಿಯನ್ನೇ ಬದಲಾಯಿಸಿತ್ತು. ಆದ್ದರಿಂದ ನವ್ಯ ಸಾಹಿತ್ಯದ ನಿರಾಕರಣೆ ಎಂದರೆ ಅದರ ಜೀವನ ದೃಷ್ಟಿಯ ನಿರಾಕರಣೆ ಕೂಡಾ ಆಗುತ್ತದೆ. ನವ್ಯ ಹಾಗೂ ಆಧುನಿಕೋತ್ತರ (ಶಬ್ದದ ಉಪಯೋಗವನ್ನು ಮುಂದೆ ಸ್ಪಷ್ಟಪಡಿಸಿದ್ದೇನೆ) ವಾದಗಳ ಸೈದ್ಧಾಂತಿಕ, ತಾತ್ವಿಕ ನೆಲೆಗಳನ್ನು ಪರಿಶೀಲಿಸಿ, ಆ ಬೆಳಕಿನಲ್ಲಿ ಕಾರ್ನಾಡರ ನಾಟಕಗಳನ್ನು ಈ ಲೇಖನದಲ್ಲಿ ವಿಶ್ಲೇಷಿಸಿದ್ದೇನೆ. ಕನ್ನಡದಲ್ಲಿ ಮಾತ್ರವಲ್ಲ ಬಹುಶಃ ಇಡಿ ಭಾರತದಲ್ಲಿ ಇಂದು ಅತ್ಯಂತ ಹೆಸರುವಾಸಿ ನಾಟಕಕಾರ ಗಿರೀಶ ಕಾರ್ನಾಡ್ ಎಂದರೆ ಅದು ತಪ್ಪಾಗಲಾರದು. 1961ರಲ್ಲಿ ಬರೆದ 'ಯಯಾತಿ'ಯಿಂದ ಹಿಡಿದು 1994ರಲ್ಲಿ ಪ್ರಕಟವಾದ 'ಅಗ್ನಿ ಮತ್ತು ಮಳೆ' ಯವರೆಗೆ ಅವರು ಬರೆದ ನಾಟಕಗಳ ವಸ್ತುವೈವಿಧ್ಯ ಅಪಾರವಾಗಿದೆ. ಪುರಾಣಗಳಿಂದ ಹಿಡಿದು ಐತಿಹಾಸಿಕ, ಜಾನಪದ

***Please cite this article as:*** ಜಯಲಕ್ಷ್ಮಿ ಎ. (2024). ಕಾರ್ನಾಡರ ನಾಟಕಗಳಲ್ಲಿ ನವ್ಯ ಹಾಗೂ ಆಧುನಿಕೋತ್ತರ ಪ್ರವೃತ್ತಿಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(3), 69–77

ಹಾಗೂ ಸಾಮಾಜಿಕ ಸಮಸ್ಯೆಗಳವರೆಗೆ ವಿವಿಧ ಕಾಲಮಾನಗಳು, ವಿಷಯಗಳು ಅವರ ನಾಟಕಗಳ ವಸ್ತುಗಳಾಗಿವೆ. ಆಧುನಿಕ ಎನ್ನಬಹುದಾದ ಪರಕೀಯ ಪ್ರಜ್ಞೆಯನ್ನು 'ಯಯಾತಿ'ಯ ಪುರುವಿನಲ್ಲಿ ಕಂಡರೆ, ಆದರ್ಶಮೌಲ್ಯಗಳೆಲ್ಲ ಶೂನ್ಯವಾಗಿ, ಹಿಂಸೆಯೊಂದೆ ತನ್ನ ಬಳಿ ಉಳಿಯುವ ಏಕಾಕಿ ತೊಘಲಕನನ್ನು ಕಾಣುತ್ತೇವೆ. ಗಂಡು ಹೆಣ್ಣಿನ ಸಂಬಂಧದ ವಿವಿಧ ಮುಖಗಳನ್ನು 'ಹಿಟ್ಟಿನ ಹುಂಜ', 'ಅಂಜು ಮಲ್ಲಿಗೆ', 'ನಾಗಮಂಡಲ' ಮತ್ತು 'ಹಯವದನ'ದಲ್ಲಿ ಕಾಣುತ್ತೇವೆ. ಕಲ್ಯಾಣದ ಕ್ರಾಂತಿ, ಬಸವಣ್ಣಬಿಜ್ಜಳ ಇವರ ವ್ಯಕ್ತಿತ್ವ 'ತಲೆದಂಡ'ದ ವಸ್ತುವಾದರೆ, ಈಚಿನ ನಾಟಕವಾದ 'ಅಗ್ನಿ ಮತ್ತು ಮಳೆ' ವೇದಕಾಲದ ಕತೆಯೊಂದನ್ನು ತೆಗೆದುಕೊಂಡು, ಯಜ್ಞ ಬ್ರಾಹ್ಮಣತ್ವದಿಂದ ಹಿಡಿದ ನಾಟಕ ಹಾಗೂ ಪ್ರದರ್ಶನ ಕಲೆಯ ಅರ್ಥಪೂರ್ಣತೆಯವರೆಗೆ ಹರಡಿಕೊಂಡಿದೆ. ನವ್ಯ ಪ್ರಜ್ಞೆ ವಿಜೃಂಭಿಸುತ್ತಿದ್ದ 70ರ ದಶಕದಲ್ಲಿ ಪ್ರಾರಂಭವಾಗಿ, ಇಂದಿನವರೆಗೂ ಮುಂದುವರೆದಿರುವ ಕಾರ್ನಾಡರ ಕ್ರಿಯಾತ್ಮಕ ಬರವಣಿಗೆಯಲ್ಲಿ, ಕೆಲವು ಚಿಂತನೆಗಳು ಅವರನ್ನು ಶಾಶ್ವತವಾಗಿ ಕಾಡಿರುವ ವಸ್ತುಗಳಾದರೆ, ಇನ್ನು ಕೆಲವು ಬದಲಾದುದನ್ನು ಕಾಣುತ್ತೇವೆ. ಅವರ ಒಟ್ಟು ನಾಟಕಗಳನ್ನು Modernism, Post Modernism, ನವ್ಯವಾದ ಹಾಗೂ ನವ್ಯೋತ್ತರ ಅಥವಾ ಆಧುನಿಕೋತ್ತರವಾದದ ನೆಲೆಯಲ್ಲಿ ಅರ್ಥೈಸುವ ಪ್ರಯತ್ನ ಈ ಲೇಖನ.

ಕಾರ್ನಾಡರ ನಾಟಕಗಳ ಚರ್ಚೆಗೆ ತೊಡಗುವ ಮುನ್ನ ಈ ಲೇಖನದಲ್ಲಿ ಬಳಸಿರುವ ಸೈದ್ಧಾಂತಿಕ ನಿಲುವುಗಳನ್ನು ಮೊದಲು ಸ್ಪಷ್ಟಪಡಿಸಲು ಇಚ್ಛಿಸುತ್ತೇನೆ. ಕನ್ನಡದಲ್ಲಿ ನವ್ಯ ಸಾಹಿತ್ಯದ ಕಾಲವನ್ನು ಸಾಧಾರಣವಾಗಿ 60–70ರ ದಶಕಗಳು ಎಂದು ಗುರುತಿಸಬಹುದು. ಪಾಶ್ಚಿಮಾತ್ಯ ಸಂಸ್ಕೃತಿಗಳಲ್ಲಿ ನವ್ಯವನ್ನು ಒಂದು ಸಾಹಿತ್ಯ ಪರಂಪರೆಯಾಗಿ, ತಾತ್ವಿಕ ಸಿದ್ಧಾಂತವಾಗಿ ಈ ಶತಮಾನದ ಪೂರ್ವಾರ್ಧದಲ್ಲಿ ಅದರಲ್ಲೂ ಮೊದಲ ವಿಶ್ವ ಯುದ್ಧದಿಂದ 1950ರ ದಶಕದವರೆಗೆ, ಸಂಪೂರ್ಣವಾಗಿ ಬೆಳೆದ ಯುಗ ಎಂದು ಗುರುತಿಸಲಾಗಿದೆ. ಆದರೆ ನವ್ಯದ ಮನೋಧರ್ಮವನ್ನು ಮೌಲ್ಯಗಳನ್ನು ಪ್ರಾಪಂಚಿಕ ದೃಷ್ಟಿಕೋನವನ್ನು (ಇದನ್ನು ನವ್ಯವಾದ ಎಂದು ಕರೆಯಬಹುದು), ಬರಿ ಕಾಲಸೂಚಕ ಶಬ್ಧವಾಗಿ, 20ನೇ ಶತಮಾನದಲ್ಲಿ ಮಾತ್ರ ಉದ್ಭವವಾದದ್ದು ಎಂದು ಪರಿಗಣಿಸಲು ಬರುವುದಿಲ್ಲ. ಈ ಮನೋಧರ್ಮದ ಅಥವಾ ನವ್ಯವಾದ ಪ್ರಾರಂಭವನ್ನು ಗ್ರೀಕ್ ತತ್ವಶಾಸ್ತ್ರಜ್ಞರಲ್ಲೇ ಕಾಣಬಹುದು. ನಂತರದ ಚಿಂತಕರಲ್ಲಿ, ಫ್ರೆಂಚ್ ತತ್ವಜ್ಞಾನಿ ದೆಕಾರ್ತೆಯ ಘೋಷಣೆ, I think, therefore, I am'ನಿಂದ ಹಿಡಿದು, ಸಾರ್ತ್ರೆಯ 'I doubt, therefore I am', ವರೆಗೆ ನವ್ಯವಾದ ಬೆಳವಣಿಗೆಯನ್ನು ಗುರುತಿಸಬಹುದು ಪ್ರಮುಖವಾಗಿ ವಿಜ್ಞಾನ ಹಾಗೂ ವೈಜ್ಞಾನಿಕ ಮನೋಭಾವ, ವಿಚಾರಧಾರೆ ಬೆಳೆಯುತ್ತ ಹೋದಂತೆ, ಬದುಕಿನ ಎಲ್ಲ ಸ್ತರಗಳಲ್ಲೂ ಪ್ರಭಾವ ಬೀರುತ್ತ ಹೋದಂತೆ, ನವ್ಯವಾದ ಕೂಡಾ ಒಂದು ಪ್ರಬಲವಾದ ಮನೋಧರ್ಮವಾಗಿ ಬೆಳೆಯತೊಡಗಿತು.

ನವ್ಯವಾದ ಸೈದ್ಧಾಂತಿಕ ನಿಲುವುಗಳನ್ನು ಸ್ಥೂಲವಾಗಿ ಈ ರೀತಿ ಸಂಗ್ರಹಿಸಬಹುದು... ಮನುಷ್ಯನನ್ನು ಒಂದು ಬೌದ್ಧಿಕ, ಆಲೋಚನಾಜೀವಿ ಎಂದು ಗ್ರಹಿಸುವ ನವ್ಯವಾದಕ್ಕೆ Reason, Rationality, ತರ್ಕ ಹಾಗೂ ತರ್ಕಪಾರಮ್ಯವಾದವೇ ಎಲ್ಲ ಜ್ಞಾನದ ತಳಹದಿಯಾಯಿತು. ರ್‍ಯಾಶನಲ್ ಅಲ್ಲದ್ದನ್ನೆಲ್ಲ, ಬುದ್ಧಿಯಿಂದ, ತರ್ಕದಿಂದ ಅರ್ಥೈಸಲು ಸಾಧ್ಯವಿಲ್ಲದ್ದನ್ನೆಲ್ಲ ನವ್ಯ ಮನೋಧರ್ಮ ತಿರಸ್ಕರಿಸಿತು. ವ್ಯವಸ್ಥೆ ಹಾಗೂ ಕ್ರಮಬದ್ಧತೆಯಲ್ಲಿ ನಂಬಿಕೆಯಿರಿಸಿದ ನವ್ಯವಾದ, ಮನುಷ್ಯನ ಹೊರಗೂ ಒಳಗೂ ಇರುವ ಅವ್ಯವಸ್ಥೆ, ಅರಾಜಕತೆ chaos ಅನ್ನು ಅಧ್ಯಯನದ ವಸ್ತುವನ್ನಾಗಿಸಿ, ಅದನ್ನು ಹತೋಟಿಗೆ ತರುವ, ಪಳಗಿಸುವ ಪ್ರಯತ್ನ ಮಾಡಿತು. ಈ ವ್ಯವಸ್ಥೆ ಮಾನವ ಕೇಂದ್ರಿತವಾಗಿ ಬೆಳೆಯಿತು. ವ್ಯಕ್ತಿ ನಿಷ್ಠವಾದುದನ್ನು ಮಾತ್ರ ಪುರಸ್ಕರಿಸಿದ ಈ ಮಾರ್ಗ,

ಆಧುನಿಕ ಪ್ರಪಂಚ ಮೂಲದಲ್ಲಿಯೆ ಕೊಳೆತು ಹೋಗಿದೆ ಎಂದು ನಂಬಿ, ವ್ಯಕ್ತಿಯ ಏಕಾಕಿತನ, ಪರಕೀಯ ಪ್ರಜ್ಞೆ ನಿಸ್ಸಹಾಯಕತೆ ಇವುಗಳ ಬಗ್ಗೆ ತನ್ನ ಗಮನ ಕೇಂದ್ರಿಕರಿಸಿತು. ರಸೆಲ್‌ನ Logical Positivism ಹಾಗೂ ಸಾರ್ತ್ರೆಯ ಅಸ್ತಿತ್ವವಾದ ನವ್ಯ ಪ್ರಜ್ಞೆಯನ್ನು ಪ್ರತಿನಿಧಿಸುವ ತಾತ್ವಿಕ ನಿಲುವುಗಳಾದವು.

ಭಾರತದ, ಕನ್ನಡದ ಸನ್ನಿವೇಶದಲ್ಲಿ ವಿಜ್ಞಾನ ಮತ್ತು ವೈಜ್ಞಾನಿಕ ಮನೋಧರ್ಮ ಪಾಶ್ಚಿಮಾತ್ಯ ಸಂಸ್ಕೃತಿಗಳಂತೆ ವ್ಯಾಪಕವಾಗಿ ಬದುಕಿನ ಎಲ್ಲ ಸ್ತರಗಳನ್ನು ವ್ಯಾಪಿಸದಿದ್ದರೂ. ನವ್ಯವಾದ ಒಂದು ಸಾಹಿತ್ಯ ಪರಂಪರೆಯಾಗಿ, ಮನೋಧರ್ಮವಾಗಿ 60–70ರ ದಶಕದಲ್ಲಿ ಕನ್ನಡದಲ್ಲಿ ಪ್ರಬಲವಾಗಿ ಬೆಳೆಯಿತು. ಆ ಕಾಲದಲ್ಲಿ ಬಂದ ಎಲ್ಲ ಪ್ರಕಾರಗಳಲ್ಲಿಯೂ ಹೊಸರೀತಿಯ ಸಾಹಿತ್ಯ ಸೃಷ್ಟಿಗೆ, ಹೊಸ ದೃಷ್ಟಿಕೋನಕ್ಕೆ ಕಾರಣವಾಯಿತು. ನವೋದಯದ ಅತಿರೇಕವಾದ ಭಾವುಕತೆ, ರೋಮ್ಯಾಂಟಿಕ್ ಮನೋಭಾವಗಳಿಗೆ ವಿರುದ್ಧವಾದ ಪ್ರವೃತ್ತಿಗಳು ಬೆಳೆದವು. ಹಾಗೆಯೇ ವಿಮರ್ಶೆಯ ಮಾನದಂಡಗಳೂ ಬದಲಾದವು. ಗಿರೀಶ ಕಾರ್ನಾಡ್ ಕೂಡಾ ಈ ದಶಕದಲ್ಲೆ ತಮ್ಮ ಬರವಣಿಗೆಯನ್ನು ಪ್ರಾರಂಭಿಸಿದವರು.

ಮನುಷ್ಯನ ಒಟ್ಟು ವ್ಯಕ್ತಿತ್ವದ ಒಂದು ಭಾಗ ಮಾತ್ರವಾದ ತರ್ಕ, ವೈಚಾರಿಕತೆ, ವೈಜ್ಞಾನಿಕ ಮನೋಭಾವ, ಈ ತಳಹದಿಯ ಮೇಲೆ ಕಟ್ಟಿದ ನವ್ಯವಾದ ಸೌಧ 80, 90ರ ದಶಕದಲ್ಲಿ ಮುರಿದು ಬಿತ್ತು. ನವ್ಯವಾದದ ಪರಿಕಲ್ಪನೆಗಳಿಗೆ ವಿರುದ್ಧವಾದಂತಹ ಪ್ರವೃತ್ತಿಗಳು ಬಲವಾಗಿ ಬೆಳೆಯತೊಡಗಿದವು. ವ್ಯವಸ್ಥೆ ಕೇಂದ್ರಿಕೃತ ಶಕ್ತಿಗಳ ವಿರುದ್ಧವಾದ ಪ್ರವೃತ್ತಿಗಳು ಪ್ರಮುಖವಾಗತೊಡಗಿದವು. ವೈಜ್ಞಾನಿಕ ಮನೋಭಾವ, ತರ್ಕ, ವ್ಯಕ್ತಿ – ಕೇಂದ್ರಿತ ಚಿಂತನೆ ಇವು ಸಮಾಜದ ಅಸಮಾನತೆಯನ್ನು ಶೋಷಿತ ವರ್ಗಗಳ ಕೈಯಲ್ಲಿ ಒಂದು ಅಸ್ತ್ರ ಕೂಡಾ ಆಗುತ್ತಿದೆ ಎಂಬುದು ಸ್ಪಷ್ಟವಾಗತೊಡಗಿತು. ಅಂತರಾಷ್ಟ್ರೀಯ ಮಟ್ಟದಲ್ಲಿ ವಸಹಾತುಶಾಹಿ, ನವವಸಹಾತುಶಾಹಿ ಶಕ್ತಿಗಳಿಗೆ, ವೈಜ್ಞಾನಿಕವಾಗಿ ಮುಂದುವರಿಯದ ದೇಶಗಳ, ಸಂಸ್ಕೃತಿಗಳ ಮೇಲೆ ಹತೋಟಿ ಸಾಧಿಸಲು ಒಂದು ಬೌದ್ಧಿಕವಾದ ಅಸ್ತ್ರವಾದರೆ, ನಮ್ಮ ಸಂಸ್ಕೃತಿಯ ಒಳಗಡೆ ಕೂಡಾ ನವ್ಯವಾದ ಸ್ಥಾಪಿತ ಶಕ್ತಿಗಳ ದನಿಯಾಗತೊಡಗಿತು. (ಕನ್ನಡ ಸಾಹಿತ್ಯದಲ್ಲಿ ನವ್ಯಯುಗ ಬ್ರಾಹ್ಮಣ ಪ್ರಜೆಯ ಜೊತೆ ಸಮೀಕರಣಗೊಂಡದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು). ಈ ಮನೋಧರ್ಮಕ್ಕೆ ವಿರುದ್ಧವಾದಂತಹ ಆಲೋಚನಾಕ್ರಮ, ಪ್ರವೃತ್ತಿಗಳನ್ನು ಸೂಚಿಸಲು Postmodernism ಎಂಬ ಪದವನ್ನು ಬಳಸಲಾಗುತ್ತಿದೆ. ನವ್ಯೋತ್ತರ ಎಂಬ ಪದ ನವ್ಯದ ನಂತರ ಬಂದ ಎಲ್ಲ ಸಾಹಿತ್ಯಕ್ಕೆ ಕಾಲಸೂಚಕ ಪರಿಭಾಷೆಯಾಗಿ ಈಗಾಗಲೇ ಕನ್ನಡ ವಿಮರ್ಶೆಯಲ್ಲಿ ಜಾರಿಯಲ್ಲಿರುವುದರಿಂದ, ನಾನು ಇಲ್ಲಿ ಈ ರೀತಿಯ ಪ್ರವೃತ್ತಿಗಳನ್ನು ಸೂಚಿಸಲು 'ಆಧುನಿಕೋತ್ತರ', 'ಆಧುನಿಕೋತ್ತರವಾದ' ಎಂಬ ಪದಗಳನ್ನು ಬಳಸಿದ್ದೇನೆ.

ಆಧುನಿಕೋತ್ತರವಾದದ ಎಲ್ಲ ಅಂಶಗಳನ್ನು ಸಂಕ್ಷಿಪ್ತವಾಗಿ ವಿವರಿಸುವುದು ಕಷ್ಟ. ಅದು ಜಾಗತಿಕ ವಿರುದ್ಧವಾಗಿ ಪ್ರಾದೇಶಿಕ, ಗಂಭೀರದ ವಿರುದ್ಧವಾಗಿ ಲಘುವಾದ, ಮಹೋನ್ನತದ ವಿರುದ್ಧ ಕ್ಷುಲ್ಲಕವನ್ನು ಪವಿತ್ರದ ವಿರುದ್ಧ ಅಪವಿತ್ರವಾದ್ದನ್ನು ಎತ್ತಿ ಹಿಡಿಯುತ್ತದೆ. ಒಂದು ಅರ್ಥ, ಧ್ವನಿಯ ಬದಲಾಗಿ, ಹಲವು ಅರ್ಥ, ಧ್ವನಿಗಳನ್ನು ಗುರುತಿಸುತ್ತದೆ. ಅತಾರ್ಕಿಕವಾದ್ದನ್ನ. ತರ್ಕಕ್ಕೆ ಮೀರಿದ್ದನ್ನ ಸಹಿತ ಮನುಷ್ಯನ ಅನುಭವದ ಒಂದು ಭಾಗ ಎಂದು ಗ್ರಹಿಸುತ್ತದೆ. ಆಧುನಿಕೋತ್ತರವಾದದ ಈ ಗ್ರಹಿಕೆಗಳೂ ಸಹಿತ ಎಲ್ಲ ಕಾಲದಲ್ಲಿಯೂ ಅಸ್ತಿತ್ವದಲ್ಲಿ ಇದ್ದವೇ. ಈ ದೃಷ್ಟಿಯಿಂದ ಆಧುನಿಕೋತ್ತರ ಪ್ರವೃತ್ತಿಗಳನ್ನು ಆಧುನಿಕ ಪೂರ್ವಪ್ರವೃತ್ತಿ ಎಂದೂ ಕರೆಯಬಹುದು. ನವ್ಯವಾದದ ಪ್ರಭಾವದಲ್ಲಿ ಹಿನ್ನೆಲೆಗೆ ಸರಿದ ಈ ಪ್ರವೃತ್ತಿಗಳು ಈಗ ಮತ್ತೆ ಪ್ರಬಲವಾಗುತ್ತಿವೆ. ವೈವಿಧ್ಯಮಯವಾದ, ವೈರುಧ್ಯಗಳಿಂದ ಕೂಡಿದ

ಭಾರತೀಯ ಸಂಸ್ಕೃತಿಯಲ್ಲಂತೂ ಈ ಗ್ರಹಿಕೆಗಳು ಹೊಸತಾಗಿ ಬಂದದ್ದೇನೂ ಅಲ್ಲ, ನಮ್ಮ ಶಿಷ್ಟ ಸಂಸ್ಕೃತಿಯಿಂದ, ಸಾಹಿತ್ಯದಿಂದ, ಜನಪದ ಜನಜೀವನದತ್ತ ಕಣ್ಣು ಹೊರಳಿಸಿದರೆ, ಈ ಅಂಶ ದಟ್ಟವಾಗಿ ನಮ್ಮ ಗಮನಕ್ಕೆ ಬರುತ್ತದೆ. ಪಾಶ್ಚಿಮಾತ್ಯ ದೇಶಗಳು ನವ್ಯವಾದವನ್ನು ತಿರಸ್ಕರಿಸುವ ಮೊದಲೇ, ಕನ್ನಡ ಸಾಹಿತ್ಯದಲ್ಲಿ ನವ್ಯ ವಿರುದ್ಧದ ದಿನಗಳು ಪ್ರಾರಂಭವಾಗಿದ್ದವು. ಇದಕ್ಕೆ ಬಹುಶಃ ಮೇಲೆ ಹೇಳಿದ ಕಾರಣಗಳಲ್ಲದೇ ಇನ್ನೊಂದು ಮುಖ್ಯಕಾರಣ ಎಂದರೆ ನವ್ಯವಾದದ ವ್ಯಕ್ತಿ ಕೇಂದ್ರಿತ ಮನೋಧರ್ಮ, ಹೀಗಾಗಿ ಈ ಸಾಹಿತ್ಯ, ಸಮಾಜವನ್ನು ಪ್ರತಿಬಿಂಬಿಸುವಲ್ಲಿ, ಅಲ್ಲಿ ನಡೆಯುತ್ತಿರುವ ಆರ್ಥಿಕ, ಸಾಮಾಜಿಕ, ರಾಜಕೀಯ ಶಕ್ತಿಗಳ ತಾಕಲಾಟವನ್ನು ಅರ್ಥೈಸುವಲ್ಲಿ, ಧ್ವನಿಸುವಲ್ಲಿ, ಸೋತಿದ್ದು. ಹೀಗಾಗಿ ದಲಿತ, ಬಂಡಾಯ ಸಾಹಿತ್ಯ, ಸಾಮಾಜಿಕ ಗ್ರಹಿಕೆಗಳನ್ನು ಧಿಕ್ಕರಿಸಿಯೆ ಬೆಳೆದವು. ಈ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಕಾರ್ನಾಡರ ಒಟ್ಟು ನಾಟಕಗಳ ತಾತ್ವಿಕ ನೆಲೆಯನ್ನು ಇಲ್ಲಿ ಅಭ್ಯಸಿದ್ದೇನೆ. ಕಾರ್ನಾಡರ ಮೊದಲ ನಾಟಕ 'ಯಯಾತಿ' ಪ್ರಕಟವಾದದ್ದು 1961ರಲ್ಲಿ, ಅಂದರೆ ನವ್ಯವಾದ ಅತ್ಯಂತ ಪ್ರಭಾವಶಾಲಿಯಾಗಿದ್ದ ಕಾಲದಲ್ಲಿ ಅಲ್ಲಿಂದೀಚೆಗೆ ಬಂದ ಅವರ ಒಟ್ಟು ನಾಟಕಗಳನ್ನು ಪರಿಶೀಲಿಸಿದರೆ ನವ್ಯ ದೃಷ್ಟಿಕೋನದ ಪ್ರಭಾವಶಾಲಿ ಅಭಿವ್ಯಕ್ತಿಯಿಂದ ಹಂತ ಹಂತವಾಗಿ ಅವರು ಆಧುನಿಕೋತ್ತರ ಪ್ರವೃತ್ತಿಯವರೆಗೆ ಸಾಗಿ ಬಂದದ್ದನ್ನು ಕಾಣಬಹುದು. ಈ ತಾತ್ವಿಕ ನೆಲೆಯಿಂದ ನೋಡಿದರೆ, 'ಯಯಾತಿ', 'ತುಘಲಕ್', ಹಿಟ್ಟಿನಹುಂಜ' ಹಾಗೂ ಕಾಲದ ದೃಷ್ಟಿಯಿಂದ ನಂತರ ಬಂದ 'ಅಂಜು ಮಲ್ಲಿಗೆ' ಇವುಗಳನ್ನು ನವ್ಯವಾದದ, ಆಧುನಿಕ ಪ್ರಜ್ಞೆಯ ಪ್ರತೀಕವಾಗಿಯೂ, 'ಹಯವದನ', 'ನಾಗಮಂಡಲ', 'ತಲೆದಂಡ' ಹಾಗೂ 'ಅಗ್ನಿ ಮತ್ತು ಮಳೆ' ಇವುಗಳನ್ನು ಆಧುನಿಕೋತ್ತರ ಪ್ರವೃತ್ತಿಗಳ ಅಭಿವ್ಯಕ್ತಿಯಾಗಿಯೂ ಕಾಣಬಹುದು. ಇದರ ಅರ್ಥ ಈ ಎರಡೂ ಗುಂಪುಗಳ ನಡುವೆ ಒಂದು ಸ್ಪಷ್ಟವಾದ ರೇಖೆ ಇದೆ ಎಂದಲ್ಲ. ಅವರ ಹಲವಾರು ನಾಟಕಗಳಲ್ಲಿ ಎರಡೂ ಮನೋಧರ್ಮಗಳನ್ನು ಕಾಣಬಹುದು. ಆದರೆ ನವ್ಯವಾದದಿಂದ ಪ್ರಾರಂಭವಾದ ಅವರ ನಾಟಕಗಳಲ್ಲಿ ಈ ಬದಲಾವಣೆಯನ್ನು ಸ್ಪಷ್ಟವಾಗಿ ಗುರುತಿಸಬಹುದು.

ಕಾರ್ನಾಡರು ತಮ್ಮ ಮೊದಲ ನಾಟಕದಲ್ಲಿಯೇ, ಕೈಲಾಸಂ ಶ್ರೀರಂಗ ಇವರ ಸಾಮಾಜಿಕ, ವಾಸ್ತವವಾದಿ ಪರಂಪರೆಯಿಂದ ತಾವು ಭಿನ್ನವಾಗಿರುವುದನ್ನು, ಪೌರಾಣಿಕ ವಸ್ತುವಿನ ಆಯ್ಕೆಯಲ್ಲಿಯೇ ಸ್ಪಷ್ಟಪಡಿಸುತ್ತಾರೆ. 'ಯಯಾತಿ'ಯ ವಸ್ತು ಪೌರಾಣಿಕವಾದರೂ ಅದರ ತಾತ್ವಿಕ ತಳಹದಿಪೂರ್ಣ ಆಧುನಿಕವಾದದ್ದು. ಇದು ಪ್ರಭಾವಶಾಲಿಯಾಗಿ ಚಿತ್ರಿತವಾಗುವುದು ಪುರುನ ಪಾತ್ರದಲ್ಲಿ. ಹಾಗಾಗಿ ಈ ನಾಟಕದಲ್ಲಿ ಆತನೇ ಕೇಂದ್ರ ವ್ಯಕ್ತಿಯಾಗುತ್ತಾನೆ. ಈ ನಾಟಕದ ತಾತ್ವಿಕ ಹಿನ್ನೆಲೆಯ ಬಗ್ಗೆ ಡಾ. ಮರುಳಸಿದ್ದಪ್ಪ ಅವರ ಹೇಳಿಕೆ ಇಲ್ಲಿಯ ನವ್ಯವಾದವನ್ನು ಸ್ಪಷ್ಟಗೊಳಿಸುತ್ತದೆ. "ಅಸ್ತಿತ್ವವಾದದ ತಳಹದಿಯ ಮೇಲೆ ಯಯಾತಿ ರೂಪಗೊಂಡಿದೆ. ಮನುಷ್ಯನ ಅಸ್ತಿತ್ವ ಅವನ ಮನುಷ್ಯತ್ವದಲ್ಲಿಲ್ಲ ಅದರ ಅಭಾವದಲ್ಲಿದೆ". ಪುರಾಣದ ಪಾತ್ರಗಳು ಇಲ್ಲಿ ಆಧುನಿಕ ದೃಷ್ಟಿಕೋನದಿಂದಾಗಿ ಹೇಗೆ ಭಿನ್ನವಾಗಿದೆ, ಅವರ ವ್ಯಕ್ತಿತ್ವದ ಅಪೂರ್ಣತೆ ಹಾಗೂ ದುರ್ಬಲತೆ ಹಾಕುವ ಮಿತಿಯನ್ನು ದಾಟಲಾರದೆ ಇಲ್ಲಿಯ ಪಾತ್ರಗಳು ಹೇಗೆ ತೊಳಲಾಡುತ್ತವೆ ಎಂಬುದನ್ನು ಗುರುತಿಸಿ, ಪುರು ಪಾತ್ರದ ಕಲ್ಪನೆಯ ಬಗ್ಗೆ, ಕೀರ್ತಿನಾಥ ಕುರ್ತುಕೋಟಿ ಹೀಗೆನ್ನುತ್ತಾರೆ. 'ಯಯಾತಿ'ಯ ತಾತ್ವಿಕತೆ ಪುರುವಿನ ಪಾತ್ರ ಕಲ್ಪನೆಯಲ್ಲಿ ಅಡಗಿದೆ. ಪುರು ಆಧುನಿಕ ಕಾಲದ ಅನಾಥಪ್ರಜ್ಞೆಯ, ಏಕಾಕಿತನದ ಸಂಕೇತವಾಗಿದ್ದಾನೆ. ಹೀಗೆ ಪೌರಾಣಿಕ ಚೌಕಟ್ಟಿನ ಈ ನಾಟಕದಲ್ಲಿಸಿಗುವ ದರ್ಶನಮಾತ್ರ ಆಧುನಿಕ– ಅಂದರೆ ನವ್ಯವಾದದ ಪ್ರತೀಕ. ಪುರುವಿನ ಕೊನೆಯ ದಿಘ್ಮೋಡದ ಪ್ರಶ್ನೆ "ಇದೆಲ್ಲದರ ಅರ್ಥವೇನು, ದೇವರೇ, ಅರ್ಥವೇನು". ಎಲ್ಲ ನವ್ಯರ ಪ್ರಶ್ನೆಯಾಗುತ್ತದೆ.

ನವ್ಯವಾದ ಕಾಣುವ ಮನುಷ್ಯನ ತೊಳಲಾಟವನ್ನು ಆದರ್ಶ ಹಾಗೂ ವಾಸ್ತವಕ್ಕಿರುವ ಭಿನ್ನತೆಯನ್ನು ಎದುರಿಸಲಾರದೆ, ಹಿಂಸಾರೀತಿಯಲ್ಲಿ ಪರ್ಯಾವಸಾನವಾಗುವ ಸ್ಥಿತಿಯನ್ನು, ಏಕಾಕಿತನದ ಅನುಭವದ ಉತ್ಕಟನೆಯನ್ನು ಅತ್ಯಂತ ಪ್ರಭಾವಶಾಲಿಯಾಗಿ ಚಿತ್ರಿಸಿದ ನಾಟಕ 'ತುಘಲಕ್', ಕನಸುಗಾರರಾಗಿ, ಕವಿಯಾಗಿ, 'ಇತಿಹಾಸವನ್ನೇಬದಲಿಸುತ್ತೇನೆ' ಎಂಬ ತೀರ್ಮಾನದಿಂದ ಹಮ್ಮಿನಿಂದ ಪ್ರಾರಂಭಿಸುವ ತುಘಲಕ ಬಹಳಷ್ಟು ನವ್ಯ ಮನೋಧರ್ಮದವರ ಹಾಗೆ ಆದರ್ಶವಾದಿ ಕೂಡಾ. ಆದರೆ, ಆದರ್ಶಗಳು ವಾಸ್ತವದೊಡನೆ ಘರ್ಷಣೆಯಾದಾಗ, ಅವು ಚೂರು ಚೂರಾಗುತ್ತವೆ. ಅವನೇ ಹೇಳುವ ಹಾಗೆ, 'ನೆಲದಲ್ಲಿ ಬೇರಿಳಿಯುವ ಮೊದಲು, ನಕ್ಷತ್ರಗಳಲ್ಲಿ ಟೊಂಗೆ ಬಿಚ್ಚುವುದಾದರೂ ಹೇಗೆ ಇದಕ್ಕೆ ಉತ್ತರವನ್ನು ಕಾಣಲು ಆತ ತನ್ನ ವ್ಯಕ್ತಿತ್ವದ ಪ್ರತಿರೂಪಗಳ ಜೊತೆ ಘರ್ಷಣೆಗೆ ತೊಡಗುತ್ತಾನೆ ಈ ನಾಟಕದ ಅದ್ಭುತ ತಾಂತ್ರಿಕ ಯಶಸ್ಸುಗಳಲ್ಲಿ ಒಂದು ಎಂದರೆ ತುಘಲಕ್ ಎದುರಿಸುವ ಕೊಲ್ಲುತ್ತ ಸಾಗುವ ಪಾತ್ರಗಳೆಲ್ಲ ಆತನ ವ್ಯಕ್ತಿತ್ವದ ವಿವಿದ ರೂಪಗಳೆ ಅವನ ತಂದೆ ತಮ್ಮ ಶೇಖ ಇಮಾಮುದ್ದೀನ ಶಿಹಾಬ ಮಲತಾಯಿ ಇವರನ್ನೆಲ್ಲ ಕೊಲ್ಲುತ್ತ ಹೋದ ಹಾಗೆ ಆತ ತನ್ನ ವ್ಯಕ್ತಿತ್ವದ ಒಂದೊಂದೆ ಅಂಶವನ್ನು ಕೊಂಡುಕೊಳ್ಳುತ್ತ ಹೋಗುತ್ತಾನೆ ಆಗ ಆತನ ಬಳಿ ಉಳಿಯುವುದು ಬರಿ ಹಿಂಸೆ ಮತ್ತು ಅದು ಕೊಡುವ ವಿಚಿತ್ರ ಸುಖ ಮಾತ್ರ ಕೊನೆಗೆ ಅವನು ಕೊಲ್ಲದೆ ಉಳಿಯುವ ಪ್ರತಿರೂಪ ಎಂದರೆ ಆಝೀಝು–ಎಲ್ಲ ರೀತಿಯ ಅದರ್ಶ ಕಲ್ಪನೆಗಳಿಂದ ಹೊರತಾದ ಸ್ವಾರ್ಥ ಸಿನಿಕತನ ತುಂಬಿ ತೊಘಲಕ್‌ನ ರೂಪ ಬೆತ್ತಲಾದ ಅವನ ಈ ರೂಪ ಎಷ್ಟು ಭಯಾನಕವಾಗಿದೆ ಎಂದರೆ ಕೊನೆಗೆ ಆತ ನಂಬಿದ ಎಲ್ಲ ಆದರ್ಶಗಳು ವ್ಯಕ್ತಿಗಳು (ಎಂದರೆ ಆತನ ವ್ಯಕ್ತಿತ್ವದ ವಿವಿಧ ಅಂಶಗಳು) ಕಾವ್ಯಮಯತೆ ಧರ್ಮ ಎಲ್ಲ ಕೈ ಬಿಟ್ಟು ಕೊನೆಗೆ ಅವನು ಏಕಾಕಿ ಹಾಗೂ ಅತಂತ್ರನಾಗುತ್ತಾನೆ ಈ ಏಕಾಕಿತನ ನವ್ಯ ಸಾಹಿತ್ಯದ ಪ್ರಮುಖ ಅಂಶಗಳ್ಳಲ್ಲೊಂದು ಹಲವಾರು ಕವನ ಕಾದಂಬರಿಗಳಲ್ಲಿ ಬಂದಿದ್ದರು ಅದು ಅತ್ಯಂತ ಸಮರ್ಥವಾಗಿ ಅಬಿವ್ಯಕ್ತಿಯಾಗಿರುವುದು ತೊಘಲಕನ ಕೊನೆಯಲ್ಲಿ ಇದಕ್ಕೆ ಕಾರಣವನ್ನು ಪ್ರಸನ್ನ ಹೀಗೆ ಗುರುತಿಸಿದ್ದಾರೆ. ಕನ್ನಡದ ವ್ಯಕ್ತಿ ಅತಂತ್ರನಾಗುವುದು ಹಾಗೂ ಒಂಟಿಯಾಗುವುದು ಅವನ ನಂಬಿಕೆ ಹಾಗೂ ಭಕ್ತಿಯ ಕೊಂಡಿ ಕಳಚಿದಾಗ, ಅದು ಹಾಗಾಗಲಿ ಎಂದು ಹಪಹಪಿಸಿದಾಗ ಅಲ್ಲ. ನಮ್ಮ ಹೆಚ್ಚಿನ ನವ್ಯ ಲೇಖರಿಗೆ ಹಾಗೂ ಅವರ ನಾಯಕರುಗಳಿಗೆ ಒಂಟಿತನದ ಪ್ರಲಾಪ ನಡೆಸಿದ್ದಾನೆ ನಂಬಿಕೆ ನಿಜವಾಗಿ ಕಳಚಿರಲಿಲ್ಲ. ದೈವ ಕೈ ಬಿಟ್ಟಿರಲಿಲ್ಲ. ತುಘಲಕ್‌ನಿಂದ ದೈವ ಕೈ ಬಿಡುತ್ತದೆ. ತನ್ನ ಅಂಗಿಯ ಅಂಚನ್ನು ಕೊಡವಿ, ಹಿಡಿದು ಅಲ್ಲಾಡುತ್ತಿದ್ದವನನ್ನು ಅತಂತ್ರತೆಯ ಕೂಪಕ್ಕೆ ತಳ್ಳುತ್ತದೆ ತುಘಲಕ್‌ನ ದೈವ.

ಕಾರ್ನಾಡರ ನಾಟಕಗಳಲ್ಲಿ ಕಾಣುವ ಮುಖ್ಯ ವಸ್ತುಗಳಲ್ಲೊಂದಾದ ಗಂಡು–ಹೆಣ್ಣಿನ ಸಂಬಂಧವನ್ನು ನವ್ಯದ ದೃಷ್ಟಿಕೋನದಲ್ಲೇ ಅಭ್ಯಸಿಸುವ ನಾಟಕಗಳು 'ಹಿಟ್ಟಿನಹುಂಜ' ಮತ್ತು 'ಅಂಜುಮಲ್ಲಿಗೆ' ಈ ಎರಡೂ ನಾಟಕಗಳಲ್ಲಿ ಇಂದು ಸಾಮ್ಯತೆಯನ್ನು ಗಮನಿಸಬಹುದು. 1966 ಬರೆದು 'ಸಾಕಷ್ಟು ಬದಲಾವಣೆಗಳೊಂದಿಗೆ 1980ರಲ್ಲಿ 'ಹಿಟ್ಟಿನಹುಂಜ' ಪ್ರಕಟವಾದರೆ, 1977 ರಲ್ಲಿ ಒಮ್ಮೆ ಪ್ರಕಟವಾಗಿ ಕಾರ್ನಾಡರೇ ಹೇಳಿದಂತೆ 'ಅಮೂಲಾಗ್ರವಾಗಿ ತಿದ್ದಿದ; ಆವೃತ್ತಿ 1989ರಲ್ಲಿ ಪ್ರಕಟವಾಯಿತು. 'ಹಿಟ್ಟಿನಹುಂಜ' ದ ಕತೆ ಜೈನಪುರಾಣವನ್ನು ಆಧರಿಸಿದ್ದರೆ, 'ಅಂಜುಮಲ್ಲಿಗೆ' ಸಮಕಾಲೀನ ಕತೆಯನ್ನು ನಾಟಕವನ್ನಾಗಿಸಿದೆ. ಗಂಡುಹೆಣ್ಣಿನ ಸಂಬಂಧ ಕನ್ನಡನವ್ಯ ಸಾಹಿತ್ಯದ ಪ್ರಮುಖ ವಸ್ತುಗಳಲ್ಲಿ ಒಂದು. ಆದರೆ ಪ್ರೇಮಕ್ಕಿಂತ ಕಾಮ, ಮುಗ್ಧತೆಗಿಂತ ಸಾಮಾಜಿಕವಾಗಿ ಬಹಿಷ್ಕೃತವಾದಂಥ ಲೈಂಗಿಕ ಸಂಬಂಧಗಳು, ಮುಚ್ಚಿಟ್ಟಿದ್ದನ್ನು ಬಿಚ್ಚಿ ಬೆತ್ತಲಾಗಿಸುವಿಕೆಯತ್ತ ನವ್ಯ ಲೇಖಕರು ಸಾಗಿರುವುದನ್ನು ಕಾಣಬಹುದು. 'ಹಿಟ್ಟಿನಹುಂಜ'ದಲ್ಲಿ ರಾಣಿ ಹಾಗೂ ಮಾವುತನಸಂಬಂಧ ಅಂಥದ್ದಾದರೆ,

ಅಂಜುಮಲ್ಲಿಗೆ'ಯಲ್ಲಿ ಅಕ್ಕ ತಮ್ಮನ ಲೈಂಗಿಕ ಸಂಬಂಧ Incest ನಾಟಕದ ವಸ್ತುವಾಗಿದೆ. 'ಹಿಟ್ಟಿನಹುಂಜ'ದಲ್ಲಿ ಕಾಮದಿಂದ ಕಾರ್ನಾಡರ ಮುಖ್ಯ ಕಾಳಜಿಗಳಲ್ಲೊಂದಾದ ಹಿಂಸೆಯ ಇನ್ನೊಂದು ಮುಖದ ಅನಾವರಣವನ್ನೂ ಕಾಣುತ್ತೇವೆ. 'ಅಂಜುಮಲ್ಲಿಗೆ'ಯ ವಸ್ತು ಸಮಕಾಲೀನ ಆದರೆ ಘಟನೆಗಳು ನಡೆಯುವುದು ದೂರದ ಇಂಗ್ಲೆಂಡಿನಲ್ಲಿ. ವರ್ಣ, ವರ್ಗ ಸಂಘರ್ಷದ ಹಿನ್ನೆಲೆಯಲ್ಲಿ, ಹೆಣ್ಣು ಗಂಡಿನ ಸಂಬಂಧವನ್ನು ಶೋಧಿಸುವ ಈ ನಾಟಕದಲ್ಲಿ ಭೂತದ ಅನುಭವಗಳು, ಬಾಲ್ಯದ ನೆನಪು ಒಂದು ರೋಗವಾಗಿ ಕಾಣುತ್ತದೆ. ಯಾಮಿನಿಯ ಈ ಹೇಳಿಕೆ ನೋಡಿ, "ಬಾಲ್ಯ ಒಂದು ರೋಗ... ಕೆಲವರು–ಪುಣ್ಯವಂತರು–ಗುಣ ಆಗುತ್ತಾರೆ. ತಪ್ಪಿಸಿಕೋತಾರೆ. ನನ್ನಂತವರಿಗೆ ಮಾತ್ರ ಅದು ಹಾಗೇ ಉಳೀತದೆ. ಕೊಳೀತದೆ. ಕೀವಾಗುತ್ತದೆ. ನವ್ಯದ ನೆಲೆಯಲ್ಲೆ ಪ್ರೇಮ, ಕಾಮದ ಪ್ರಶ್ನೆಯನ್ನು ಶೋಧಿಸುವ ಈ ನಾಟಕದಲ್ಲಿ, ಆರೋಗ್ಯಕರವಾದ ಸಂಬಂಧ ಯಾರಿಗೂ ಸಾಧ್ಯವಾಗುವುದಿಲ್ಲ.

ನವ್ಯದಿಂದ ಭಿನ್ನವಾದಂತಹ ಬೇರೊಂದು ದರ್ಶನದ ಶೋಧನೆ ಪ್ರಾರಂಭವಾಗುವುದು 'ಹಯವದನ'ದಲ್ಲಿ. ಆಧುನಿಕೋತ್ತರ ಧಾಟಿಯ 'ಹಯವದನ'ದ ರಚನೆ ನವ್ಯದ ಭರಾಟೆಯ ಕಾಲದಲ್ಲಿಯೇ ಆದದ್ದು ಒಂದು ವಿಶೇಷ. ನಾಟಕದ ಕತೆ ಹಾಗೂ ತಾಂತ್ರಿಕ ಚೌಕಟ್ಟನ್ನು ಜಾನಪದ ಮೂಲದಿಂದ ತೆಗೆದುಕೊಂಡು ತಮ್ಮ ಬರವಣಿಗೆಗೆ ಹೊಸ ಆಯಾಮವೊಂದನ್ನು ನಿರ್ಮಿಸಿಕೊಳ್ಳುತ್ತಾರೆ ಕಾರ್ನಾಡ್. ಅಪರಿಪೂರ್ಣತೆ ನಾಟಕದ ವಸ್ತು. ಆದರೆ ಅದನ್ನು ವಿಶ್ಲೇಷಿಸುವ ವಿಧಾನ ಇಲ್ಲಿ ಪೂರ್ಣ ಭಿನ್ನ. ದೇವರಿಂದ ಹಿಡಿದು, ಮನುಷ್ಯ, ಪ್ರಾಣಿ ಈ ಎಲ್ಲ ಸ್ತರಗಳಲ್ಲಿ ಈ ಸಮಸ್ಯೆಯನ್ನು ವಿಶ್ಲೇಷಿಸುತ್ತದೆ ಈ ನಾಟಕ, ಮನುಷ್ಯ ಕೇಂದ್ರಿತ ನವ್ಯವಾದದಿಂದ ಭಿನ್ನವಾಗಿ ಪ್ರಾಣಿ ಮನುಷ್ಯ, ದೇವತೆಗಳು ಎಲ್ಲ ಇಲ್ಲಿ ಒಂದಾಗುತ್ತಾರೆ. ಗಂಭಿರವಾದುದನ್ನು ತಮಾಷೆಯಾಗಿ ನೋಡುವ, ಜನಪ್ರಿಯ ಹಾಡು ಗಂಭೀರ ಇವೆರಡನ್ನು ಒಂದುಗೂಡಿಸುವ ಪ್ರಯತ್ನ ಆಧುನಿಕೋತ್ತರ ಸಾಹಿತ್ಯದಲ್ಲಿ ಬಂದು ಮುಖ್ಯ ಹೊಳಹುಗಳಲ್ಲಿ ಒಂದು. ಈ ರೀತಿಯ ವಿಧಾನ ಹೊಸತಾಗಿ ಬಂದಾಗ ಕೆಲವು ಪ್ರಶ್ನೆಗಳನ್ನು ನಮ್ಮಲ್ಲಿ ಎಬ್ಬಿಸುವುದು ಸಹಜ. ಉದಾಹರಣೆ 'ಹಯವದನ'ದ ಬಗ್ಗೆ ಅನಂತಮೂರ್ತಿಯವರು ಎತ್ತುವ ಈ ಪ್ರಶ್ನೆಯನ್ನು ನೋಡಿ, "ಗಂಭೀರವಾದಂಥ ಅಪೂರ್ಣತೆಯಂಥ ಸಮಸ್ಯೆಯೊಂದನ್ನು ನಗಿಸುತ್ತ ರಂಜಿಸುತ್ತ ಆರಾಮಾಗಿ ಯೋಚಿಸಲು ಪ್ರಚೋದಿಸುತ್ತ ಲೇಖಕ ನಮ್ಮೆದುರು ಇರುವುದರಿಂದ ನಾವು ಎಷ್ಟು ತಲೆಕೆಡಿಸಿಕೊಂಡು 'ಹಯವದನ' ಓದಬೇಕು, ನೋಡಬೇಕು? ತರ್ಕ ಹಾಗೂ ವಿಚಾರವಾದದ ಮಿತಿಯಿಂದ ಹೊರಬರಲು ಫ್ಯಾಂಟಸಿಯ ಮಾರ್ಗವನ್ನು ಅನುಸರಿಸುವ ಕಾರ್ನಾಡರು, ತಲೆಯ ಅದಲು ಬದಲು ಸಾಧ್ಯವೆ? ಕುದುರೆ ಮನುಷ್ಯನಂತೆ ಮಾತನಾಡಲು ಸಾಧ್ಯವೆ? ಮುಂತಾದ 'ವಾಸ್ತವವಾದಿ' ಪ್ರಶ್ನೆಗಳಿಗೆ ಅವಕಾಶ ನೀಡುವುದಿಲ್ಲ, ಶೈಲೀಕೃತ ನಟನಾ ತಂತ್ರ, ಹಾಡು ನೃತ್ಯ ಇವುಗಳ ಮೂಲಕ, ವಾಸ್ತವವಾದಿ ಧೋರಣೆಯಿಂದ ಬಡವಾಗಿದ್ದ ನಮ್ಮ ರಂಗಭೂಮಿಗೆ ಹೊಸ ಚೈತನ್ಯವನ್ನು ತುಂಬಿ ಹೊಸ ದಿಕ್ಕನ್ನ ಈ ನಾಟಕ ಸೂಚಿಸಿತು. ಇಷ್ಟಾದರೂ ನವ್ಯದ ಪರಿಕಲ್ಪನೆಗಳಿಂದ ಪೂರ್ತಿಯಾಗಿ ಹೊರಬರಲು ಈ ನಾಟಕದಲ್ಲಿ ಸಾಧ್ಯವಾಗಿಲ್ಲವೇನೋ ಎಂದು ಕೆಲವು ಕಡೆ ಅನ್ನಿಸುತ್ತದೆ. ಉದಾಹರಣೆಗೆ ಕಾಳಿ ವರ ನೀಡುವ ಸನ್ನಿವೇಶ. ತಾರ್ಕಿಕತೆಗೆ ಪೂರ್ಣವಾಗಿ ವಿರುದ್ಧವಾದ ಈ ಸನ್ನಿವೇಶವನ್ನು ನಾಟಕಕಾರರು ವ್ಯಂಗ್ಯದ ಮೂಲಕ, ಕಾಳಿಯನ್ನು ನಿದ್ದೆ ಹೊಡೆಯುತ್ತಿರುವ, ಆಕಳಿಸುತ್ತ ವರ ಕೊಡುವ ರೀತಿಯಲ್ಲಿ ವ್ಯಂಗ್ಯವೇ ಪ್ರಧಾನವಾಗಿರುವಂತೆ ಚಿತ್ರಿಸಿ ನಿಭಾಯಿಸುತ್ತಾರೆ. ನಾಟಕದ ಒಟ್ಟು ಧ್ವನಿಯೂ ಕೂಡಾ ಪರಿಪೂರ್ಣತೆಯ ಹಂಬಲವನ್ನೆ ವ್ಯಂಗ್ಯವಾಗಿ ನೋಡುವಂತೆ ತೋರುತ್ತದೆ.

‘ನಾಗಮಂಡಲ’ ಕೂಡಾ ಜಾನಪದ ಕತೆಯೊಂದನ್ನು ಆಧರಿಸಿದ್ದು, ಕತೆ ಹೇಳುವ ಕ್ರಿಯೆಯನ್ನೆ ನಾಟಕದ ಚೌಕಟ್ಟನ್ನಾಗಿ ನಾಟಕಕಾರರು ಉಪಯೋಗಿಸಿದ್ದಾರೆ. ಇದರಿಂದ, ಮುಂದೆ ನಾವು ನೋಡಲಿರುವುದು ಬರಹಗಾರನ ಸೃಷ್ಟಿ ಒಂದು ರಂಗಕ್ರಿಯೆ ಎಂದು ಸ್ಪಷ್ಟಪಡಿಸುವ ಮೂಲಕ ವಾಸ್ತವದ ಭ್ರಮೆಯನ್ನು ಪೂರ್ಣವಾಗಿ ತೊಡೆದು ಹಾಕುತ್ತಾರೆ. ಹಾಗಾಗಿ ಹಾವು ಮನುಷ್ಯನಾಗುವ ಕ್ರಿಯೆಯಾಗಲಿ, ಕತೆಯೇ ಪಾತ್ರವಾಗಿ ಬರುವ ಸನ್ನಿವೇಶಕ್ಕಾಗಲಿ, ಯಾವುದೇ ರೀತಿಯ ವಿವರಣೆ ಅಥವಾ ಕಾರಣ ಕೊಡುವ ಅವಶ್ಯಕತೆ ಬೀಳುವುದಿಲ್ಲ. ಗಂಡು ಹೆಣ್ಣಿನ ಸಂಬಂಧವೇ ಇಲ್ಲಿಯ ಪ್ರಮುಖ ವಸ್ತು. ಗಂಡನಲ್ಲಿ ಕಾಣಲಾಗದ ಪ್ರೀತಿಯನ್ನು ರಾಣಿ ನಾಗಪ್ಪನಿಂದ ಪಡೆಯುತ್ತಾಳೆ. ನಾಗರ ಹಾವಿನ ದಿವ್ಯದ ನಂತರ ಅಣ್ಣಪ್ಪನಲ್ಲಿ ಬದಲಾವಣೆಯಾದರೂ ರಾಣಿಯ ಬಗ್ಗೆ ಮೂಡುವುದು ಪ್ರೀತಿಯಲ್ಲ ಭಕ್ತಿ. ಆದರೆ ಈ ನಾಟಕ ‘ಹಯವದನ’ದ ರಂಗಗುಣವನ್ನಾಗಲಿ, ‘ತುಘಲಕ್’ನ ತೀಕ್ಷತೆಯನ್ನಾಗಲಿ ಪಡೆಯುವಲ್ಲಿ ವಿಫಲವಾಗುತ್ತದೆ.

‘ತುಘಲಕ್’ನಂತೆ ಐತಿಹಾಸಿಕ ವಸ್ತುವನ್ನು ಆಧರಿಸಿದ ನಾಟಕ ‘ತಲೆದಂಡ’ ಅಂತೆಯೆ ಮಹತ್ವಾಕಾಂಕ್ಷೆ ಉಳ್ಳನಾಟಕ ಕೂಡಾ. ವಾಸ್ತವತೆಯ ದಾರಿಯಲ್ಲೆ ಇರುವ ಈ ನಾಟಕದಲ್ಲಿ ಮೇಲುನೋಟಕ್ಕೆ ‘ತುಘಲಕ್’ನಂತೆ ನವ್ಯವಾದದ ದರ್ಶನವೇ ಇರುವಂತೆ ಕಂಡರೂ, ಮೂಲಭೂತವಾಗಿ ಇಲ್ಲಿ ಇತಿಹಾಸವನ್ನು ನೋಡುವ ದೃಷ್ಟಿಯೆ ಬದಲಾಗಿದೆ. ‘ತುಘಲಕ್’ನಲ್ಲಿ ಅವನೆ ಅಥವಾ ಪ್ರತಿರೂಪಗಳಾದ ಇತರೆ ಪಾತ್ರಗಳೆ ಎಲ್ಲ ಘಟನಾ ಚಕ್ರಗಳಿಗೆ ಕಾರಣರಾಗುತ್ತಾರೆ. ದಿಲ್ಲಿಯ ಜನಸಾಮಾನ್ಯರ ಪಾತ್ರ ತೀರಾ ಗೌಣ. ಅವರು ಇರುವಂತಹ ದೃಶ್ಯಗಳಲ್ಲಿ ಕೂಡಾ ಕಾಣುವುದು ಅವರ ನಿಸ್ಸಹಾಯಕತೆ (ಮೊದಲನೆ ದೃಶ್ಯ) ಅಥವಾ ಅವರ ನೋವು ಸಂಕಟ (ದಿಲ್ಲಿಯಿಂದ ದೌಲತಾಬಾದಿಗೆ ಹೋಗುವ ದೃಶ್ಯ) ಮಾತ್ರ. ಇದಕ್ಕೆ ವಿರುದ್ಧವಾಗಿ ‘ತಲೆದಂಡ’ದಲ್ಲಿ, ಶರಣರ ಗುಂಪು ಘಟನಾವಳಿಗಳನ್ನು ನಿಯಂತ್ರಿಸುವ ಒಂದು ಪ್ರಬಲ ಶಕ್ತಿಯಾಗುತ್ತದೆ. ಭಂಡಾರಕ್ಕೆ ಇವರು ಹಾಕಿದ ಮುತ್ತಿಗೆ ಒಂದು ಉದಾಹರಣೆಯಾಗುತ್ತದೆ. ಬಸವಣ್ಣ ಇತಿಹಾಸದ ಸೃಷ್ಟಿಕಾರಕನಾಗಿದ್ದೂ, ಅವನು ಹುಟ್ಟು ಹಾಕಿದ ಶಕ್ತಿಗಳು ಅವನನ್ನು ಮೀರಿ ನಡೆಯುತ್ತವೆ. ಹೀಗೆ ಇತಿಹಾಸದ ಬೆಳವಣಿಗೆಯಲ್ಲಿ ಕೆಲವು ವ್ಯಕ್ತಿ ಪ್ರೇರಿತ ಶಕ್ತಿಗಳಷ್ಟೇ ಅಲ್ಲದೇ, ಇಡೀ ಸಮಷ್ಟಿಯ ಶಕ್ತಿಯನ್ನು ಗುರುತಿಸುವುದರಲ್ಲಿ ಈ ನಾಟಕ ‘ತುಘಲಕ್’ಗಿಂತಭಿನ್ನವಾಗುತ್ತದೆ. ಹಾಗೆಯೆ ರಾಜಕೀಯ ಬೆಳವಣಿಗೆಯೆ ಹಿಂದೆ ಕೆಲಸಮಾಡುತ್ತಿರುವ ಆರ್ಥಿಕ, ಸಾಮಾಜಿಕ, ಧಾರ್ಮಿಕಶಕ್ತಿಗಳನ್ನೂ ಇಲ್ಲಿ ಕಾರ್ನಾಡರು ಗುರುತಿಸುತ್ತಾರೆ. ಕಲ್ಯಾಣದ ಕ್ರಾಂತಿಯಿಂದ ಹೇಗೆ ಇಡೀ ದೇಶವೇ ಆರ್ಥಿಕವಾಗಿ ಸಂಪದ್ಭರಿತವಾಗಿದೆ. ವ್ಯಾಪಾರಸ್ಥರೆಲ್ಲ ಶರಣರಿಗೆ ಏಕೆ ಉದಾರವಾಗಿ ದೇಣಿಗೆ ಕೊಡುತ್ತಾರೆ ಎಂಬ ಬಗ್ಗೆಯೂ ನಾಟಕದಲ್ಲಿ ವಿವರಗಳು ದೊರಕುತ್ತವೆ. ಕಾಯಕದ ತತ್ವವನ್ನೊಪ್ಪಿದ ಶರಣರು ಹೇಗೆ ಇಡೀ ದೇಶದ ಸಮೃದ್ಧಿಗೆ ಕಾರಣವಾದರೂ ಎಂಬುದು ಅವರಿಗೆ ಮುಖ್ಯವಾಗುತ್ತದೆ.

ಇತಿಹಾಸವನ್ನು ಈ ರೀತಿಯಲ್ಲಿ ಪರಿಪೂರ್ಣ ದೃಷ್ಟಿಯಿಂದ ನೋಡುವುದರಲ್ಲಿ, ಸಮಷ್ಟಿಯ ಪಾತ್ರವನ್ನು ಪರಗ್ರಹಿಸುವುದರಲ್ಲಿ, ಆಧುನಿಕೋತ್ತರ ಆಶಯಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಇಷ್ಟಿದ್ದೂ ನವ್ಯವಾದದ ಹಲವಾರು ಅಂಶಗಳೂ ಈ ನಾಟಕದಲ್ಲಿ ಪ್ರಬಲವಾಗಿಯೇ ಮೂಡಿ ಬರುತ್ತವೆ. ಉದಾಹರಣೆಗೆ ಇಲ್ಲಿ ಬರುವ ಪವಾಡಗಳನ್ನು ಪವಾಡವನ್ನಾಗಿಯೇ ಚಿತ್ರಿಸುವುದಕ್ಕೆ ಬಹುಶಃ ಅವರ ತಾರ್ಕಿಕ ಮನೋಧರ್ಮ ಅಡ್ಡಿಬರುತ್ತದೆ. ಹಾಗಾಗಿ, ‘ನಾಗಮಂಡಲ’ದಂತೆ ಇಲ್ಲಿ ಕೂಡಾ ಪವಾಡಗಳನ್ನು ರ್‍ಯಾಶನಲ್ ಆಗಿಸುವಪ್ರಯತ್ನ ಮಾಡುತ್ತಾರೆ. ಆದರೆ ಪವಾಡಗಳನ್ನು ಪೂರ್ಣವಾಗಿ ನಿರಾಕರಿಸುವ ತೀಕ್ಷ್ಣ ನವ್ಯ ಮನೋಧರ್ಮವೂ ನಾಟಕಕಾರದಲ್ಲ.

ಹಾಗೆಯೇ, ಕಲ್ಯಾಣದ ಕ್ರಾಂತಿಯ ಸಾಮಾಜಿಕ ಮೌಲ್ಯಗಳು ಸಮರ್ಥವಾಗಿ ಮೂಡಿಬಂದ ಹಾಗೆ, ಭಕ್ತಿಯ ಅನುಭವಿ ಅಂಶ ಮೂಡುವುದಿಲ್ಲ. ಅನಂತಮೂರ್ತಿ ಹೇಳುವ ಹಾಗೆ ಭಕ್ತಿ ಭಾವದ ಸಂಪೂರ್ಣ ಶರಣಾಗತಿಯನ್ನು, 'ಸಾಕ್ಷಾತ್ಕಾರವನ್ನು' ಆಧುನಿಕ ಮನೋಧರ್ಮದ ಲೇಖಕನಿಗೆ ಆಧುನಿಕೋತ್ತರ ಯುಗದಲ್ಲಿಯೂ ಅರ್ಥ ಮಾಡಿಕೊಳ್ಳುವುದು ಕಷ್ಟಸಾಧ್ಯವಾಗುತ್ತದೆ.

ಆಧುನಿಕೋತ್ತರವಾದುದವನ್ನು ಪ್ರಬಲವಾಗಿ ಮಂಡಿಸುತ್ತಲೇ ನವ್ಯವಾದದ ಕೆಲವು ಅಂಶಗಳನ್ನೂ ಈ ನಾಟಕಗಳಲ್ಲಿ ಕಂಡರೆ, ಕಾರ್ನಾಡರ ಈಚಿನ ನಾಟಕ 'ಅಗ್ನಿ ಮತ್ತು ಮಳೆ' ಯನ್ನು ನವ್ಯವಾದ ಹಾಗೂ ಆಧುನಿಕೋತ್ತರವಾದದ ಮುಖಾಮುಖಿ ಎಂದು ಕೂಡಾ ನೋಡಬಹುದು. ಬದುಕಿನ ಎರಡು ರೀತಿಗಳನ್ನು ಈ ನಾಟಕ ಚಿತ್ರಿಸುತ್ತದೆ. ಒಂದೆಡೆ ಯಜ್ಞ ವೇದಘೋಷ, ಬ್ರಾಹ್ಮಣತ್ವ ಇತ್ಯಾದಿ. ಯಜ್ಞವೂ ಕೂಡಾ ಒಂದು ವೈಜ್ಞಾನಿಕ ಪ್ರಕ್ರಿಯೆ ಹಾಗೆ, ಮಶೀನಿನ ಹಾಗೆ, ಇಂತಿಂಥ ರೀತಿಯಲ್ಲಿ ಮಂತ್ರಗಳನ್ನು ಹೇಳಿ, ಹವಿಸ್ಸು ಇತ್ಯಾದಿ ನೀಡಿದರೆ, ತೀರ್ಮಾನವಾದ ಫಲಗಳು ಸಿದ್ಧಿಸಲೇಬೇಕು. ದೇವರುಗಳು ಕೂಡಾ ಈ ಪ್ರಕ್ರಿಯೆಯಿಂದ ಹೊರತಲ್ಲ. ಅಂದರೆ, ಈ ಕ್ರಿಯೆ ಕೂಡಾ ಆಧುನಿಕ ಮನೋಧರ್ಮದ ಪ್ರತೀಕ. ಆದರೆ, ಇದರಲ್ಲಿ ತೊಡಗಿದ ವ್ಯಕ್ತಿಗಳು ಮಾತ್ರ ಮಾನವೀಯ ಗುಣಗಳೆಲ್ಲ ಸತ್ತುಹೋದ, ತುಚ್ಛಕಾಮುಕತೆ, ಹೊಟ್ಟೆಕಿಚ್ಚು ಇತ್ಯಾದಿಗಳಿಂದ ನರಳುವ ರೈಭ್ಯ ಪರಾವಸು, ಯವಕ್ರೀತ ಇವರುಗಳು. ಇವರ ಕಾಮನೆಗಳಿಗೆ ಸಿಕ್ಕು ಬಾಳು ನಾಶವಾದವಳು ವಿಶಾಖಾ. ಇದು ಬದುಕಿನ ಒಂದು ರೂಪವಾದರೆ, ಇವುಗಳನ್ನು ತೊರೆದು ಬಂದ ಅರವಸು, ನಿತ್ತಿಲೆ, ನಿಷಾದರು, ಜಾತಿಗಾರ ಇವರದು ಇದಕ್ಕೆ ಪರ್ಯಾಯವಾದ ರೀತಿ, ವೇದದ ದೇವರ ಕಲ್ಪನೆ ನಿತ್ತಿಲೆಗೆ ಒಪ್ಪಿಗೆಯಾಗುವುದಿಲ್ಲ. 'ಎಷ್ಟು ವೈಯಾರ ಆ ದೇವರದು' ಎಂದು ಅವಳ ಪ್ರಶ್ನೆ ಅವಳಿಗೆ ಗೊತ್ತಿರುವ, ಅರ್ಥವಾಗುವ ದೇವರು ಎಂದರೆ ಎಲ್ಲರ ಕಣ್ಣೆದುರಿಗೆ ಮಂತ್ರವಾದಿಯ ಮೈಮೇಲೆ ಬಂದು, ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡುವ ದೈವ. ಬ್ರಹ್ಮಜ್ಞಾನ ಸಾಧಿಸಿದ ಯವಕ್ರೀತ ನಾಡಿಗೆ ಅಗತ್ಯವಾದ ಮಳೆಯನ್ನೇಕೆ ಬೇಡಲಿಲ್ಲ ಎಂಬುದು ಅವಳ ಪ್ರಶ್ನೆ. ಇದಕ್ಕೆ ನಿಜವಾದ ಉತ್ತರ ಅಂಧಕನ ಬಳಿಯೂ ಇಲ್ಲ, ಯವಕ್ರೀತನ ಹೋರಾಟಕ್ಕೂ ಬಲಿಯಾಗುತ್ತಾಳೆ. ಕೊನೆಗೆ ಅವನ ವಿನಾಶಕ್ಕೂ ಅವಳೇ ಕಾರಣಳಾಗುತ್ತಾಳೆ. ಇದಕ್ಕೆ ವಿರುದ್ಧವಾಗಿ ನಿತ್ತಿಲೆ ಮುಗ್ಧ ಪ್ರೇಮಕ್ಕೆ ತ್ಯಾಗಕ್ಕೆ ಸಂಕೇತವಾಗುತ್ತಾಳೆ. ನಾಟಕದಲ್ಲಿ ಅಂತ್ಯದಲ್ಲಿ ಬರುವ ಮಳೆ ಇಲ್ಲಿ ನಡೆಯುವ ಪವಾಡ. ಇದಕ್ಕೆ ಯಾವುದೇ ರೀತಿಯ ತಾರ್ಕಿಕ ಕಾರಣಗಳನ್ನು ಹುಡುಕುವ ಪ್ರಯತ್ನ ಮಾಡದೇ, ಅವರ ಸಾಂಕೇತಿಕ ಅರ್ಥವನ್ನು ಗ್ರಹಿಸುವ ಜವಾಬ್ದಾರಿಯನ್ನು, ನಾಟಕಕಾರರು, ಓದುಗರಿಗೆ, ಪ್ರೇಕ್ಷಕರಿಗೆ ಬಿಡುತ್ತಾರೆ. ಇದು ನಾಟಕದ ಒಂದು ಮುಖ ಪಾತ್ರ. ವಿವಿಧ ವಸ್ತುಗಳು, ಅರ್ಥಗಳು ಈ ನಾಟಕದಲ್ಲಿ ಎಷ್ಟು ದಟ್ಟವಾಗಿವೆ ಎಂದರೆ ಎಷ್ಟೋ ಬಾರಿ ನಾಟಕದ ಕೇಂದ್ರ ಬಿಂದುವನ್ನು ಹುಡುಕುವುದೇ ಕಷ್ಟವಾಗುತ್ತದೆ.

ಒಟ್ಟಿನಲ್ಲಿ ನವ್ಯವಾದದಿಂದ, ರ್‍ಯಾಶನಲಿಸ್ಟ್ ಮನೋಭಾವದಿಂದ ಪ್ರಾರಂಭವಾಗುವ ಕಾರ್ನಾಡರ ಬರಹಗಳು, ಆಧುನಿಕೋತ್ತರವಾದದತ್ತ ತರ್ಕಕ್ಕೆ ಹೊರತಾದ, ಮೀರಿದ ಜೀವನ ದರ್ಶನವನ್ನು ಹಿಡಿಯುವತ್ತ ಸಾಗುತ್ತಿರುವುದನ್ನು ಕಾಣಬಹುದು. ಇದಕ್ಕೆ ಪೂರಕವಾಗಿ ಭಾಷೆಯ ಉಪಯೋಗದಲ್ಲಿ ಸಹಿತ ಆದ ಬದಲಾವಣೆಗಳನ್ನು ಗಮನಿಸಬಹುದು. ಭಾಷೆ ಬರಿ ಸಂವಹನ ಮಾಧ್ಯಮವಾಗಿ ಅವರಿಗೆ ಕಾಣಿಸಿಕೊಳ್ಳುವುದಿಲ್ಲ. ಅವರ ಈಚಿನ ನಾಟಕಗಳಲ್ಲಿ ಭಾಷೆಯೇ ಹೇಗೆ ನಮ್ಮ ಆಲೋಚನಾಕ್ರಮವನ್ನು, ಜೀವನ ದೃಷ್ಟಿಯನ್ನು ನಿಯಂತ್ರಿಸುತ್ತದೆ. ಅದರ ವಿವಿಧ ಧ್ವನಿಗಳು ಹೇಗೆ ನಮ್ಮ ವರ್ಗವನ್ನ, ವರ್ಣವನ್ನ, ಅಧಿಕಾರಸ್ತರವನ್ನ ಸೂಚಿಸುತ್ತದೆ ಎಂಬುದನ್ನು ಕಾಣಬಹುದು. ಉದಾಹರಣೆಗೆ,

**'ತಲೆದಂಡ'**ದಲ್ಲಿ ಬಿಜ್ಜಳ ಮಾತನಾಡುವ **'ಆಡುಕನ್ನಡ'**ದ ವೈಶಿಷ್ಟತೆಯನ್ನು ಈಗಾಗಲೇ ಹಲವರು ಗುರುತಿಸಿದ್ದಾರೆ. ಹಾಗೆಯೇ ನಿತ್ತಿಲೆಯ, ಅಂಧಕನ ಮಾತುಗಳಲ್ಲಿ ಕೂಡಾ ಈ ವಿಶಿಷ್ಟತೆಯನ್ನು ಕಾಣಬಹುದು. ಕಾರ್ನಾಡರ ಭಾಷೆಯ ಉಪಯೋಗ ಬೇರೊಂದು ರೀತಿಯ ಅಧ್ಯಯನ ವಸ್ತುವೇ ಆಗುವುದರಿಂದ, ಈ ಬಗ್ಗೆ ಇಲ್ಲಿ ಹೆಚ್ಚು ಬೆಳೆಸದೆ, ಭಾಷೆ ಹೇಗೆ ವರ್ಣ, ವರ್ಗಸೂಚಕವಾಗುತ್ತದೆ, ಈ ಸಂಘರ್ಷಗಳ ತಾಣವಾಗುತ್ತದೆ ಎಂದು ಮಾತ್ರ ಸೂಚಿಸ ಬಯಸುತ್ತೇನೆ.

**ಆಕರ ಗ್ರಂಥ:**


- ಗಿರೀಶ್ ಕಾರ್ನಾಡ್. (2011). *ಸಮಗ್ರ ನಾಟಕಗಳು–ಗಿರೀಶ್ ಕಾರ್ನಾಡ್.* ಮನೋಹರ ಗ್ರಂಥಮಾಲಾ.


**ಪರಾಮರ್ಶನ ಗ್ರಂಥಗಳು**


- ಅಮೂರ ಜಿ.ಎಸ್. (2012). ಗಿರೀಶ್ ಕಾರ್ನಾಡ ಹಾಗೂ ಭಾರತೀಯ ರಂಗಭೂಮಿ. ಮನೋಹರ ಗ್ರಂಥ ಮಾಲಾ.
- ಅನ್ನದಾನೇಶ್. (2012). *ಗಿರೀಶ್ ಕಾರ್ನಾಡರ ನಾಟಕಗಳು: ಒಂದು ಅಧ್ಯಯನ.* ಅಂಕಿತ ಪುಸ್ತಕ.
- ಮಾಧವ ಕುಲಕರ್ಣಿ. (2000). *ಗಿರೀಶ್ ಕರ್ನಾಡರ ನಾಟಕ ಪ್ರಪಂಚ.* ತನುಮನ ಪ್ರಕಾಶನ.
- ಮೀರಾ ಮೂರ್ತಿ. (2023). *ಗಿರೀಶ್ ಕಾರ್ನಾಡ್.* ನವ ಕರ್ನಾಟಕ ಪಬ್ಲಿಕೇಷನ್.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 78-84
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಶಿವರಾಮ ಕಾರಂತರ ರಾಜಕೀಯ ಕಾದಂಬರಿಗಳ ಹಿನ್ನೆಲೆ, ಪ್ರೇರಣೆ ಹಾಗೂ ಧೋರಣೆ

**ಡಾ. ಎ. ಜಯಲಕ್ಷ್ಮಿ**
ಪ್ರಾಧ್ಯಾಪಕರು, ಕ್ರೈಸ್ಟ್‌ಕಾಲೇಜು, ಆಲಂಬಾಡಿ, ಮಾಲೂರು, ಕೋಲಾರ ಜಿಲ್ಲೆ

***Abstract:***
*ಶಿರಾಮಕಾರಂತರು ಸ್ವಾತಂತ್ರ್ಯ ಪೂರ್ವದಿಂದಲೇ ಕಾದಂಬರಿಗಳನ್ನು ರಚನೆ ಮಾಡಲು ಆರಂಭಿಸಿದರು. ತಮ್ಮ ಕಾದಂಬರಿಗಳಲ್ಲಿ ರಾಜಕೀಯ ವಿಚಾರಗಳಿಗೆ ಸಂಬಂಧಿಸಿದ ವಸ್ತುವನ್ನು ಕೇಂದ್ರ ಬಿಂದುವನ್ನಾಗಿ ಮಾಡಿಕೊಳ್ಳಲು ಹಲವಾರು ರೀತಿಯ ಕಾರಣಗಳಿದ್ದವು. ವಸಾಹತುಶಾಹಿ ಆಳ್ವಿಕೆಯ ಕಾಲದಲ್ಲಿ ಆಗತಾನೇ ತಮ್ಮ ಪ್ರೌಢಶಾಲಾ ವಿದ್ಯಾಭ್ಯಾಸವನ್ನು ಮುಗಿಸಿ ಕುಂದಾಪುರದಲ್ಲಿ ಕಾಲೇಜಿಗೆ ಪ್ರವೇಶ ಪಡೆದುಕೊಳ್ಳುವರು. ಹೆಚ್ಚಿನ ಅಧ್ಯಯನವನ್ನು ಮಾಡಲು ಕುಂದಾಪುರಕ್ಕೆ ಬಂದ ಕಾರಂತರಿಗೆ ಅನೇಕ ರೀತಿಯ ವಿಶಿಷ್ಟ ಅನುಭವಗಳಾಗುತ್ತವೆ. ಇಂತಹ ಅನುಭವಗಳಿಗೆ ಪ್ರಮುಖ ಕಾರಣವೆಂದರೆ, ಭಾರತವು ಪರಕೀಯರ ಆಳ್ವಿಕೆಯಲ್ಲಿ ಸಿಕ್ಕಿಕೊಂಡಿರುವುದು. ಅವರಿಂದ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕವಾಗಿ ಶೋಷಣೆಗೆ ಒಳಗಾಗಿರುವುದು. ಅವರ ಆರಂಭದ ಅಧ್ಯಯನದ ದಿನಗಳನ್ನು ಮತ್ತು ಅಧ್ಯಯನವನ್ನು ತೊರೆದು ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ.*

***Keywords:*** *ಕನ್ನಡ ಸಾಹಿತ್ಯ, ಶಿವರಾಮ ಕಾರಂತ, ರಾಜಕೀಯ ಕಾದಂಬರಿ, ಸ್ವಾತಂತ್ರ್ಯ ಚಳವಳಿ.*

**ಪೀಠಿಕೆ**

ಶಿವರಾಮ ಕಾರಂತರು ತಮ್ಮ ಆತ್ಮಚರಿತ್ರೆಯಾದ "ಹುಚ್ಚು ಮನಸ್ಸಿನ ಹತ್ತು ಮುಖಗಳು" ಕೃತಿಯಲ್ಲಿ ಅವರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಲು ಕಾರಣವಾದ ಅಂಶಗಳನ್ನು ತುಂಬಾ ಮನೋಜ್ಞವಾಗಿ ಕಟ್ಟಿಕೊಟ್ಟಿದ್ದಾರೆ. ಅವರೇ ಹೇಳುವಂತೆ ಕಾಲೇಜಿನಲ್ಲಿ ಕ್ರಿಕೆಟ್ ಆಡುವ ಹುಡುಗರ ವಿಚಾರದಲ್ಲಿ ಪ್ರಿನ್ಸಿಪಾಲರಿಗೆ ಹೆಚ್ಚಿನ ಅಭಿಮಾನವಿರುತ್ತಿತ್ತು. ನಾನು ಅಂಥ ಆಟಗಾರನೂ ಆಗಿರಲಿಲ್ಲ. ಹೀಗಾಗಿ ವಿದ್ಯಾರ್ಥಿ ವೃಂದದಿಂದಲೂ, ಅಧ್ಯಾಪಕ ವೃಂದದಿಂದಲೂ ದೂರವಾದ ವ್ಯಕ್ತಿ ನಾನಾದೆ. ಓದಿನಲ್ಲೂ ಹೆಚ್ಚಿನ ಆಸಕ್ತಿ ನನಗೆ ಉಂಟಾಗಲಿಲ್ಲ. ಕಾಲೇಜು ಲೈಬ್ರರಿಯನ್ನೇನೋ ತುಂಬಾ ಉಪಯೋಗಿಸ ತೊಡಗಿದೆ. ನಮ್ಮ ಇಂಗ್ಲಿಷ್ ಪ್ರೊಫೆಸರ್ ರಾಮ ಅಯ್ಯರ್ ಅವರು ಇಂತಿಂಥ ಪುಸ್ತಕ ಓದಬೇಕೆಂಬ ದೊಡ್ಡ ಪಟ್ಟಿಯನ್ನು ಕೊಟ್ಟಿದ್ದರು. ಆ ಪಟ್ಟಿಯಿಂದ ಆರಿಸಿ ರಡ್‌ಯಾರ್ಡ್ ಕ್ಲಿಪಿಂಗ್‌ನ Light That Faild ಎಂಬ ಕಾದಂಬರಿಯನ್ನು ಓದಲು ತೆಗೆದುಕೊಂಡೆ. ಅದನ್ನು ಓದಿ ಮುಗಿಸಿದ ಮೇಲೆ ಅವರ ಪಟ್ಟಿಯಲ್ಲೇ ನನಗೆ ಬೇಸರ ಬಂತು. ಯಾವ ಪುಸ್ತಕವೂ ನನಗೆ ಬೇಡವಾಯಿತು. ಆದರೆ ನಮ್ಮದು ದೊಡ್ಡ ಪುಸ್ತಕಾಲಯ, ಎಲ್ಲಾ ಪುಸ್ತಕಗಳು ಕ್ಲಿಪಿಂಗ್‌ನವೇ ಇರಲಾರವಷ್ಟೇ? ಏಕೋ, ಏನೋ ಒಂದು ಕ್ರಮವನ್ನಿರಿಸಿಕೊಂಡೆ–ಒಂದು, ಹಿಂದುಸ್ಥಾನದ

***Please cite this article as:*** ಜಯಲಕ್ಷ್ಮಿ ಎ. (2024). ಶಿವರಾಮ ಕಾರಂತರ ರಾಜಕೀಯ ಕಾದಂಬರಿಗಳ ಹಿನ್ನೆಲೆ, ಪ್ರೇರಣೆ ಹಾಗೂ ಧೋರಣೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 78–84

ವಿಚಾರದ ಗ್ರಂಥವಾಗಿರಬೇಕು. ಇಲ್ಲವಾದರೆ ಹಿಂದಿಯವರು ಬರೆದ ಗ್ರಂಥವಾಗಿರಬೇಕು.

ರವೀಂದ್ರನಾಥರ ಹೆಚ್ಚಿನ ಎಲ್ಲಾ ಬರಹಗಳನ್ನು ನಾನು ಆಗಲೇ ಓದಿದ್ದು. ಕಾಲೇಜು ಪಾಠಗಳ ಮೇಲಿನ ನನ್ನ ವಿರಕ್ತಿ ಅಲ್ಲಿಗೆ ಪಕ್ವವಾಗಿತ್ತು ಎಂದು ಹೇಳುವ ಕಾರಂತರ ಮಾತುಗಳಲ್ಲಿಯೇ ಅವರ ಮನಸ್ಸಿನಲ್ಲಿ ರೂಪುಗೊಂಡಿದ್ದ ವಿಚಾರಗಳ ಬಗ್ಗೆ ಊಹಿಸಿಕೊಳ್ಳಬಹುದು. ಅವರಿಗೆ ಕಾಲೇಜಿನ ವ್ಯಾಸಾಂಗಕ್ಕಿಂತ ಬೇರೆಯ ಅಂಶಗಳು ಮುಖ್ಯವಾಗಿದ್ದವು ಎಂದು ಹೇಳಬಹುದು. ಏಕೆಂದರೆ ಪ್ರತಿಯೊಬ್ಬ ವ್ಯಕ್ತಿಯ ಜೀವನದಲ್ಲಿಯೂ, ವಿದ್ಯಾಭ್ಯಾಸದ ಹಂತದಲ್ಲಿ ಕಾಲೇಜಿನ ವ್ಯಾಸಂಗವು ತುಂಬಾ ಮಹತ್ವವಾದ ಘಟ್ಟ, ಮುಂದಿನ ಅವರ ಬದುಕನ್ನು ಸುಗಮವಾಗಿ ರೂಪಿಸಿಕೊಳ್ಳಲು ಇರುವಂತಹ ಸುವರ್ಣ ಅವಕಾಶ. ಇಂಥ ಅವಕಾಶವನ್ನು ಕಾರಂತರು ಸ್ವತಃ ತಾವೇ ಒಪ್ಪಿಕೊಳ್ಳದಿರುವ ಅಂಶವನ್ನು ಗುರುತಿಸಬಹುದಾಗಿದೆ. ಅವರಿಗೆ ಆ ಸಂದರ್ಭದಲ್ಲಿ ಭಾರತದ ಸಾಮಾಜಿಕ, ರಾಜಕೀಯ ಸ್ಥಿತಿಯ ಬಗ್ಗೆ ಹೆಚ್ಚು ತುಡಿತವಿರುವ ಅಂಶವೂ ಕೂಡಾ ಕಾರಂತರಲ್ಲಿ ಒಂದು ನಿರಾಸಕ್ತಿಯನ್ನು ಉಂಟುಮಾಡಲು ಕಾರಣವಾದ ಮತ್ತೊಂದು ಪ್ರಮುಖ ಅಂಶವಾಗಿದೆ ಎಂದು ಹೇಳಬಹುದು. ಇದೇ ವೇಳೆಗೆ ಸರಿಯಾಗಿ ಕಾರಂತರ ಬದುಕಿನ ಮೇಲೆ ಮಹತ್ವವಾದ ಪರಿಣಾಮವನ್ನು ಬೀರುವ ಮತ್ತೊಂದು ಘಟನೆಯು ನಡೆಯುವುದು. 1921ರ ಸೆಪ್ಟೆಂಬರ್ ತಿಂಗಳಿನಲ್ಲಿ ನಾಗಾಪುರದಲ್ಲಿ ಕಾಂಗ್ರೆಸ್ಸಿನ ವಿಶೇಷ ಅಧಿವೇಶನ ನಡೆಯಿತು. ತನ್ನ ಸಹಪಾಠಿಗಳಾದ ಪದ್ಮರಾಜ ಅರಸರು ಅಲ್ಲಿಗೆ ಹೋಗಿ ಬಂದರು. ಗಾಂಧೀಜಿಯವರು ಅಸಹಕಾರ ಸಂದೇಶವನ್ನು ಎಲ್ಲೆಡೆಗೂ ಸಾರಿದರು. ಅಕ್ಟೋಬರ್ ಸುಮಾರಿಗೆ ಬಾಲಗಂಗಾಧರ ತಿಲಕರು ತೀರಿಕೊಂಡ ವಾರ್ತೆ ನಮ್ಮಲ್ಲಿ ವಿಷೇಶ ಉದ್ವೇಗನ್ನುಂಟು ಮಾಡಿತು. ಆಗಲೇ ನನ್ನ ಒಬ್ಬ ವಿದ್ಯಾರ್ಥಿ ಮಿತ್ರ, ತಿಲಕರು ಚರಮ ಶ್ಲೋಕವನ್ನು ಬರೆದು, ಒಂದೇ ದಿನ ಸಾವಿರ ಪ್ರತಿಗಳಿಗಿಂತ ಹೆಚ್ಚು ಮಾರಾಟ ಮಾಡಿದ. ಅದಾದ ಸ್ವಲ್ಪ ಸಮಯದಲ್ಲೇ ಖಿಲಾಪತ್ ಚಳುವಳಿಗಾಗಿ ಮಹಾತ್ಮ ಗಾಂಧೀಜಿಯವರು ಆಲಿ ಸಹೋದರೊಂದಿಗೆ ಮಂಗಳೂರಿಗೆ ಬಂದು ಹೋದರು. ಇದರಿಂದಾಗಿ ವಿದ್ಯಾರ್ಥಿ ವೃಂದದಲ್ಲಿ ಸ್ವದೇಶಿ ಆಂದೋಲನಗಳು ಮನಸ್ಸನ್ನು ಸೆಳೆಯತೊಡಗಿದವು. ಕಾಲೇಜಿನ ಮೇಲೆ ನನಗಿದ್ದ ವಿರಕ್ತಿಯು ಈಗ ಸಂಪೂರ್ಣವಾಯಿತು ಎನ್ನುವ ಕಾರಂತರ ಮಾತುಗಳಲ್ಲೇ ಅವರಿಗೆ ದೇಶದ ಸಾಮಾಜಿಕ ಮತ್ತು ರಾಜಕೀಯ ವಿಚಾರಗಳಿಗೆ ಸಂಬಂಧಿಸಿದ ತುಡಿತವು ಎಷ್ಟು ಅಗಾಧವಾಗಿತ್ತು ಎಂಬುದು ಗೊತ್ತಾಗುತ್ತದೆ. ಈ ವಿಚಾರಗಳು ಅವರ ಮನಸ್ಸಿನ ಮೇಲೆ ತೀವ್ರತರವಾದ ಪ್ರಭಾವಗಳನ್ನುಂಟು ಮಾಡಿದವು.

ಕಾರಂತರ ಮೇಲೆ ಆರಂಭದಲ್ಲಿ ಪ್ರಬಾವ ಬೀರಿದ ಮತ್ತೊಬ್ಬ ಪ್ರಮುಖರೆಂದರೆ, ರವೀಂದ್ರನಾಥ ಠಾಗೋರರು, ಇವರ ಹಲವಾರು ಬರವಣಿಗೆಗಳನ್ನು ಕಾರಂತರು ಅಧ್ಯಯನ ಮಾಡಿದ ಮೇಲೆ ಕಾಲೇಜಿನ ವ್ಯಾಸಾಂಗವನ್ನು ಸಂಪೂರ್ಣವಾಗಿ ತೊರೆಯಲೇ ಬೇಕು ಎನ್ನುವ ದೃಢ ತೀರ್ಮಾನಕ್ಕೆ ಬರುವರು. ಅದೇ ವೇಳೆಗೆ ಆ ಸನ್ನಿವೇಶಕ್ಕೆ ಪೂರಕವಾಗಿ 1921ರಲ್ಲಿ ನಾಗಾಪುರದಲ್ಲಿ ನಡೆಯುವ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿ ಬಂದ ಸ್ನೇಹಿತರು, ಮತ್ತು ಬಾಲಗಂಗಾರನಾಥ ತಿಲಕರು ತೀರಿಕೊಂಡಂತಹ ಸಂದರ್ಭ ಎಂದು ಹೇಳಬಹುದು. ಈ ಸಮಯಕ್ಕಾಗಲೇ ಬ್ರಿಟಿಷರು ಭಾರತವನ್ನು ಆಳ್ವಿಕೆ ಮಾಡುತ್ತಿದ್ದಂತಹ ಕ್ರಮ ಹಾಗೂ ವಿದ್ಯಾರ್ಥಿ ಸಮುದಾಯದಲ್ಲೇ ಸ್ವದೇಶಿ ಮತ್ತು ಸ್ವರಾಜ್ಯ ಆಂದೋಲನಗಳು ಅಸ್ಥಿತ್ವಕ್ಕೆ ಬರಲು ಪ್ರಾರಂಭವಾಗುತ್ತವೆ. ಈ ಎಲ್ಲ ಅಂಶಗಳು ಕಾರಂತರು ತಮ್ಮ ಮುಂದಿನ ಕಾಲೇಜು ವ್ಯಾಸಾಂಗವನ್ನು ಮೊಟಕುಗೊಳಿಸಿ ಮುಂದಿನ ರಾಷ್ಟ್ರವನ್ನು ಕುರಿತು ಪ್ರಗತಿಪರ ಧೋರಣೆಗಳನ್ನು ಕೈಗೊಳ್ಳಲು ಕಾರಣವಾಯಿತು.

ಮುಂದೆ ಕಾರಂತರು ತಮ್ಮ ಹೆಜ್ಜೆಗಳನ್ನು ಯಾವ ದಿಕ್ಕಿನಲ್ಲಿ ಇಡಬೇಕು ಎನ್ನುವ ಸ್ಪಷ್ಟ ಪರಿಕಲ್ಪನೆ ಸಿಗಲು ಮತ್ತು ಕಾಲೇಜಿನ ವ್ಯಾಸಾಂಗವನ್ನು ಬಿಡವುದು ಎಂದು ನಿರ್ಧಾರ ಮಾಡಿದ್ದ ಅವರಿಗೆ ಅದನ್ನು ಸಂಪೂರ್ಣವಾಗಿ ತೊರೆಯಲು ಮತ್ತೊಂದು ಸಂದರ್ಭ ದೊರೆಯಿತು. ಇದರಿಂದ ಮುಂದಿನ ಕಾರ್ಯ ಯೋಜನೆಗಳನ್ನು ಕೈಗೊಳ್ಳಲು ಸುಲಭವಾಗುವುದು. ಕಾರಂತರು ಕಾಲೇಜಿನ ಅಧ್ಯಯನಕ್ಕೆ ಹೋದ ಸಂದರ್ಭದಲ್ಲಿನ ಅವರ ಮನಸ್ಥಿತಿಗಳನ್ನು ಸ್ಪಷ್ಟವಾಗಿ ಇಲ್ಲಿ ಗುರುತಿಸಬಹುದು. ಅವರೇ ಹೇಳುವಂತೆ ಫೆಬ್ರವರಿ ಆಗುತ್ತಲೇ ನನ್ನ ಮನಸ್ಸು ತೀರಾ ಕುದಿಯತೊಡಗಿತು. ರಾಷ್ಟ್ರೀಯ ಚಳವಳಿಗೆ ಇಳಿಯಬೇಕೆಂದು ತೋರಿತು. ಕೆಲವರು ನನ್ನ ಅಭಿಪ್ರಾಯಕ್ಕೆ ತಲೆದೂಗಿದರು. ನಾನು ಕಾಲೇಜಿಗೆ ಹೋದರೂ, ಪಾಠಕ್ಕೆ ಕುಳಿತಿರದೆ, ಎಲ್ಲಾದರೊಂದು ಮೂಲೆಯಲ್ಲಿ ಕುಳಿತು ಭವಿಷ್ಯದ ಯೋಚನೆ ಮಾಡುತ್ತಿದ್ದೆ. ಒಂದು ದಿನ ನಮ್ಮ ಫ್ರೆಂಚ್ ಪ್ರೊಫೆಸರರಾಗಿದ್ದ ಕಣ್ಣಪ್ಪ ಎಂಬುವವರು ನನ್ನ ಬಿಡುಗಡೆಗೆ ನೆರವಾದರು. ಅವರು ನನ್ನ ಬಳಿಗೆ ಬಂದು, ಬೆನ್ನನ್ನು ತಟ್ಟಿ, ಏನು ವಿಚಾರ ಮಾಡುತ್ತಿದ್ದೀಯಾ? ಶಾಲೆ ಬಿಡುವ ಚಿಂತೆಯೇ? ಎಂದು ಕೇಳಿದರು. ಹೌದು ಎಂದೆ, ಈ ವಿದ್ಯಾಭ್ಯಾಸದಿಂದ ಉಪಯೋಗವಿಲ್ಲ ಎಂದರು. ನನಗೆ ಅದರ ಬೆಲೆ ಕಾಣಿಸುತ್ತಿಲ್ಲ ಎಂದೆ. ಯೋಚನೆ ಮಾಡು ಎಂದರು. ಅವರು ಹೊರಟು ಹೋಗುತ್ತಲೆ ಒಂದು ಕಾಗದವನ್ನು ತೆಗೆದು ನಾನು ಕಾಲೇಜಿನಿಂದ ಅಸಹಕಾರ ಮಾಡುವುದಾಗಿ ಪ್ರಿನ್ಸಿಪಾಲರಿಗೆ ಬರೆದು ಕಳುಹಿಸಿದೆ. ಅವರು ಆ ಹುಡುಗನನ್ನು ಬರಹೇಳು ಇದೇನು? ಹುಡುಗರು ರಜೆ ಅರ್ಜಿಯನ್ನು ಕೊಡುವ ಹಾಗೆ ಕಳುಹಿಸುತ್ತಿದ್ದಾನಲ್ಲ ಎಂದರಂತೆ. ಅವರ ಬಳಿಗೆ ನಾನು ಹೋಗಲಿಲ್ಲ. ಫೆಬ್ರವರಿ ಹತ್ತರ ದಿವಸವಿರಬೇಕು, ಅದು (1922) ಸರಿ. ಅದೇ ಕಾಲೇಜಿಗೆ ನನ್ನ ಕೊನೆಯ ದಿನವಾಯಿತು. ಮನೆಗೆ ಹೋದಾಗ ಅಣ್ಣನಿಗೆ ಈ ಸಂಗತಿ ಗೊತ್ತಾಯಿತು. ಆತ ತುಸು ಗಾಬರಿಯಾದ. ಸ್ವತಃ ಅವನೇ ಕೋರ್ಟುಗಳಿಗೆ ಬಹಿಷ್ಕಾರ ಹಾಕಬೇಕೆಂದು ಎಣಿಸಿಕೊಂಡಿದ್ದನಾದರೂ, ತಲೆಯಿಂದ ದೂರು ಬಂದೀತೆಂದು ಅಂಜಿದಂತೆ ಕಾಣಿಸಿತು. ಆ ಸೂಚನೆ ನನಗೆ ಕಂಡು ಬಂದೊಡನೆಯೇ ನಾನು ಮನೆಯಿಂದ ಹೊರಬಿದ್ದೆ ಎಂದು ಕಾರಂತರು ತಮ್ಮ ಅಂದಿನ ಅನುಭವಗಳ ಕುರಿತು ಹೇಳುವರು.

ಕಾರಂತರು ತಮ್ಮ ಅಧ್ಯಯನವನ್ನು ತಾವೇ ದೃಢವಾದ ಮನಸ್ಸಿನಿಂದ ತೊರೆಯುವರು. ಆದರೆ ಕಾರಂತರ ತಂದೆಯವರಿಗೆ ಮಾತ್ರ ಮಗನ ಈ ರೀತಿ ಯೋಚನೆ ಮತ್ತು ನಿರ್ಧಾರಗಳಿಂದ ಸ್ವಲ್ಪವೂ ಸಂತೋಷವಾಗುವುದಿಲ್ಲ. ಅವರ ದೃಷ್ಟಿಯಲ್ಲಿ ಮಗ ಚೆನ್ನಾಗಿ ಓದಿ ಸಮಾಜದಲ್ಲಿ ಒಬ್ಬ ಪ್ರತಿಷ್ಠಿತ ವ್ಯಕ್ತಿಯಾಗಿ ಗೌರವಾನ್ವಿತ ಹುದ್ದೆಯಲ್ಲಿರಬೇಕು ಎನ್ನುವ ಆಸೆಯಲ್ಲಿರುವರು. ಆದರೆ ಕಾರಂತರು ಮಾತ್ರ ಆ ಸಮಯಕ್ಕಾಗಲೇ ಯಾವುದೇ ರೀತಿಯಲ್ಲಿಯೂ ತನ್ನ ತಂದೆಯ ಆಸೆಯನ್ನು ಈಡೇರಿಸುವ ಸ್ಥಿತಿಯಲ್ಲಿರಲಿಲ್ಲ. ಕಾರಂತರ ಅಣ್ಣ, ತನ್ನ ತಮ್ಮ ಮತ್ತೆ ಕಾಲೇಜಿಗೆ ಹೋಗಲಿ ಎನ್ನುವಂತಹ ಒತ್ತಡವನ್ನು ಕಾರಂತರ ಮೇಲೆ ಹೇರುವುದಿಲ್ಲ. ಕಾರಂತರ ಅಣ್ಣನವರು ಸಹ ಈ ಸಮಯದಲ್ಲಿ ಕೋರ್ಟಿನ ಕಲಾಪಗಳಿಗೆ ಒಂದು ವರ್ಷ ಬಹಿಷ್ಕಾರ ಹಾಕುವರು. ಇದೇ ಸಮಯಕ್ಕೆ ಸರಿಯಾಗಿ ಕಾರಂತರ ಪಾಲಿಗೆ ಮತ್ತೊಂದು ಮಹತ್ವದ ಘಟನೆಯು ನಡೆಯುವುದು. ಅಖಿಲ ಕರ್ನಾಟಕ ರಾಷ್ಟ್ರೀಯ ಪರಿಷತ್ತು ಮಂಗಳೂರಿನಲ್ಲಿ ನಡೆಯುವುದು. ಸರೋಜಾದೇವಿಯವರು ಅದರ ಅಧ್ಯಕ್ಷೆಯಾಗಿದ್ದರು. ಆಗ ಕರ್ನಾಟಕದ ಸಿಂಹಗಳೆಂದೇ ಖ್ಯಾತರಾದ ದೇಶಪಾಂಡೆ, ಕೌಜಲಗಿ ಶ್ರೀನಿವಾಸರಾವ್ ಮೊದಲಾದವರು ಬಂದಿದ್ದರು. ಇವರ ಆರ್ಭಟದ ಉಪನ್ಯಾಸಗಳನ್ನು ಕೇಳಿ ಅಲ್ಲಿ ನೆರೆದಿದ್ದವರಿಗೆ ರಾಷ್ಟ್ರ ಭಕ್ತಿಯ ಸ್ಫೂರ್ತಿ ರಕ್ತನಾಳಗಳಲ್ಲಿ ತುಂಬಿ ಹರಿಯುವುದು. ಅಂದಿನಿಂದ ಮಂಗಳೂರು ಮೈದಾನದಲ್ಲಿ ಪ್ರತಿನಿತ್ಯವು ಕಾಂಗ್ರೆಸ್ ಸಭೆಗಳು

ನಡೆಯುತ್ತವೆ. ಆ ಸಮಯದಲ್ಲಿ ಮಂಗಳೂರಿನ ಒಬ್ಬ ಮಹಾವೀರರು ಭಾಷಣದಲ್ಲಿ ತುಂಬಾ ಚತುರರೆಂದು ಹೆಸರಾಗಿದ್ದವರು. ಅವರಂತೂ ಬ್ರಿಟಿಷರನ್ನು ಇಲ್ಲಿಂದ ಓಡಿಸುವ ಸಲುವಾಗಿ ತಮ್ಮ ಉಪನ್ಯಾಸಗಳಲ್ಲಿ ಬ್ರಿಟಿಷರನ್ನು ಕುರಿತು ಕೆಟ್ಟ ಪದಗಳನ್ನು ಪ್ರಯೋಗಿಸಿ ಅವಹೇಳನ ಮಾಡುತ್ತಿದ್ದರು. ಒಂದು ಸಂದರ್ಭದಲ್ಲಿಯಂತೂ ಬ್ರಿಟಿಷರನ್ನು ಕುರಿತು ಟೀಕಿಸುತ್ತಾ, ನಿಂತಲ್ಲಿಯೇ ತಮ್ಮ ಮೈಮೇಲಿನ ಅಂಗಿಯನ್ನು ಹರಿದು ಎಸೆದು ಖಾದಿ ಬಟ್ಟೆಯನ್ನು ಹಾಕಿಕೊಳ್ಳುವರು. ಹಿಂದೂಸ್ಥಾನದ ಮೂವತ್ತಮೂರು ಕೋಟಿ ಜನರು ತಮ್ಮ ಸಿಂಬಳ ತೆಗೆದು ಸಿಡಿಸಿದರೆ ಅದರ ಪ್ರವಾಹದಲ್ಲಿ ಬ್ರಿಟಿಷರು ಕೊಚ್ಚಿ ಹೋಗುವರು ಎನ್ನುವಂತಹ ರೀತಿಯಲ್ಲಿಯೂ ಬ್ರಿಟಿಷರ ಮೇಲೆ ತಮ್ಮ ಆಕ್ರೋಶವನ್ನು ವ್ಯಕ್ತ ಪಡಿಸಿದರು.

ಈ ವೇಳೆಗಾಗಲೇ ಕಾರಂತರು ತಮ್ಮ ವ್ಯಾಸಂಗವನ್ನು ತೊರೆದು ಸ್ವದೇಶಿ ಮತ್ತು ರಾಷ್ಟ್ರೀಯ ಚಳವಳಿಯಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಳ್ಳಬೇಕು ಎನ್ನುವ ಸ್ಪಷ್ಟವಾದ ನಿಲುವನ್ನು ಹೊಂದಿರುವುದು ಕಂಡು ಬರುತ್ತದೆ. ಕಾರಂತರು ಕಾಲೇಜನ್ನು ಬಿಟ್ಟ ಸಮಯದಲ್ಲಿಯೇ ಕೆಲವು ಉಪಾಧ್ಯಾಯರು ತಾವು ಮಾಡುತ್ತಿದ್ದ ಉದ್ಯೋಗಗಳನ್ನು ತೊರೆಯುವರು. ಅದೇ ರೀತಿ ಕಾರಂತರಂತೆ ಹಲವಾರು ವಿದ್ಯಾರ್ಥಿಗಳು ಸಹ ಕಾಲೇಜಿನ ವ್ಯಾಸಾಂಗವನ್ನು ತೊರೆಯುವರು. ಮತ್ತೆ ಕೆಲವರು ಕಾಲೇಜನ್ನು ತೊರೆದು ಸ್ವಲ್ಪ ದಿನಗಳ ತರುವಾಯ ಕಾಲೇಜಿಗೆ ಸೇರಿಕೊಳ್ಳುವರು. ಕಾಲೇಜನ್ನು ಬಿಟ್ಟ ಮೇಲೆ ಕಾರಂತರು ಹೆಚ್ಚು ದಿನಗಳ ಕಾಲ ಮಂಗಳೂರಿನಲ್ಲಿರುವುದಿಲ್ಲ ಉಡುಪಿಗೆ ಹೋಗಿ, ಅಲ್ಲಿನ ರಾಷ್ಟ್ರೀಯ ಪಾಠಶಾಲೆಯಲ್ಲಿ ಅಧ್ಯಾಪರಾಗಿಯೂ ಕಾರ್ಯ ನಿರ್ವಹಿಸುವರು ಆಗ ಅಲ್ಲಿ ಕಾರಂತರ ಗೆಳೆಯರಾದ ರಾಮರಾಯ, ಮಲ್ಯ ಮತ್ತು ಹಿರಿಯಡ್ಕ ನಾರಾಯಣರಾಯರು ಉಡುಪಿಯನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು "ಸತ್ಯಾಗ್ರಹಿ" ಎಂಬ ಪತ್ರಿಕೆಯನ್ನು ಹೊರಡಿಸಿದರು. ಕಾರಂತರು ನಂತರ ತಮ್ಮ ವಿದ್ಯಾರ್ಥಿ ಕಾಲದ ರಂಗವಾಗಿದ್ದ ಕುಂದಾಪುರವನ್ನು ತಮ್ಮ ಕಾರ್ಯಕ್ಷೇತ್ರವ್ನಾಗಿ ಮಾಡಿಕೊಂಡು ಕಾರ್ಯನಿರ್ವಹಿಸುವರು.

ಈ ರಾಷ್ಟ್ರೀಯ ಚಳುವಳಿಂದಾಗಿ ಅಲ್ಲಿ ನೆರೆಯುತ್ತಿದ್ದ ಎಲ್ಲರಿಗೂ ಒಂದು ರೀತಿಯಲ್ಲಿ ಹೆಚ್ಚು ಅನುಕೂಲವಾಯಿತು ಎಂದು ಹೇಳಬಹುದು. ಅಂದರೆ ಎಲ್ಲರೂ ಕನ್ನಡದಲ್ಲಿ ಉಪನ್ಯಾಸ ಮಾಡುವುದನ್ನು ಕಲಿಯುವುದು. ಮತ್ತು ಕಾಂಗ್ರೆಸ್ಸಿನ ಪ್ರಚಾರಕರಾಗುವುದು ಹಾಗೂ ಉಪನ್ಯಾಸದ ವಿಷಯಗಳಿಗಂತೂ ಬರಗಾಲವಿರಲಿಲ್ಲ ಎನ್ನಬಹುದು. ಮಹಾತ್ಮ ಗಾಧೀಜಿಯವರ 'Young India' ಪತ್ರಿಕೆಯನ್ನು ಅಭ್ಯಾಸ ಮಾಡಿ, ಸ್ವದೇಶಿ ಸತ್ಯಾಗ್ರ, ಖಾದಿ, ಅಸಹಕಾರ, ಉಪ್ಪಿನ ಸುಂಕ, ವಿದೇಶೀ ಬಟ್ಟೆಗಳ ಬಹಿಷ್ಕಾರ, ವಿದೇಶಿ ಸಕ್ಕರೆಯ ಬಹಿಷ್ಕಾರ ಇವುಗಳ ಮೇಲೆಯೇ ಹೆಚ್ಚಾಗಿ ಉಪನ್ಯಾಸಗಳನ್ನು ಮಾಡುತ್ತಿದ್ದರು. ಇವರುಗಳ ರೋಷಕ್ಕೆ ಜಲಿಯನ್‌ವಾಲಾಬಾಗ್ ಪ್ರಸಿದ್ಧಿಯ ಡಯರ್ ಮತ್ತು ಮೈಕಲ್ ಓಡ್ವಯರ್ ಇಬ್ಬರೂ ಬಲಿಪಶುಗಳಾಗುತ್ತಿದ್ದರು. ಅಮೃತಸರದ ಕೊಲೆಯ ಘಟನೆಯನ್ನು ಕಂಡವರಿಗಿಂತಲೂ ಹೆಚ್ಚಾಗಿ ಬಣ್ಣಿಸುತ್ತಿದ್ದರು ವಿದೇಶಿಯ ಬಟ್ಟೆಗಳನ್ನು ಸುಟ್ಟು ಹಾಕಬೇಕೆಂದು ಜನತೆಯಲ್ಲಿ ಪ್ರೇರೇಪಿಸುವರು. ಈ ವಿಚಾರದಲ್ಲಿ ರವೀಂದ್ರನಾಥ ಠಾಗೋರರಿಗೂ ಮತ್ತು ಮಹಾತ್ಮ ಗಾಂಧೀಜಿಯವರಿಗೂ ವಿವಾದವೆದ್ದಾಗ ; ಕಾರಂತರ ಸಹಾನುಭೂತಿಯು ಮಾತ್ರ ಗಾಂಧೀಜಿಯವರ ಕಡೆಗೆ ಮೀಸಲಾಗಿರುವುದು. ಠಾಗೋರರವರು 'Cut of The Charaka' ಎಂಬ ಲೇಖನದಲ್ಲಿ ಗಾಂಧೀಜಿಯರನ್ನು ವಿರೋಧಿಸಿ ಬರೆಯುವರು. ಆಗಲೇ ಕಾರಂತರಿಗೆ, ಶಾಂತಿನಿಕೇತನಕ್ಕೆ ಹೋಗದೆ ಒಳಿತು ಎನಿಸುತ್ತದೆ. ಕಾರಂತರು ಮತ್ತೆ ಉಡುಪಿಯಿಂದ ಮಹಾತ್ಮ ಗಾಂಧೀಜಿಯವರ ಅನೇಕ ವಿಚಾರಧಾರೆ ಮತ್ತು ಚಿಂತನೆಗಳನ್ನು ಅರಿತುಕೊಂಡು ಕುಂದಾಪುರಕ್ಕೆ

ಬರುವರು. ಕುಂದಾಪುರಕ್ಕೆ ಬಂದ ಸಮಯಕ್ಕಾಗಲೇ ಅಸಹಕಾರ ಚಳುವಳಿಯ ಸ್ಪಷ್ಟ ರೂಪವು ಕಾರಂತರಿಗಿತ್ತು. ಆದ್ದರಿಂದ ಕಾರಂತರೇ ಹೇಳುವಂತೆ ನಾನು ಸ್ವಗ್ರಾಮ ಭಕ್ತಿಯಿಂದ ಕುಂದಾಪುರವನ್ನು ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡೆ. ಊರ ವ್ಯಾಪಾರಿಗಳು ಮುಂದಾಳುಗಳು ಆದ ಪುಂಡಲೀಕ ಕಾಮತರು ನನಗೆ ಅಣ್ಣನಂತೆ ಬೆಂಗಾವಲಾಗಿ ನಿಂತರು. ಊಟಕ್ಕೆ ಯೋಚನೆ ಇದ್ದಿರಲಿಲ್ಲ. ನನ್ನ ತಮ್ಮಂದಿರ ಸಲುವಾಗಿ ಬಿಡಾರ ನಡೆಯುತ್ತಿತ್ತು. ಆದರೆ ಸ್ವಂತ ಊರಾದ ಕೋಟಾಕ್ಕೆ ಮಾತ್ರ ನಾನು ಹೋಗುವಂತಿರಲಿಲ್ಲ. ನಾನು ಅಸಹಕರಿಸಿದ ಬಗ್ಗೆ ನಮ್ಮ ಅಪ್ಪನ ಅಸಮಾಧಾನ ಹೇಳತೀರದು. ನಾನೊಬ್ಬ ವಕೀಲನಾಗಿ ಕುಂದಾಪುರದಲ್ಲಿ ನೆಲಸಿ ಊರಿನ ಹುಲಿಯಾದೇನು–ಎಂದು ತಿಳಿದಿದ್ದ ಅವರ ಕನಸು ನನ್ನಿಂದಾಗಿ ಸಂಪೂರ್ಣ ಒಡೆದು ಹೋಯಿತು. ನನಗೆ ತಾಸು ತಾಸುಗಳ ಉಪನ್ಯಾಸ ಮಾಡಿದರು. ನನ್ನ ಅಜ್ಜಿ ತಾಯಿ ಎಲ್ಲರೂ ಮೊರೆಯಿಟ್ಟರು. ಬಂಧುಗಳಿಂದ ಹೇಳಿಸಿ ನೋಡಿದರು. ಅವರೆಲ್ಲರ ಉಪನ್ಯಾಸ ಕೇಳಿ ಉತ್ತರ ಕೊಡಲಾರದೆ ಮೂಕನಾದೆ ಕೊನೆಗೆ ನನ್ನ ತಂದೆ ನಿನ್ನೊಡನೆ ಮಾತನಾಡುವುದು ಸಮಾ, ಒಂದು ಕಂಬವನ್ನು ಮಾತನಾಡಿಸುವುದು ಸಮ. ಎಂದು ನನ್ನ ಆಸೆಯನ್ನೇ ಬಿಟ್ಟರು. ಎಂದು ಕಾರಂತರು ತಮ್ಮ ಕುಟುಂಬದಲ್ಲಿ ತನ್ನ ವಿದ್ಯಾಭ್ಯಾಸದ ಬಗ್ಗೆ ನಡೆದ ಘಟನೆಯನ್ನು ತುಂಬಾ ಸ್ವಾರಸ್ಯವಾಗಿ ಕಟ್ಟಿಕೊಡುವರು. ಕಾರಂತರ ತಂದೆಗೆ ಕೊನೆಗೆ ತಮ್ಮ ಮಗ ವಿದ್ಯಾಭ್ಯಾಸ ನಿಲ್ಲಿಸಿದ್ದರಿಂದಲೂ ಬೇಸರವಾಗುವುದಿಲ್ಲ ಆದರೆ ಮಗ ಮಾತ್ರ ಚಳವಳಿ, ಸತ್ಯಾಗ್ರಹ ಎಂದು ಜೈಲಿಗೆ ಹೋಗುವ ಪರಿಸ್ಥಿತಿಯನ್ನು ಮಾತ್ರ ಕನಸು ಮನಸ್ಸಿನಲ್ಲಿಯೂ ಊಹಿಸಲೂ ಸಿದ್ದರಾಗಿರುವುದಿಲ್ಲ.

ಕಾರಂತರೇ ಹೇಳುವಂತೆ ನೀವು ಅಂದಿನ ರಾಷ್ಟ್ರಭಕ್ತ ಕಾರಂತರ ಉಡುಗೆಯನ್ನು ನೋಡಬೇಕಿತ್ತು. ವಿದೇಶಿಯ ಅಂಗಿ ಗುಂಡಿಯ ಸಂಪರ್ಕವಿಲ್ಲದ ಖಾದಿಯಿಂದ ಮಾಡಿದ ಕಿಸೆ ಅಂಗಿ ತೊಡುತ್ತಿದ್ದೆ. ತಲೆಗೆ ಗಾಂಧಿ ಟೋಪಿ ಇರುತ್ತಿತ್ತು. ಹತ್ತಿರ ಒಂದು ಚರಕ ಇರಿಸಿಕೊಂಡು ತೆಗೆಸಿಕೊಂಡ ದೇಶಭಕ್ತಿಯ ಫೋಟೋ ಇದ್ದಿತ್ತು. ಆ ಕಾಲದಲ್ಲಿ ಆಗಲೇ ನಮ್ಮ ಊರಿಗೆ ಮುಂಬೈ ಟೆಕ್ಸ್‌ಟೈಲ್ ಶಾಲೆ ಓದುತ್ತಿದ್ದ ಒಬ್ಬ ವಿದ್ಯಾರ್ಥಿ ದತ್ತಾತ್ರೇಯ ಎಂಬುವ ಮತ್ತು ವಿಜ್ಞಾನ ಓದುತ್ತಿದ್ದ ಇನ್ನೊಬ್ಬ ವಿದ್ಯಾರ್ಥಿ ಶಂಕರರಾವ್ ಎಂಬಾತ ಅಸಹಕಾರ ಹೂಡಿ ಕುಂದಾಪುರಕ್ಕೆ ಬಂದಿದ್ದರು. ಅವರನ್ನು ಕೂಡಿಕೊಂಡ ನಾನು ಗ್ರಾಮ ಸಂಚಾರ ಮಾಡತೊಡಗಿದೆ. ಒಂದು ವಾರದೊಳಗಾಗಿ ಆ ಇಬ್ಬರೂ ಮಿತ್ರರು ಮುಂಬೈಗೆ ಹೊರಟರು. ಹೀಗೆ ಕಾರಂತರೊಂದಿಗೆ ಅವರ ಸ್ನೇಹಿತರು ತಮ್ಮ ವಿದ್ಯಾಭ್ಯಾಸವನ್ನು ತೊರೆದು ಸ್ವದೇಶಿ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುವ ನಿರ್ಧಾರ ಮಾಡಿದರೂ ಕೊನೆಗೆ ಅದನ್ನು ಬಿಟ್ಟು ವಿದ್ಯಾಭ್ಯಾಸವನ್ನು ಮುಗಿಸಿ ಉದ್ಯೋಗಗಳನ್ನು ಪಡೆದುಕೊಂಡು ಬದುಕನ್ನು ನಿರ್ವಹಿಸಿದರು.

ಕಾರಂತರು ಮಂಗಳೂರಿನಿಂದ ಕಾಲೇಜನ್ನು ಬಿಟ್ಟು ಕುಂದಾಪುರಕ್ಕೆ ಬಂದು ನೆಲೆಸಿದಾಗಿನಿಂದ ಅವರ ನಿಜವಾದ ಬದುಕು ಆರಂಭವಾಯಿತು. ಹಿರಿಯರ ಪೋಷಣೆಯನ್ನು ಕಳೆದುಕೊಂಡು ಶಾಲೆ ಹಂಬಲ ತೊರೆದು ಸಮಾಜದ ವಿಶಾಲ ರಂಗಕ್ಕೆ ಕಾಲಿಟ್ಟಾಗಲೇ ಕಾರಂತರ ನಿಜವಾದ ಜೀವನ ಆರಂಭವಾಯಿತು. ಆದ್ದರಿಂದಲೇ ಅವರು ಕಾಲೇಜಿನ ಒಳಗೆ ಕಲಿತದ್ದಕ್ಕಿಂತ ಕಾಲೇಜಿನ ಹೊರಗೆ ಹೆಚ್ಚಾಗಿ ಕಲಿತರು. "ಅಸಹಕಾರ ಚಳುವಳಿಯಲ್ಲಿ ದುಮುಕಿ ಕುಂದಾಪುರವನ್ನು ಸೇರಿದಾಗ ಮನಸ್ಸಿನಲ್ಲಿ ಗಾಂಧೀಜಿಯವರ ಆರ್ದಶವೇ ತುಂಬಿತ್ತು. ಅವರು 'ಹಿಂದಿ ಸ್ವರಾಜ್ಯ' ಎಂಬ ಗ್ರಂಥದಲ್ಲಿ ಬರೆದಿರುವ ಮಾತುಗಳನ್ನು ವೇದ ವಾಕ್ಯವೆಂದೇ ತಿಳಿದಿದ್ದೆ. ಯಂತ್ರ ಯೋಗಕ್ಕೆ ಅವರು ತೀರ ವಿರೋಧಿಗಳು ಐಹಿಕ ಬಾಳ್ವೆಯ ತಿರಸ್ಕಾರ, ಬ್ರಹ್ಮಚರ್ಯೆ ಮೊದಲಾದ ಆರ್ದಶಗಳನ್ನು ನಾನು ಒಂದೇ

ಗುಟುಕಿಗೆ ಕುಡಿದು ಜೀರ್ಣಿಸಿಕೊಂಡವನಂತೆ ದೊಡ್ಡ ದೊಡ್ಡ ಕನಸನ್ನು ಕಟ್ಟಿಕೊಂಡು ಬಾಳಲು ತೊಡಗಿದೆ ಯಾವುದೇ ವಸ್ತುವನ್ನು ತಿನ್ನುವಾಗ ಅಥವಾ ತಿಂದೊಡನೆಯೇ ಜೀರ್ಣ ಮತ್ತು ಅಜೀರ್ಣಗಳ ಪ್ರಶ್ನೆ ಹುಟ್ಟುವುದಿಲ್ಲ. ತಿಂದ ಸ್ವಲ್ಪ ಹೊತ್ತಿನ ಮೇಲೆ ಆ ಪ್ರಶ್ನೆ ಉದ್ಭವಿಸುತ್ತದೆ. ನನ್ನ ಕ್ರಮವೆಂದರೆ ಕಾಂಗ್ರೆಸ್ಸಿನ ಧೋರಣೆಯ ಪ್ರಚಾರ, ಸರಕಾರದವರೊಡನೆ ಅಸಹಕಾರ ಹೂಡಿರೆಂದು ಜನರನ್ನು ಕೇಳುವುದು ಖಾದಿ ಪ್ರಸಾರ ಇವೆ ಮೊದಲಾದವು. ಹೀಗೆ ಕಾರಂತರು ಅಧ್ಯಯನವನ್ನು ಮುಂದುವರೆಸದೆ ಹೋದದ್ದು ಸ್ವಾತಂತ್ರ್ಯ ಚಳವಳಿಯಲ್ಲಿ ತಾನು ಪಾಲ್ಗೊಂಡದ್ದು ಮತ್ತು ಸ್ವತಂತ್ರ ಪೂರ್ವ ಮತ್ತು ಸ್ವತಂತ್ರ ನಂತರದ ರಾಜಕೀಯ ವಿಚಾರಗಳನ್ನು ತಮ್ಮ ಹಲವಾರು ಕಾದಂಬರಿಗಳಿಗೆ ಪ್ರಮುಖ ವಸ್ತುವನ್ನಾಗಿ ಮಾಡಿಕಳ್ಳುವರು ಆ ಮೂಲಕ ತಾವು ಕಂಡ ಅನೇಕ ಅನುಭವಗಳನ್ನು ತಮ್ಮ ಕಾದಂಬರಿಗಳಲ್ಲಿ ತುಂಬಾ ವೈವಿದ್ಯಮಯವಾಗಿ ಕಟ್ಟಿಕೊಡುವಲ್ಲಿ ಯಶಸ್ವಿಯಾಗುವರು.

ರಾಷ್ಟ್ರೀಯತೆ ಎಂಬ ಪರಿಲ್ಪನೆಯು ಭಾರತೀಯರಲ್ಲಿ ಹೆಚ್ಚು ಅರ್ಥಪೂರ್ಣವಾಗಿ ಮತ್ತು ಕ್ರಿಯಾತ್ಮಕವಾಗಿ ಬಂದದ್ದು ದೇಶದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ನೂರಾರು ವರ್ಷಗಳ ಬ್ರಿಟಿಷರ ವಸಾಹಾತುಶಾಹಿ ಆಡಳಿತದಿಂದ ಮುಕ್ತವಾಗುವ ಮುಖ್ಯ ಹಂಬಲದಿಂದ ಗಟ್ಟಿಗೊಂಡ ಈ ರಾಷ್ಟ್ರೀಯ ಪ್ರಜ್ಞೆ ಭಾರತೀಯರಲ್ಲಿ ಜಾಗೃತವಾದದ್ದು ಮಹಾತ್ಮ ಗಾಂಧೀಜಿಯವರ ಪ್ರಭಾವಿ ವ್ಯಕ್ತಿತ್ವದಿಂದ ತಮ್ಮ ಇಡೀ ಜೀವನವನ್ನು ದೇಶಕ್ಕಾಗಿ ಮೀಸಲಿಟ್ಟಿದ್ದ ಗಾಂಧೀಜಿಯವರ ರಾಷ್ಟ್ರೀಯತೆ ಪರಿಕಲ್ಪನೆಯನ್ನು ಒಂದು ಮಾತಿನಲ್ಲಿ ಹೇಳುವುದು ಕಷ್ಟಕರ. ಅವರ ದೃಷ್ಠಿಯಲ್ಲಿ ಭಾರತವು ಪರಕೀಯರ ಆಡಳಿತದಿಂದ ಮುಕ್ತವಾಗಿ ಕೇವಲ ರಾಜಕೀಯ ಸ್ವಾತಂತ್ರ ಗಳಿಸಿಕೊಳ್ಳುವುದೊಂದೇ ಮುಖ್ಯವಾಗಿರಲಿಲ್ಲ. ಈ ದೇಶದಲ್ಲಿ ಘೋರವಾಗಿ ಬೆಳೆದಿದ್ದ ವರ್ಗ ಮತ್ತು ವರ್ಣ ವೈರುಧ್ಯಗಳ ನಿವಾರಣೆ, ಭಾರತೀಯರ ಸ್ವಾವಲಂಬನೆ, ಹಾಗೂ ಎಲ್ಲಾ ರಂಗಗಳಲ್ಲಿಯೂ ಸಮಾನತೆಯ ಸ್ಥಾಪನೆ ಇವು ಸ್ವಾತಂತ್ರ್ಯದ ಜೊತೆ ಜೊತೆಯಲ್ಲಿಯೇ ಆಗಬೇಕೆಂಬುದು ಅವರ ಗುರಿಯಾಗಿತ್ತು. ಈ ಹಿನ್ನೆಲೆಯಲ್ಲಿ ಭಾರತವು ಸ್ವಾತಂತ್ರ್ಯ ಗಳಿಸುವುದರ ಜೊತೆಗೆ ಇಲ್ಲಿನ ಜನತೆ ತಮ್ಮ ಸರ್ವಾಂಗೀಣ ಪ್ರಗತಿಗೆ ಪ್ರಯತ್ನಿಸುವ ಕ್ರಿಯಾತ್ಮಕ ಪ್ರಜ್ಞೆಯನ್ನು ಜಾಗೃತಗೊಳಿಸುವತ್ತ ಅವರ ಪ್ರಯತ್ನ ಸಾಗಿತ್ತು. ಈ ಹಿನ್ನೆಲೆಯಲ್ಲಿ ಹಲವಾರು ಲೇಖಕರು ಸ್ವತಃ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಂಡರು.

ಕಾರಂತರು ತಮ್ಮ ಕಾಲೇಜು ವ್ಯಾಸಂಗವನ್ನು ತೊರೆಯುವುದರ ಜೊತೆಗೆ ಪರಕೀಯರ ಆಡಳಿತ ವ್ಯವಸ್ಥೆಯನ್ನು ಕುರಿತಂತೆ ಪ್ರತಿಭಟಿಸಲು ಸತ್ಯಾಗ್ರಹ, ಚಳವಳಿ, ವಿದೇಶಿ ವಸ್ತುಗಳ ಬಹಿಷ್ಕಾರ ಕಂದಾಯ ನಿರಾಕರಣೆ ಇತ್ಯಾದಿಗಳಲ್ಲಿ ಪಾಲ್ಗೊಳ್ಳುವರು. ಹೀಗೆ ಅಂದಿನ ಭಾರತದ ರಾಜಕೀಯ ವ್ಯವಸ್ಥೆಯ ಬದಲಾವಣೆಗೆ ಅನೇಕ ಹೋರಾಟಗಳಲ್ಲಿ ಪಾಲ್ಗೊಂಡತಹ ಕಾರಂತರು ಒಬ್ಬ ಕಾದಂಬರಿಕಾರರಾಗಿ ತಮ್ಮ ಕೃತಿಗಳಿಗೆ ವಸ್ತುವನ್ನಾಗಿ ಅದೇ ವಿಚಾರಗಳನ್ನು ಆಯ್ಕೆ ಮಾಡಿಕೊಂಡರು. ಕಾರಂತರಿಗೆ ತಮ್ಮ ಕಾಲೇಜಿನ ವಿದ್ಯಾಭ್ಯಾಸದ ಅವಧಿಯಲ್ಲಿ ರವೀಂದ್ರನಾಥ ಠಾಗೋರರ ಹಲವಾರು ವಿಚಾರಗಳು ಮತ್ತು ಗಾಂಧೀಜಿಯವರ ವಿಚಾರಗಳು ಹೆಚ್ಚಿನ ಪ್ರೇರಣೆಯನ್ನು ಮತ್ತು ಪ್ರಭಾವವನ್ನು ಉಂಟುಮಾಡಿದವು. ಆದುದರಿಂದ ಕಾರಂತರು ತಮ್ಮ ಜೀವನದಲ್ಲಿ ಅಧ್ಯಯನಕ್ಕೆ ಪ್ರಾಮುಖ್ಯತೆಯನ್ನು ಕೊಡುವುದಕ್ಕೆ ಬದಲಾಗಿ, ತಮ್ಮನ್ನು ಸಮಾಜ ಸೇವೆಗೆ ಅರ್ಪಿಸಿಕೊಂಡರು. ಆ ಮೂಲಕ ಒಬ್ಬ ಕಾದಂಬರಿಕಾರರಾಗಿ ಮತ್ತು ಹುಟ್ಟು ಹೋರಾಟಗಾರರಾಗಿ ಬ್ರಿಟಿಷರ ವಿರುದ್ಧ ಬಂಡಾಯ ಏಳುವುದರ ಜೊತೆಗೆ ಇಲ್ಲಿನ ಜನತೆಯಲ್ಲಿ ಭವಿಷ್ಯ ಭಾರತದ ರಾಷ್ಟ್ರೀಯ ರಾಜಕೀಯ ಪ್ರಜ್ಞೆಯನ್ನು ಕುರಿತಂತೆ ಎಚ್ಚರ ಉಂಟುಮಾಡಲು ಕಾರಣರಾದರು. ಈ ಸ್ವಾತಂತ್ರ್ಯ ಪ್ರಜ್ಞೆಯನ್ನು ಕುರಿತಂತೆ ತಮ್ಮ

ಸ್ವಾತಂತ್ರ್ಯ ಪೂರ್ವದ ಕಾದಂಬರಿಗಳಲ್ಲಿ ಮತ್ತು ಸ್ವಾತಂತ್ರ್ಯ ನಂತರದ ಕಾದಂಬರಿಗಖಲ್ಲಿ ಎರಡರಲ್ಲಿಯೂ ತುಂಬಾ ಭಿನ್ನವಾಗಿ ಮತ್ತು ವೈವಿಧ್ಯಮಯವಾಗಿ ಕಟ್ಟಿ ಕೊಟ್ಟಿರುವರು.

**ಪರಾಮರ್ಶನ ಗ್ರಂಥಗಳು**


- ಅಶೋಕ ಟಿ.ಪಿ. (1993). ಶಿವರಾಮ ಕಾರಂತ. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ಕೇಶವ ಶರ್ಮ. (2017). *ಕಾರಂತರ ಕಾದಂಬರಿಗಳ ಸಾಮಾಜಿಕ ಸಂಕಥನ.* ರಚನ ಪ್ರಕಾಶನ.
- ಮಾಲಿನ ಮಲ್ಯ. (ಸಂ.). (1994). *ಶಿವರಾಮ ಕಾರಂತರ ಲೇಖನಗಳು. (ಸಂಪುಟ, 2,4,6).* ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ.
- ಶಿವರಾಮ ಕಾರಂತ. (1998). ಹುಚ್ಚು ಮನಸ್ಸಿನ ಹತ್ತು ಮುಖಗಳು. ಎಸ್.ಬಿ.ಎಸ್. ಪಬ್ಲಿಕೇಷನ್.
- ಶಿವರಾಮ ಪಡಿಕ್ಕಲ್. (2001). *ನಾಡು–ನುಡಿಯ ರೂಪಕ.* ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 85-89
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಜನಪದ ಸಂಸ್ಕೃತಿ ಮತ್ತು ಜನಪದ ಜೀವನ

**ಡಾ. ನಾ. ಮುನಿರಾಜು**
ಪ್ರಾಂಶುಪಾಲರು, ಗ್ರೀನ್ ಸಿಟಿ ಡಿಗ್ರಿ ಕಾಲೇಜು, ಮಾಲೂರು

**Abstract:**
*ಜನಪದ ಸಂಸ್ಕೃತಿಯು ಜನಪದರ ಜೀವನದೊಂದಿಗೆ ಹಾಸುಹೊಕ್ಕಾಗಿ ಬೆಸೆದುಕೊಂಡಿದೆ. ಜನಪದ ಸಂಸ್ಕೃತಿಯನ್ನು ನಿರ್ಧಿಷ್ಟಗೊಳಿಸಿ ಹೇಳಲು ಸಾಧ್ಯವಿಲ್ಲ. ಏಕೆಂದರೆ, ಅದರ ವಿಸ್ತಾರ ಅಷ್ಟು ವ್ಯಾಪಕವಾಗಿದೆ. ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನವಾಗಿರುವ ಸಂಸ್ಕೃತಿಯನ್ನು ಗುರುತಿಸಬಹುದು, ಸಂಸ್ಕೃತಿಯ ವಿಕಾಸದ ಹಂತಗಳಲ್ಲಿ ಹಲವಾರು ರೀತಿಯಲ್ಲಿ ಬೆಳವಣಿಗೆಯಾಗಿರುವುದನ್ನು ಕಾಣಬಹುದು, ಇ.ಬಿ. ಟೇಲರ್ ಅವರ "ದಿ ಪ್ರಿಮಿಟಿವ್ ಕಲ್ಚರ್" ಕೃತಿಯಲ್ಲಿ, ಸಂಸ್ಕೃತಿಯ ವಿಕಾಸದ ಹಂತಗಳಾದ, ಕಾಡುತನ, ಬರ್ಬರತನ, ಮತ್ತು ನಾಗರಿಕತೆಯ ಹಂತಗಳಿಂದಲೇ ಸಂಸ್ಕೃತಿಯ ವಿಕಾಸ ಹಂತಗಳನ್ನು ಗುರುತಿಸಬಹುದು. ಜನಪದ ಸಂಸ್ಕೃತಿಯು ಬುಡಕಟ್ಟು ಜನರ ಸಂದರ್ಭದಲ್ಲಿ, ಗ್ರಾಮೀಣ ಪರಿಸರದ ಸಂದರ್ಭದಲ್ಲಿ ಮತ್ತು ನಗರ ಜನರ ಸಂದರ್ಭದಲ್ಲಿ ತನ್ನದೇ ಆದ ರೀತಿಯಲ್ಲಿ ಇರುತ್ತದೆ. ಮನುಷ್ಯನ ಬದುಕು ಹುಟ್ಟಿನಿಂದ ಸಾವಿನವರೆಗೂ ತನ್ನದೇ ಆದ ರೀತಿಯಲ್ಲಿ ಬೆಸೆದುಕೊಂಡಿರುವುದನ್ನು ಕಾಣಬಹುದು.*

**Keywords:** *ಸಂಸ್ಕೃತಿ, ಆದಿಮ ಸಂಸ್ಕೃತಿ, ಜನಪದ ಸಂಸ್ಕೃತಿ, ಜನಪದ ಜೀವನ.*

**ಪೀಠಿಕೆ**

ಜನಪದ ಸಂಸ್ಕೃತಿ ಮತ್ತು ಜನಪದ ಜೀವನವನ್ನು ಮುಖ್ಯವಾಗಿ ಜನಪದರ ನಂಬಿಕೆ. ಆಚರಣೆ, ಸಂಪ್ರದಾಯ, ದೈವ, ಧರ್ಮ, ಕಲೆಯಲ್ಲಿ ಗುರುತಿಸಬಹುದು. ನಂಬಿಕೆಯು ಜನಪದರ ಜೀವನದಲ್ಲಿ ಪರಂಪರಾಗತವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆಯಾಗಿರುತ್ತದೆ. ನಂಬಿಕೆಯು ಜನಪದರ ಜೀವನಾನುಭವದ ಉತ್ಪನ್ನವು ಆಗಿರುತ್ತದೆ. ಮನುಷ್ಯನ ಬದುಕಿಗೂ ಮತ್ತು ನಂಬಿಕೆಗಳಿಗೂ ಬೇರ್ಪಡಿಸಲಾಗದ ಅವಿನಾಭಾವ ಸಂಬಂಧವಿರುತ್ತದೆ. ಜನಪದ ಸಂಸ್ಕೃತಿಯಲ್ಲಿ ನಂಬಿಕೆಗಳು ಸೂಚನೆ ನಿಯಮ, ವಿಧಿ-ನಿಷೇಧ, ನಿರ್ದೇಶನ, ಅಗ್ರಹ ಮತ್ತು ಆದೇಶಗಳ ರೂಪದಲ್ಲಿ ಸಂಬಂಧವನ್ನು ಪಡೆದುಕೊಂಡಿರುತ್ತವೆ. ಜನಪದರ ಕೆಲಸ, ಆಲೋಚನೆ, ರೂಢಿ, ಸಂಪ್ರದಾಯ ಆಚರಣೆಗಳೆಲ್ಲವು ಮೂಲಭೂತವಾಗಿ ನಂಬಿಕೆಗಳಿಂದಲೇ ಪ್ರೇರಿತವಾಗಿರುತ್ತವೆ. ನಂಬಿಕೆಯು ಸಂಪ್ರದಾಯ ಮತ್ತು ಆಚರಣೆಗಳೊಂದಿಗೆ ಅಂತರ್ ಸಂಬಂಧವನ್ನು ಹೊಂದಿದ್ದು ಆ ಮೂಲಕ ಕ್ರಿಯಾರೂಪವನ್ನು ತಾಳುತ್ತದೆ.

ಮೂಲತಃ ಕಾಲ್ಪನಿಕ ಆಲೋಚನೆಯೊಂದು ವೈಯಕ್ತಿಕ ನೆಲೆಯಲ್ಲಿ ಹುಟ್ಟಿಕೊಂಡು ನಂತರ ಸಮಾಜದಲ್ಲಿ ಸಾಮೂಹಿಕ ಮಾನ್ಯತೆಯನ್ನು ಪಡೆದುಕೊಂಡಾಗ ನಂಬಿಕೆಯಾಗುತ್ತದೆ ಎಂಬುದಾಗಿ ವಿದ್ವಾಂಸರು ಅಭಿಪ್ರಾಯಪಡುವರು, ಪ್ರಕೃತಿಯ

**Please cite this article as:** ಮುನಿರಾಜು. ನಾ. (2024). ಜನಪದ ಸಂಸ್ಕೃತಿ ಮತ್ತು ಜನಪದ ಜೀವನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 85–89

ರಹಸ್ಯವನ್ನು ಕಂಡು ಹಿಡಿಯುವಲ್ಲಿ ಆದಿಮಾನವನ ವಿಫಲತೆ, ಹುಟ್ಟು ಸಾವುಗಳ ನಿಗೂಢತೆ, ಪ್ರಕೃತಿ ವಿಕೋಪ ಮುಂತಾದ ಕಾರಣಗಳಿಂದಲೂ ನಂಬಿಕೆಗಳು ಹುಟ್ಟಿಕೊಂಡಿರಬಹುದು. ಲೌಕಿಕ ಕ್ರಿಯೆಯೊಂದನ್ನು ಗಟ್ಟಿಗೊಳಿಸಲು ಅಥವಾ ನಿಷೇಧಿಸಲು ಅದಕ್ಕೆ ಧಾರ್ಮಿಕ ಚೌಕಟ್ಟನ್ನು ಒದಗಿಸಲಾಗಿರುತ್ತದೆ. ಕಾಲನ್ನು ತೊಳೆಯುವಾಗ ಹಿಮ್ಮಡಿಯನ್ನು ಪೂರ್ತಿಯಾಗಿ ತೊಳೆಯಬೇಕು ಇಲ್ಲದಿದ್ದರೆ ಶನಿ ಹಿಡಿಯುತ್ತದೆ. ಸಂಜೆ ಹೊತ್ತಲ್ಲಿ ಕಸಗುಡಿಸಿ ಹೊರಗೆ ಹಾಕಬಾರದು, ಮನೆಯಲ್ಲಿ ಉಗುರು ಕತ್ತರಿಸಬಾರದು, ತೆಂಗಿನ ಕಾಯಿಯನ್ನು ತುಳಿಯಬಾರದು, ಬೆಕ್ಕು ಅಡ್ಡಿ ಬಂದರೆ ಕೆಟ್ಟದಾಗುತ್ತದೆ, ದವಸ ಧಾನ್ಯಗಳನ್ನು ಕಾಲಲ್ಲಿ ತುಳಿಯಬಾರದು, ಮಗುವಿಗೆ ಮೊದಲಿಗೆ ಕೂದಲು ಕೊಡುವಾಗ ಮನೆ ದೇವರಿಗೆ ಕೊಡಬೇಕು. ಕಾಗೆಯು ಮನೆಯ ಒಳಗಡೆ ಪ್ರವೇಶಿಸಿದರೆ ಅಪಶಕುನ, ರಾತ್ರಿಯ ವೇಳೆ ನಾಯಿಯು ಹೊಳಿಡಬಾರದು ಹೀಗೆ ಹತ್ತು ಹಲವಾರು ರೀತಿಯ ನಂಬಿಕೆಗಳು ಪ್ರತಿಯೊಂದು ಧರ್ಮ, ಜಾತಿ, ಜನಾಂಗ ಮತ್ತು ವರ್ಗದ ಜನರಲ್ಲಿ ಇರುವುದನ್ನು ಕಾಣಬಹುದು. ಜನಪದರ ಸಂದರ್ಭದಲ್ಲಿ ನಂಬಿಕೆಗಳನ್ನು ಹೆಚ್ಚು ನಂಬುವ ಜನರಿದ್ದರೆ, ವೈಚಾರಿಕ ನೆಲೆಯಲ್ಲಿ ಚಿಂತಿಸುವ ಜನರು ಹಲವಾರು ನಂಬಿಕೆಗಳನ್ನು ತಿರಸ್ಕರಿಸುವುದನ್ನು ಕಾಣಬಹುದು. ಉದಾ: ಜಾತಿಯ ನೆಲೆಯಲ್ಲಿಯೇ ಇದ್ದಂತಹ ವಿವಾಹ ಪದ್ಧತಿಯು ಇಂದು ಅಂತರ ಜಾತಿ, ಅಂತರ ಧರ್ಮದ ನೆಲೆಯಲ್ಲಿ ಹೆಚ್ಚಾಗಿ ವಿದ್ಯಾವಂತ ಸಮೂಹದಲ್ಲಿ ನಡೆಯುತ್ತಿರುವುದು ಕಾಣಬಹುದು. ಆದ್ದರಿಂದ ಒಂದು ಕಾಲದಲ್ಲಿ ಇದ್ದಂತಹ ನಂಬಿಕೆಯು ಕಾಲಕ್ರಮೇಣವಾಗಿ ಅದು ತನ್ನ ಅರ್ಥವನ್ನು ಕಳೆದುಕೊಳ್ಳುವ ಸಾಧ್ಯತೆಯು ಇರುತ್ತದೆ.

ಮನುಷ್ಯನ ಬದುಕಿನ ಎಲ್ಲ ಮಗ್ಗಲುಗಳಲ್ಲಿಯೂ ಆವರಿಸಿಕೊಂಡಿರುವ ನಂಬಿಕೆಗಳು ಜನಪದ ಸಂಸ್ಕೃತಿ ಮತ್ತು ಜನಪದರ ಜೀವನದೊಂದಿಗೆ ನಿಕಟವಾದ ಸಂಬಂಧವನ್ನು ಪಡೆದುಕೊಂಡಿವೆ. ನಂಬಿಕೆಗಳು ಮನುಷ್ಯನ ಮಾನಸಿಕ ಸ್ಥಿತಿಗೆ ಸಂಬಂಧಿಸಿದ್ದ ಅವುಗಳನ್ನು ಎಲ್ಲಾ ಕಾಲ, ದೇಶ, ಜನಾಂಗದವರಲ್ಲಿಯೂ ಗುರುತಿಸಬಹುದು. ಪ್ರತಿಯೊಂದು ಸಂಸ್ಕೃತಿಯಲ್ಲಿಯೂ ಆಯಾ ಸಂಸ್ಕೃತಿಗೆ ವಿಶಿಷ್ಟವಾದ ನಂಬಿಕೆಗಳಿರುತ್ತವೆ. ಆದ್ದರಿಂದ ನಂಬಿಕೆಗಳನ್ನು ಪ್ರಾದೇಶಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯು ಗುರುತಿಸಬಹುದು. ಜನಪದ ನಂಬಿಕೆಗಳು, ಒಕ್ಕಲಿಗರ ನಂಬಿಕೆಗಳು, ಬುಡಕಟ್ಟು ನಂಬಿಕೆಗಳು, ಕಾಡುಗೊಲ್ಲರ ನಂಬಿಕೆಗಳು, ಬ್ರಾಹ್ಮಣರ ನಂಬಿಕೆಗಳು, ಅಕ್ಕಸಾಲಿಗರ ನಂಬಿಕೆಗಳು, ಮಡಿವಾಳರ ನಂಬಿಕೆಗಳು, ಬೇಡರ ನಂಬಿಕೆಗಳು, ದೊಂಬಿದಾಸರ ನಂಬಿಕೆಗಳು, ಕುರುಬರ ನಂಬಿಕೆಗಳು, ಕುಂಬಾರರ ನಂಬಿಕೆಗಳು ಹೀಗೆ ಜನಾಂಗ ಅಥವಾ ಜಾತಿಯ ನೆಲೆಯಲ್ಲಿ ಬಹಳ ವಿಸ್ತಾರವಾದ ನಂಬಿಕೆಗಳಿರುವುದನ್ನು ಗುರುತಿಸಬಹುದು.

ಪ್ರತಿಯೊಂದು ಜನಪದ ಸಂಸ್ಕೃತಿಯಲ್ಲಿಯೂ ಆಚರಣೆಗಳು ಪ್ರಧಾನವಾಗಿರುವುದನ್ನು ಕಾಣಬಹುದು. ಆಚರಣೆಗಳು ಪ್ರಮುಖವಾಗಿ ಧಾರ್ಮಿಕ ಆಯಾಮಗಳನ್ನು ಪಡೆದುಕೊಂಡಿರುತ್ತದೆ. ನಂಬಿಕೆಯನ್ನು ಆಧರಿಸಿದ ಆಚರಣೆಗಳು ರೂಪವನ್ನು ಪಡೆದಿರುತ್ತದೆ. ಆಚರಣೆಯು ದೈನಂದಿನ ಜೀವನಕ್ಕೆ ಸಂಬಂಧಿಸಿರದೆ ನಿರ್ದಿಷ್ಟವಾದ ಅಥವಾ ವಿಶೇಷವಾದ ಸಂದರ್ಭಕ್ಕೆ ಸಂಬಂಧಿಸಿರುತ್ತದೆ, ಆಚರಣೆಗಳಿಗೆ ನಿರ್ದಿಷ್ಟವಾದ ಉದ್ದೇಶವಿರುತ್ತದೆ, ಆಚರಣೆಗಳು ಕೌಟುಂಬಿಕ, ಸಾಮಾಜಿಕ, ಕೃಷಿ, ಧಾರ್ಮಿಕ ವಿಧಿಕ್ರಿಯೆಗಳು, ಉಪನಯನ, ಮದುವೆ ಮುಂತಾದ ಸಂದರ್ಭಗಳಲ್ಲಿ ಕಾಣಬಹುದು, ನಾಮಕರಣ, ಉಪನಯನ, ಒಸಗೆ, ವಿವಾಹ ಮುಂತಾದವು ವ್ಯಕ್ತಿಯ ಬದುಕಿನ ವಿವಿಧ ಘಟ್ಟಗಳಿಗೆ ಸಂಬಂಧಿಸಿದಂತೆ ನಡೆಯುವ ಕೌಟುಂಬಿಕ ಆಚರಣೆಗಳು, ಇಂತಹ ಸಂದರ್ಭಗಳಲ್ಲಿ ಮುಖ್ಯವಾಗಿ ಕುಟುಂಬದ ಬಂಧು ಬಳಗ ಮತ್ತು ಸ್ನೇಹಿತರು

ಪಾಲ್ಗೊಳ್ಳುತ್ತಾರೆ. ಸಂಕ್ರಾಂತಿ ಹಬ್ಬದ ಸಮಯದಲ್ಲಿ ಕಿಚ್ಚು ಹಾಯಿಸಿ ದನಕರುಗಳನ್ನು ಅದರಲ್ಲಿ ಓಡಿಸಿಕೊಂಡು ಹೋಗುವುದು, ಆಯುಧ ಪೂಜೆಯ ಸಂದರ್ಭದಲ್ಲಿ ಮನುಷ್ಯ ತಾನು ಉಪಯೋಗಿಸುವ ಎಲ್ಲ ವಸ್ತುಗಳಿಗೆ ಕೃತಜ್ಞತೆಯಿಂದ ಪೂಜೆ ಮಾಡುವುದು, ಕೃಷಿ ಚಟುವಟಿಕೆಗಳ ಸಂದರ್ಭದಲ್ಲಿ ಬಿತ್ತನೆ, ಕೊಯ್ಲು ಮುಂತಾದ ಸಂದರ್ಭಗಳಲ್ಲಿಯೂ ಆಚರಣೆಗಳಿರುತ್ತವೆ. ಆಚರಣೆಗಳು ಪ್ರಧಾನವಾಗಿ ವ್ಯಕ್ತಿಯ ಜೀವನ ಚಕ್ರದಲ್ಲಿ ಜನ ಅಥವಾ ಇಡೀ ಸಮುದಾಯದ ಕಾಲಮಾನದ ಚಕ್ರದಲ್ಲಿ ಎದುರಾಗುವ ಆತಂಕಗಳ ಸಂದರ್ಭಗಳಿಗೆ ಸಂಬಂಧಿಸಿದೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ, ವ್ಯಕ್ತಿಯ ಬದುಕಿನಲ್ಲಾಗಲಿ, ಸಾಮಾಜಿಕ ಬದುಕಿನಲ್ಲಾಗಲಿ, ಹಲವಾರು ರೀತಿಯ ಸಂಕ್ರಮಣಗಳು ನಡೆಯುತ್ತವೆ. ಒಂದು ಸ್ಥಿತಿಯಿಂದ ಮತ್ತೊಂದು ಸ್ಥಿತಿಗೆ ಬದಲಾವಣೆಯಾಗುವುದು ಈ ಸಂಕ್ರಮಣದ ಲಕ್ಷಣವಾಗಿರುತ್ತದೆ. ಆದ್ದರಿಂದ ಇಂತಹ ಸಂದರ್ಭಗಳಲ್ಲಿ ಆಚರಣೆಗಳನ್ನು ಮಾಡುವುದರಿಂದ ಯಾವುದೇ ರೀತಿಯ ತೊಂದರೆಯಾಗದೆ ತಮ್ಮ ಕುಟುಂಬದವರಿಗೆ ಒಳಿತಾಗಲಿ ಎಂಬ ಉದ್ದೇಶ ಮುಖ್ಯವಾಗಿರುತ್ತದೆ.

ಮರಣ ಎನ್ನುವುದು ಬದುಕಿನಿಂದ ಸಾವಿಗೆ ಸಂಕ್ರಮಣ, ಆದ್ದರಿಂದ ಮರಣಕ್ಕೆ ಸಂಬಂಧಿಸಿದಂತೆ ನಡೆಸುವ ಎಲ್ಲಾ ಆಚರಣೆಗಳು ಈ ಸಂಕ್ರಮಣ ಕ್ರಿಯೆ ಸುಸೂತ್ರವಾಗಿ ನಡೆಯಬೇಕು ಎಂಬ ಉದ್ದೇಶ ಮುಖ್ಯವಾಗಿರುತ್ತದೆ. ಈ ಕ್ರಿಯಾವಿಧಿಗಳಲ್ಲಿ ಅನೇಕ ನಿಷಿದ್ಧಗಳು ಇರುತ್ತದೆ. ಹೀಗೆ ವಿವಾಹ, ಜನನ, ನಾಮಕರಣ ಮುಂತಾದ ಸಂದರ್ಭದಲ್ಲಿ ಅನೇಕ ವಿಧಿ–ನಿಷೇಧಗಳಿವೆ.

ಉದಾ: ವಿವಾಹದ ಸಂದರ್ಭದಲ್ಲಿ ಅರಿಶಿನ ಹಚ್ಚುವುದು, ಎಣ್ಣೆ ಸ್ನಾನ ಮಾಡಿಸುವುದು, ಕಾಲುಂಗರ ಹಾಕುವುದು, ಬಳೆ ತೊಡಿಸುವುದು, ಕಂಕಣ ಕಟ್ಟುವುದು, ಅರಿಶಿನ ಬಟ್ಟೆ ತೊಡಿಸುವುದು ಇತ್ಯಾದಿಗಳು. ಅದೇ ರೀತಿ ಆಚರಣೆಗಳಲ್ಲಿ ಜೋಕುಮಾರನ ಪೂಜೆ, ಬೆಳ್ತಂಗಳಪ್ಪನ ಪೂಜೆ, ಕೊಂತಿ ಪೂಜೆ ಮುಂತಾದವುಗಳ ಕಾಣಬಹುದು. ಆಚರಣೆಗಳು ಮತ್ತು ಸಂಪ್ರದಾಯಗಳು ಪರಸ್ಪರ ಪೂರಕವಾದ ಸಂಬಂಧವನ್ನು ಜನಪದ ಸಂಸ್ಕೃತಿಯಲ್ಲಿರುವುದನ್ನು ಕಾಣಬಹುದು.

ಸಂಪ್ರದಾಯಗಳು ತಲೆಮಾರಿನಿಂದ ತಲೆಮಾರಿಗೆ ಮುಂದುವರಿಯುತ್ತ ಬರುತ್ತವೆ. ಪ್ರತಿಯೊಂದು ಧರ್ಮ, ಜನಾಂಗ, ಜಾತಿ, ಸಮಾಜಗಳಲ್ಲಿಯೂ ಕೂಡ ಹಲವಾರು ರೀತಿಯ ವೈವಿಧ್ಯಮಯವಾದ ಸಂಪ್ರದಾಯಿಗಳಿರುತ್ತವೆ. ಹಿಂದು ಧರ್ಮದಲ್ಲಿ ಮಹಿಳೆಯರು ಬಳೆ ತೊಡುವುದು, ಕುಂಕುಮ ಇಡುವುದು, ಹೂ ಮುಡಿಯುವುದು, ಕಾಲುಂಗುರ ಧರಿಸುವುದನ್ನು ಕಾಣಬಹುದು.

ಸಂಪ್ರದಾಯಗಳು ಕಾಲಕ್ಕೆ ಅನುಗುಣವಾಗಿ ಬದಲಾವಣೆಯನ್ನು ಪಡೆದುಕೊಳ್ಳುತ್ತವೆ. ಸಂಪ್ರದಾಯ ಅಥವಾ ಸಂಸ್ಕೃತಿಯ ಬದಲಾವಣೆಗೆ ಅನೇಕ ಕಾರಣಗಳಿವೆ. ಅವುಗಳಲ್ಲಿ ಪಾಶ್ಚಿಮಾತ್ಯೀಕರಣ, ಸಂಸ್ಕೃತೀಕರಣ, ಪ್ರಮುಖವಾದವುಗಳು. ಕೆಲವು ಸಂಪ್ರದಾಯಗಳಲ್ಲಿ ಬದಲಾವಣೆಯಾದರೆ ಮತ್ತೆ ಕೆಲವು ಧಾರ್ಮಿಕ ಸಂಪ್ರದಾಯಗಳಲ್ಲಿ ಯಾವುದೇ ರೀತಿಯ ಬದಲಾವಣೆಯಾಗುವುದಿಲ್ಲ. ಹಲವಾರು ಧಾರ್ಮಿಕ ಸಂಪ್ರದಾಯಗಳ ಸಂದರ್ಭದಲ್ಲಿ ಮಡಕೆಗಳನ್ನು ಬಳಸುವುದ ಕಡ್ಡಾಯವಾಗಿರುತ್ತದೆ. ಶವಸಂಸ್ಕಾರದ ಸಂದರ್ಭದಲ್ಲಿ ಮಡಿಕೆಯಿಂದಲೇ ಅನ್ನವನ್ನು ಬೇಯಿಸಲಾಗುತ್ತದೆ.

ಜನಪದರ ಜೀವನ ಮತ್ತು ಸಂಸ್ಕೃತಿಯಲ್ಲಿ ಜನಪದ ದೈವವನ್ನು ಪ್ರಮುಖವಾಗಿ ಗುರುತಿಸಬಹುದು. ಜನಪದರ ಭಕ್ತಿಯ ವಿಷಯದಲ್ಲಿ ಮುಖ್ಯವಾಗಿ ಎರಡು ಅಂಶಗಳನ್ನು ಗಮನಿಸಬೇಕಾಗುತ್ತದೆ. ಸ್ಥಾಯಿಯಾಗಿರುವ ದೈವ ಭಕ್ತಿ ಹಾಗೂ ಆ ಭಕ್ತಿಯ ಆಶ್ರಯದಲ್ಲಿ ಬೆಳೆದು ಬಂದ ಸಾಂಪ್ರದಾಯಿಕ ಆಚರಣೆಗಳು, ಗ್ರಾಮೀಣ ಜನಪದರ ಬದುಕಿನಲ್ಲಿ ನಡೆಯುವ ಜಾತ್ರೆ ಉತ್ಸವಗಳಲ್ಲಿ ಜನರು ಪಡೆಯುವ ಸಡಗರ, ನಂಬಿಕೆ, ಭಕ್ತಿ, ಉತ್ಸಾಹ

ಪ್ರಮುಖವಾಗಿ ಕಂಡುಬರುತ್ತದೆ. ಜನಪದರು ಪೂಜಿಸುವ ದೇವರನ್ನು ಮನೆದೇವರು, ಕುಲದೇವತೆ, ಗ್ರಾಮದೇವತೆ ಇನ್ನು ಮುಂತಾದ ರೀತಿಯಲ್ಲಿ ವರ್ಗೀಕರಿಸಬಹುದು. ಪರಂಪರಾಗತವಾಗಿ ಕುಟುಂಬದ ಹಿರಿಯರಿಂದ ಪೂಜಿಸಲ್ಪಡುವ ಕುಟುಂಬದ ದೇವರು 'ಮನೆದೇವರು' ಎಂದು ಕರೆಯಲಾಗುತ್ತದೆ. ವರ್ಷಕ್ಕೆ ಒಮ್ಮೆ ಅಥವಾ ಎರಡು ಬಾರಿ ಮನೆದೇವರಿಗೆ ಹೋಗಿ ಪೂಜೆಯನ್ನು ಸಲ್ಲಿಸುತ್ತಾರೆ. ಲಿಂಗಾಯಿತರಿಗೆ ವಿರಭದ್ರ, ಕುರುಬರಿಗೆ ಬೀರಪ್ಪ, ಪಂಚಾಳರಿಗೆ ಕಾಳಮ್ಮ, ನೀಲಗಾರರಿಗೆ ಮಂಟೆಸ್ವಾಮಿ, ಕಾಡುಗೊಲ್ಲರಿಗೆ ಜುಂಜಪ್ಪ, ಚೌಡಿಕೆಯರಿಗೆ ಸವದತ್ತಿ ಎಲ್ಲಮ್ಮ, ಗುಡ್ಡರಿಗೆ ಮಲೆಮಹದೇಶ್ವರ ಇತ್ಯಾದಿಯಾಗಿ ಗುರುತಿಸಬಹುದು. ಪ್ರತಿಯೊಂದು ಊರಲ್ಲಿಯೂ ಮಾರಮ್ಮ, ಪ್ಲೇಗಮ್ಮ, ಕಾಳಮ್ಮ, ಅಣ್ಣಮ್ಮ, ಎಲ್ಲಮ್ಮ, ದುರುಗವ್ವ, ದ್ಯಾಮವ್ವ, ಚೌಡೇಶ್ವರಮ್ಮ ಮುಂತಾದ ಗ್ರಾಮದೇವತೆಗಳಿರುತ್ತವೆ. ಕೆಲವು ದೇವರು ನಿರ್ದಿಷ್ಟ ಜಾತಿಯವರಿಂದ ಪೂಜಿಸಲ್ಪಡುವುದಾದರು ಇತರ ಜಾತಿಯವರು ಆ ದೇವರಿಗೆ ಭಕ್ತಿಯಿಂದ ನಡೆದುಕೊಳ್ಳುವುದುಂಟು.

ಪ್ರಕೃತಿಯ ಪೂಜೆಯು ಜನಪದ ಧರ್ಮದ ಪ್ರಮುಖ ಲಕ್ಷಣವಾಗಿರುತ್ತದೆ. ತಾವು ವಾಸಿಸುವ ಸಮೀಪದ ಕಾಡು, ಕಡಲು, ಕಲ್ಲು ಅವರಿಗೆ ಆರಾಧ್ಯ ವಸ್ತುವಾಗಿರುತ್ತದೆ. ಮುಂಗಾರು ಹಬ್ಬ ಮತ್ತು ಕಾಡು ಹಬ್ಬ ಮಳೆರಾಯನಿಗೆ ಕೃತಜ್ಞತೆಯನ್ನು ಸಲ್ಲಿಸುವ ಹಬ್ಬವಾಗಿರುತ್ತದೆ. ಮಳೆ ಬಾರದೆ ಹೋದಾಗ ತಿಂಗಳು ಮಾವನ ಪೂಜೆ, ಮಾರಿ ಪೂಜೆ, ತೊಗಲು ಗೊಂಬೆ ಆಡಿಸುವುದು ಕರ್ನಾಟಕದಾದ್ಯಂತ ಕಂಡುಬರುತ್ತದೆ.

ಇದಲ್ಲದೆ ಹಸು, ಕೋಣ, ಎತ್ತುಗಳನ್ನು ದೇವರ ವಾಹನವೆಂದು ಭಾವಿಸಿ ಪೂಜಿಸುವುದು ರೂಢಿಯಲ್ಲಿದೆ. ಸರ್ಪಾರಾಧನೆಯು ಎಲ್ಲೆಡೆಯು ಕಂಡು ಬರುತ್ತದೆ. ಮನೆಯ ಅಂಗಳದಲ್ಲಿ ತುಳಸಿ ಗಿಡವನ್ನು ಬೆಳಸಿ ಪೂಜಿಸುವ ಸಂಪ್ರದಾಯವು ಬಹುತೇಕ ಕುಟುಂಬಗಳಲ್ಲಿ ಕಂಡುಬರುತ್ತದೆ. ತೀರಿ ಹೋದ ಪೂರ್ವಿಕರ ಪೂಜೆಯು ಜನಪದ ಧರ್ಮದ ಒಂದು ಪ್ರಮುಖ ಅಂಗ ಎನ್ನಬಹುದು. ಅದನ್ನು ಹಿರಿಯರ ಪೂಜೆ ಅಥವಾ ಪಿತೃಪಕ್ಷ ಎಂಬ ಹೆಸರಿನಲ್ಲಿಯೂ ಕರೆಯಲಾಗುತ್ತದೆ. ಕರಾವಳಿಯಲ್ಲಿ ಭೂತರಾಧನೆಯನ್ನು ಪ್ರಮುಖವಾಗಿ ಕಾಣಬಹುದು, ಕುರಿ, ಕೋಳಿ, ಆಡುಗಳನ್ನು ಬಲಿಕೊಟ್ಟರೆ ದೈವಗಳಿಗೆ ತೃಪ್ತಿಯಾಗುತ್ತದೆ ಎಂಬ ನಂಬಿಕೆಯು ಜನಪದರಲ್ಲಿದೆ.

ಕುಲದೇವತಾ ಆರಾಧನೆ ಪದ್ಧತಿ ಜನಪದ ಧರ್ಮದ ಪ್ರಮುಖ ಭಾಗವಾಗಿದೆ. ಈ ಪದ್ಧತಿ ಒಂದು ಬುಡಕಟ್ಟಿನ ಅಥವಾ ಸಮುದಾಯ ತಮ್ಮ ಕುಲದ ಮೂಲವನ್ನು ಒಂದು ಪ್ರಾಣಿ ಅಥವಾ ಸಸ್ಯಗಳಲ್ಲಿ ಆರೋಪಿಸಿಕೊಂಡು ಅವುಗಳನ್ನ ತಮ್ಮ ಕುಲದೇವರು ಎಂದು ಆರಾಧಿಸಿಕೊಂಡು ಬರುತ್ತಾರೆ. ತಮ್ಮ ಕುಲದೇವತೆಯ ಲಾಂಛನವಾದ ಸಸ್ಯವನ್ನು ಅವರು ಕುಡಿಯುವುದಿಲ್ಲ. ಕುಲದೇವತಾ ಪ್ರಾಣಿಯ ಕೊಲ್ಲುವುದಿಲ್ಲ. ಮತ್ತು ಆಹಾರವಾಗಿ ಸೇವಿಸುವುದಿಲ್ಲ. ಉದಾ: ಕರಾವಳಿಯ ಕುಡುಬಿಯವರು ಕೋಳಿಯನ್ನು ಕೊಲ್ಲುವುದಿಲ್ಲ ಮತ್ತು ತಿನ್ನುವುದಿಲ್ಲ

ಜನಪದ ಸಂಸ್ಕೃತಿ ಮತ್ತು ಜನಪದ ಜೀವನದಲ್ಲಿ ಕುಣಿತವು ಒಂದು ಪ್ರಮುಖವಾದ ಅಂಗ ಎನ್ನಬಹುದು. ಜನಪದ ಕುಣಿತಗಳು ಧಾರ್ಮಿಕ ಆಚರಣೆಯ ಸಂದರ್ಭಗಳಲ್ಲಿ ವಿಶೇಷವಾಗಿ ಕಂಡು ಬರುತ್ತವೆ. ಧಾರ್ಮಿಕ ಆಚರಣೆಯ ಅಂಗವಾಗಿ ಕುಣಿಯುವ ಕುಣಿತಗಳು ಮತ್ತು ಮನರಂಜನೆಗಾಗಿ ಕುಣಿಯುವ ಕುಣಿತಗಳನ್ನು ಮುಖ್ಯವಾಗಿ ಕಾಣಬಹುದು. ಪುರವಂತಿಕೆಯ ಕುಣಿತ ಮತ್ತು ಕರಗದ ಕುಣಿತ ಧಾರ್ಮಿಕ ಆಚರಣೆಯ ಭಾಗವಾಗಿ ಕಂಡು ಬರುತ್ತವೆ. ಹಳೆ ಮೈಸೂರು ಭಾಗದಲ್ಲಿ ಸೋಮನ ಕುಣಿತ, ನಂದಿಕೋಲು ಕುಣಿತ, ವೀರಭದ್ರನ ಕುಣಿತ ಮುಂತಾದವನ್ನು ಕಾಣಬಹುದು. ಉತ್ತರ ಕನ್ನಡ ಜಿಲ್ಲೆಯಲ್ಲಿ ಸಿಂಹದ ಕುಣಿತ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಭೂತದ ಕುಣಿತ, ದುರಿಡಿಕುಣಿತ, ಕರಾವಳಿಯ ಯಕ್ಷಗಾನ ಮತ್ತು ಬಯಲಾಟದ ಕುಣಿತಗಳು ಕಂಡು ಬರುತ್ತವೆ. ಹೀಗೆ ಜನಪದ

ಸಂಸ್ಕೃತಿ ಮತ್ತು ಜನಪದ ಜೀವನವೇ ಒಂದು ರೀತಿಯಲ್ಲಿ ಬಹಳ ವಿಶಿಷ್ಟವಾದದು.

**ಪರಾಮರ್ಶನ ಗ್ರಂಥಳು:**


- ಮಂಜುನಾಥ ಬಿ.ಆರ್. ಮತ್ತು ಶೈಲಜ ಕೆ. (2020). ಜಾನಪದ ಸಂಸ್ಕೃತಿ. ವಾಚಸ್ಪತಿ ಪ್ರಕಾಶನ.
- ರಾಮಚಂದ್ರೇಗೌಡ ಹಿ.ಶಿ. (2009). *ಜನಪದ ಸಂಸ್ಕೃತಿ.* ಕರ್ನಾಟಕ ನಾಟಕ ಅಕಾಡೆಮಿ.
- ರಾಮಚಂದ್ರೇಗೌಡ ಹಿ.ಶಿ. (1998). *ಜಾನಪದ: ಸಾಂಸ್ಕೃತಿಕ ಆಯಾಮಗಳು.* ಕನ್ನಡ ಪುಸ್ತಕ ಪ್ರಾಧಿಕಾರ.
- ತಪಸ್ವಿ ಕುಮಾರ್. ನಂ. (1970). ಜನಪದ ಸಂಸ್ಕೃತಿ. ಪ್ರಬುದ್ಧ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 90-94
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಜಾನಪದ ಸಾಹಿತ್ಯ ಮತ್ತು ಪರಿಸರವಾದ ಸಾಹಿತ್ಯ ಸಂಶೋಧನೆ ಹೊಸ ಸಾಧ್ಯತೆಗಳು

**ಡಾ. ಕೆ.ಆರ್. ಮೆಳವಂಕಿ**
ಮುಖ್ಯಸ್ಥರು, ಕನ್ನಡ ವಿಭಾಗ, ಕಿ.ನಾ.ವಿ.ವ ಸಂಘದ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ ಕಿತ್ತೂರು, ಬೆಳಗಾವಿ ಜಿಲ್ಲೆ.

**Abstract:**
*ಒಂದು ಕಾಲದಲ್ಲಿ "ಗೊರವರ ಡುಂಡುಚಿ ಬೀದಿವರೆದ ಬೀರನ ಕತೆ" ಎಂದು ಮೂಗು ಮುರಿಸಿಕೊಂಡ ಜಾನಪದ ಜಾಗತೀಕರಣದ ಈ ಸಂದರ್ಭದಲ್ಲಿ ವಿಶ್ವದ ಗಮನ ಸೆಳೆದಿದೆ. ಜಾಗತೀಕರಣವನ್ನು ಅರಗಿಸಿಕೊಳ್ಳಲು ಜಾನಪದದಿಂದ ಮಾತ್ರ ಸಾಧ್ಯವೆಂಬ ನಿಲುವನ್ನು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಜಾನಪದ ಒಂದು ಪ್ರದೇಶದ ಸಂಸ್ಕೃತಿ ಅದು ಆ ನೆಲದ ಜೀವನ ವಿಧಾನ ಹೀಗಾಗಿ Folk ಮತ್ತು Folklore ಗಳಿಗೆ ಸಂಬಧಿಸಿದಂತೆ ಜೀವನ ವಿಧಾನದ ಎಲ್ಲ ಆಯಾಮಗಳನ್ನು ಒಳಗೊಂಡಿರುವುದು ಜಾನಪದ 'ಜನಪದ ಒಂದೊಂದು ವಿಷಯದ ಬಗೆಗೆ ಹೇಳಿದೆ. ಏಳನೇ ಶತಮಾನದ ಬಾದಾಮಿ ಶಾಸನದಲ್ಲಿ ಜನಪದ ತ್ರಿಪದಿಗಳನ್ನು ಕಾಣುತ್ತೇವೆ. ಬಹುಮುಖಿ ನೆಲೆಗಳಿಂದ ಬೆಳೆದುಕೊಂಡು ಬಂದ "ಜಾನಪದ" ಇಂದು ಬಹು ಅಧ್ಯಯನಗಳ ಸಂಶೋಧನೆಗೆ ತಾಯಿಬೇರಾಗಿದೆ.*

**Keywords:** *ಜಾನಪದ, ಪರಿಸರವಾದ, ಮೌಖಿಕ ಸಾಹಿತ್ಯ, ಜನಪದ ನಂಬಿಕೆ ಮತ್ತು ಆಚರಣೆಗಳು.*

**ಪೀಠಿಕೆ**

ಜನಪದ ಸಾಹಿತ್ಯದ ರೂಪಗಳಾದ ತ್ರಿಪದಿ, ಲಾವಣಿ, ಗೀತೆ, ಕಥೆ, ಒಗಟು, ಒಡಪು, ದೊಡ್ಡಾಟ, ಸಣ್ಣಾಟ, ಯಕ್ಷಗಾನ ಹೀಗೆ ವಿವಿಧ ಪ್ರಕಾರಗಳಂತೆ ಪರಿಸರಕ್ಕೆ ಸಂಬಂಧಿಸಿದ ಜಾನಪದ ಸಂಶೋಧನೆ, ಅಧ್ಯಯನ ಇಂದು ಬಹು ಮುಖ್ಯವಾದ ಅಂಗವಾಗಿದೆ. ದೈವದತ್ತವಾಗಿದ್ದ ಪರಿಸರ ಇಂದು ವಿಜ್ಞಾನವಾಗಿ ಬೆಳೆಯತೊಡಗಿದೆ. ಪರಿಸರ ವಿಜ್ಞಾನದಲ್ಲಿ ಅನೇಕ ಸಂಶೋಧನೆಗಳು ಸಾಗಿವೆ. ಪರಿಸರ ಪಂಚಭೂತಗಳಿಂದ ಆವೃತವಾಗಿದ್ದು, ಪೃಥ್ವಿ, ಅಪ್, ತೇಜು, ವಾಯು, ಆಕಾಶ ಈ ಪಂಚಭೂತ ಪರಿಕಲ್ಪನೆಗಳು ಜನಪದದಲ್ಲಿ ಜೀವ ಸಂಬಂಧ ಆಯಾಮಗಳಾಗಿ ಬೆಳೆದಿವೆ. ಜನಪದರಿಗೆ ಭೂಮಿ ಬರಿ ಮಣ್ಣಲ್ಲ, ನೆಲದೇವತೆ, ಭೂದೇವಿ ಎನ್ನುತ್ತಾರೆ. ನೀರು ಜಲದೇವತೆ ಅದೇ ರೀತಿ ಆಕಾಶ, ಅಗ್ನಿ, ಗಾಳಿ ಇವು ಕೂಡಾ ದೇವತೆಗಳೇ ಆಗಿವೆ. ಪುರೋಹಿತರು ಅಗ್ನಿ ಸಂಸ್ಕೃತಿಗೆ ಮಹತ್ವ ನೀಡಿದರೆ, ಜನಪದರು ಜಲಸಂಸ್ಕೃತಿಗೆ ಪ್ರಾಮುಖ್ಯತೆ ಕೊಡುತ್ತಾರೆ. ಸಂಸ್ಕೃತಿಯಿಂದ ಸಂಸ್ಕೃತಿಗೆ, ಜನಾಂಗದಿಂದ ಜನಾಂಗಕ್ಕೆ, ಪಂಚ ಭೂತಗಳ ಪರಿಕಲ್ಪನೆ, ಅರ್ಥವ್ಯಾಪ್ತಿ ಬದಲಾಗುತ್ತದೆ.

ಪಂಚ ಮಹಾಭೂತಗಳಲ್ಲಿ ಒಂದಾದ ಭೂಮಿ ಸಕಲ ಜೀವರಾಶಿಗೆ ಆಧಾರ, ಪ್ರಕೃತಿ ಆದಿಶಕ್ತಿ ಐಶ್ವರ್ಯ ಎಂದರೆ ಭೂಮಿ "ಜನನಿ ಜನ್ಮಭೂಮಿ ಸ್ವರ್ಗಾದಪಿ ಗರಿಯಸಿ" ಎಂಬುದು ಪ್ರಸಿದ್ಧ ಉಕ್ತಿ

***Please cite this article as:*** ಮೆಳವಂಕಿ. ಕೆ.ಆರ್. (2024). ಜಾನಪದ ಸಾಹಿತ್ಯ ಮತ್ತು ಪರಿಸರವಾದ ಸಾಹಿತ್ಯ ಸಂಶೋಧನೆ ಹೊಸ ಸಾಧ್ಯತೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 90–94

"ಅವ್ವನ ಸೀರಿ ಮಡಚಾಕ ಆಗಲ್ಲ (ಭೂಮಿ) ಅಪ್ಪನ ರೊಕ್ಕಾ ಎಣಸಾಕ ಆಗಲ್ಲ (ಆಕಾಶ ಮತ್ತು ನಕ್ಷತ್ರಗಳು)" ಎಂಬುದು ಜನಪದ ಒಗಟು ಪಂಚಭೂತಗಳ ಸುತ್ತ ಇಂಥ ಅನೇಕ ಕಲ್ಪನೆಗಳು, ನಂಬಿಕೆಗಳು ಭಾವನೆಗಳು ರೂಢಿಯಲ್ಲಿವೆ, ಕವಿಗಳು, ಅನುಭಾವಿಗಳು, ಭೂಮಿಯ ಸೌಂದರ್ಯವನ್ನು ಕವಿತೆ ಕಟ್ಟಿ ಹಾಡಿ ಹೋಗಳಿದ್ದಾರೆ. ವಿಜ್ಞಾನಿಗಳು ಭೂಮಿಯ ರಹಸ್ಯವನ್ನು ಬಯಲುಗೊಳಿಸಿದ್ದಾರೆ. ಭೂಮಿ ಇಲ್ಲದೆ ಬದುಕೇ ಇಲ್ಲ ಮಹಾಕಾವ್ಯಗಳಿಂದ ಹನಿಗವನಗಳವರೆಗೆ ಭೂಮಿಯ ವಸ್ತು ವೈವಿಧ್ಯ ಹರಡಿಕೊಂಡಿದೆ. ಅಂತೆಯೇ ಕವಿ–ಮಧುರ ಚನ್ನ 'ದೇವತಾ ಪೃಥಿವಿ' ಕವನದಲ್ಲಿ ಭೂಮಿತಾಯಿಯನ್ನು ಬೇಡಿಕೊಂಡಿದ್ದಾರೆ.

"ಈ ಗಾಳಿನಿನ್ನಸಿರು ಈ ಬೆಂಕಿ ಮೈಗಾವ ಮುದುಡಿದ ಮೊಗ್ಗಿ ಅರಳಿಸ/ಏಳಮ್ಮ ಮಲಗಿರುವ ತಾಯಿ ಪೃಥಿವಿ." "ಭೂಮಿತಾಯಿ ಕೆಲವರಿಗೆ ರಕ್ಕಸಿಯಾಗಿ ಕೆಲವರಿಗೆ ಮಾಯೆಯಾಗಿ ಕಂಡಿದ್ದಾಳೆ ಬೇಂದ್ರೆಯವರು ಹೇಳುವಂತೆ"–"ಇಳೆಯೆಂಬುದು ಬರಿ ಮಣ್ಣಲ್ಲ, ನಮಗೆ ನೋಡುವ ಕಣ್ಣಿಲ್ಲ" ಅರಿವಿನ ಕಣ್ಣಿಗೆ ಮಾತ್ರ ಭೂಮಿ ತಾಯಿಯ ಒಡಲಿಲ್ಲ ಹರಿಯುವ ಮಮತೆಯ ಕಡಲು ಕಾಣಿಸುತ್ತದೆ ಅದರ ವಾತ್ಸಲ್ಯ ಅನುಭವಕ್ಕೆ ಬರುತ್ತದೆ. ಪ್ರಕೃತಿಯ ವಿಕಾಸದ ಸಂಕೀರ್ಣ ಘಟ್ಟವೊಂದರಲ್ಲಿ ಮೂಡಿ ಬಂದ ಮನುಷ್ಯ ಸ್ವಯಂ ಜಾಗೃತಿಯ ವಿಶೇಷ ಗುಣವನ್ನು ಪಡೆದಿದ್ದಾನೆ.

ಭೂಮಿಯಿಂದ ಬರುವ ಉತ್ಪನ್ನವಾದ ಖನಿಜ–ಗಿಡ–ಮರಗಳು ಅನೇಕ ಸಸ್ಯಗಳು ಔಷಧಿಯಾಗಿರುವದರ ಜೊತೆಗೆ ಆರಾಧನೆಯ ವಸ್ತುಗಳು ಆಗಿವೆ. ಆಲದಮರ – ಅರಳಿಮರ – ಬಸರಿಮರಗಳನ್ನು ಭಕ್ತಿಯಿಂದ ಪೂಜಿಸುತ್ತಾರೆ. ಬಿಲ್ವ, ತುಳಸಿ ಪವಿತ್ರ ಸಸ್ಯಗಳಾಗಿವೆ. ಶ್ರೀ ವಿಷ್ಣು ಅಶ್ವತ್ಥ ಮರದಲ್ಲಿರುವನೆಂದು ಪೌರಾಣಿಕ ನಂಬಿಕೆಯಿದೆ ಇವುಗಳಿಗೆ ಪ್ರದಕ್ಷಿಣಿ ಮಾಡಿದರೆ ಮಕ್ಕಳಾಗುತ್ತವೆಂಬ ನಂಬಿಕೆಯಿದೆ ಇಂಥವುಗಳ ಸಂಶೋಧನೆ ಅಗತ್ಯವಾಗಿದೆ. ಅಂತೆಯೇ ಹರಿಹರ ಮಹಾಕವಿ ಪುಷ್ಪರಗಳೆಯನ್ನೇ ಬರೆದು ನೂರಾರು ಪುಷ್ಪಗಳನ್ನು ಗಿಡಮರಗಳನ್ನು ಹೆಸರಿಸಿ ಭಕ್ತಿಯಿಂದ ಬೇಡಿಕೊಂಡಿದ್ದಾನೆ. ನರ–ಹರ ಸಾಗುವ, ಜೀವ ದೇವನಾಗುವ, ವ್ಯಕ್ತಿ–ಶಕ್ತಿಯಾಗುವ ಸಾಧನಗಳು ಇಲ್ಲಿವೆ ಸಾಮಾನ್ಯವಾದ ಮಣ್ಣು ಜೀವನದಲ್ಲಿ ಮೂರ್ತಿ ಸ್ವರೂಪ ಪಡೆದು ದೇವತೆಯಾಗಿದೆ. ಸಾಧಾರಣವಾದ ಕಲ್ಲು, ಶಿಲ್ಪಿ ಮೂರ್ತಿಯಾಗಿ ಗ್ರಾಮ ದೇವತೆಯಾಗಿ ಪೂಜೆಗೊಳ್ಳುತ್ತದೆ. ಜನಪದರ ದೈವ ಕಲ್ಪನೆಯೇ ತುಂಬಾ ಜನಪದವಾಗಿದೆ, ಜೀವಪರವಾದುದಾಗಿದೆ.

ಜಾಗತೀಕರಣದ ಈ ಸಮಯದಲ್ಲಿ ಆಧ್ಯಾತ್ಮ, ಅನುಭಾವ ದೇವರ ಪರಿಕಲ್ಪನೆಗಳು ಬೇರೆಯಾಗ ತೊಡಗಿವೆ. ಪರಸ್ಪರರಲ್ಲಿ ನಂಬಿಕೆ ದ್ರೋಹ ಹೆಚ್ಚಾಗಿದೆ. ಮನುಷ್ಯ ಸಂಬಂಧಗಳೆಲ್ಲ ವ್ಯವಹಾರಿಕವಾಗತೊಡಗಿವೆ. ಮತಿಗಳು ಮಾರಾಟದ ವಸ್ತುವಾಗಿರುವ ಪ್ರಸ್ತುತ ಸಂದರ್ಭದಲ್ಲಿ ಸಾಂಸ್ಕೃತಿಕ ಜಾನಪದ ಅಧ್ಯಯನ ಅತ್ಯಂತ ಅಗತ್ಯವಾದುದು ಜನಸಾಮಾನ್ಯರ ಕತೆಯೇ ಜಾನಪದ ಕಲೆಯಾಗಿದೆ. ಅವರು ಚಿತ್ರಕತಿ, ಶಿಲ್ಪಕಲೆ ಹಾಗೂ ರಂಗಕತಿಗಳಿಗೆ ನೀಡಿದ ಕೊಡುಗೆಗಳನ್ನು ಗಮನಿಸುವಂತಿದೆ. ಎಲ್ಲಿ ಜನಪದ ಕತಿಗಳ ವರ್ಗೀಕರಣ ಜಟಿಲವಾದುದು, ದೊಡ್ಡಾಟ, ಸಣ್ಣಾಟ–ಯಕ್ಷಗಾನ ಕತಿಗಳು ತುಂಬಿವೆ. ಇವು ಜನಪದರ ಪ್ರತಿಭೆಗೆ ಸಾಕ್ಷಿಯಾಗಿವೆ. ಜನಪದರ ನ್ಯಾಯ ಪದ್ಧತಿ, ಪಂಚಾಯತ್ ವನವಸ್ಥೆಯಂತಹ ಸಾಮುದಾಯಿಕ ಸಂಸ್ಥೆಗಳು ಇಲ್ಲಿ ಉತ್ತಮ ಶಿಕ್ಷಣವನ್ನು ನೀಡುತ್ತಾ ಬಂದಿವೆ. ಕೇವಲ ಅಕ್ಷರಗಳ ಮೂಲಕ ಕಲಿಯುವ ಯಾಂತ್ರಿಕ ಶಿಕ್ಷಣ ಪದ್ಧತಿಗಿಂತ ಶ್ರದ್ಧೆಯಿಂದ ತಿಳಿಸುತ್ತಿದ್ದ ಅಂದಿನ ಮೌಖಿಕ ಪರಂಪರೆಯ ಶಿಕ್ಷಣ ಜನ ಸಮುದಾಯದಲ್ಲಿ ಉನ್ನತ ಮೌಲ್ಯಗಳನ್ನು ಬೆಳೆಸಿದೆ ಅಂತಃಕರಣವನ್ನು ತುಂಬಿದೆ. ಜಾನಪದ ಕ್ರೀಡೆಗಳಿಗೆ ಉತ್ತೇಜನ ಕೊಡುವುದರೊಂದಿಗೆ ಅವುಗಳನ್ನು ಗುರುತಿಸುವುದು ಹೊಸ ಸಂಶೋಧನೆಯ ಸಾಧ್ಯತೆಯನ್ನು ನಿರೂಪಿಸುತ್ತದೆ.

ಜಾಗತೀಕರಣದ ಈ ಸಂದರ್ಭದಲ್ಲಿ ಅನೇಕ ಪರಿಸರವಾದಿಗಳು ಪರಿಸರಿದ ಮೇಲಾಗುತ್ತಿರುವ ದೌರ್ಜನ್ಯವನ್ನು ವಿರೋಧಿಸುತ್ತ ಸಾಹಿತ್ಯ ರಚನೆ ಮಾಡಿದ್ದಾರೆ ಅಂಥವರಲ್ಲಿ ಡಾ. ಮುರಾರಿ ಬಲ್ಲಾಳರು ಒಬ್ಬರು ಡಾ. ಮುರಾರಿ ಬಲ್ಲಾಳರು ಉಡುಪಿಯಲ್ಲಿ ಆಧುನಿಕ ಋಷಿಯಂತೆ ಬದುಕಿದವರು, 1949 ರಲ್ಲಿ ಜನಿಸಿದ ಇವರು ಅರ್ಥಶಾಸ್ತ್ರದಲ್ಲಿ ಪಿಎಚ್.ಡಿ ಪದವಿ ಪಡೆದವರು ಬಂಡವಾಳಶಾಹಿ ಆರ್ಥಿಕ ನೀತಿಯನ್ನು ಸ್ಪಷ್ಟವಾಗಿ ತಿರಸ್ಕರಿಸಿ ಗಾಂಧೀಜಿಯವರ ಸರ್ವೋದಯ ತತ್ವವನ್ನು ನಂಬಿದವರು. ಸಕ್ರೀಯ ಪರಿಸರ ಹೋರಾಟಗಾರರಾಗಿದ್ದ ಡಾ.ಮುರಾರಿ ಬಲ್ಲಾಳರು ಈ ಪ್ರಪಂಚ ಸತ್ಯ ಎನ್ನುವುದನ್ನು ನೈತಿಕವಾಗಿ ಒಪ್ಪಿಕೊಂಡಿದ್ದರು. ಪ್ರಪಂಚವನ್ನು ಮನುಷ್ಯನಾಶ ಮಾಡಬಲ್ಲ ಎಂಬ ಭಯ ಅವರನ್ನು ಕಾಡುತ್ತಿತ್ತು. ಪರಿಸರ ಪ್ರೇಮಿಗಳಾದ ಜಿಡ್ಡು ಕೃಷ್ಣಮೂರ್ತಿಯವರ ಅನೇಕ ಪುಸ್ತಕಗಳನ್ನು ಅನುವಾದಿಸಿರುವ ಇವರು "ಸತ್ಯದ ನವದರ್ಶನ" "ಉಡುಪಿಯ ಸಾಂಸ್ಕೃತಿಕ ಕಥನ", "ಒಂಟಿಧ್ವನಿ" ಮುಂತಾದ ಪರಿಸರವಾದ ಸಾಹಿತ್ಯ ರಚನೆ ಮಾಡಿದ್ದಾರೆ.

ಆಧುನಿಕ ಜಗತ್ತಿನಲ್ಲಿ ಅಭಿವೃದ್ಧಿ ಸಂಕೇತವಾದ ಭವದ ಕಬ್ಬಡಿಗಳಿಗೆ ಬಳಸುವ ಕಾಂಕ್ರೀಟ ಉತ್ಪಾದನೆ ಪ್ರಕ್ರಿಯೆಯಿಂದಾಗುವ ಪರಿಸರ ನಾಶವನ್ನು ?? ತೋರಿಸುವ ಡಾ.ಮುರಾರಿ ಬಲ್ಲಾಳರು ನಗರೀಕರಣದಿಂದಾಗುವ ಪರಿಸರ ಮಾಲಿನ್ಯಕ್ಕೆ ಕಾಂಕ್ರೀಟು ಮನೆಗಳೇ ಕಾರಣವವೆಂದು ಪ್ರತಿಪಾದಿಸುತ್ತಾರೆ. ಹಿಂದಿನ ಕಾಲದ ಕಟ್ಟಡ ರಚನಾ ಶೈಲಿ ಪ್ರಾದೇಶಿಕ ವೈಶಿಷ್ಟ್ಯವನ್ನು ಹೊಂದಿ ಪರಿಸರಕ್ಕೆ ಆಪ್ತವಾಗಿ ಅದು ನೆಲದ ಒಂದು ಭಾಗದಂತೆ ಕಾಣುತ್ತಿತ್ತು ಪರಿಸರಕ್ಕೆ ಆಪ್ತವಾಗಿತ್ತು ಎಂದು ಹೇಳುತ್ತಾರೆ. ಹಿಂದಿನ ಮನೆಗಳು ಪರಿಸರದ ಜೊತೆಗೆ ಸಾಮರಸ್ಯ ಸಂಬಂಧವನ್ನು ಹೊಂದಿದ್ದವು ಆದರೆ ಕಾಂಕ್ರೀಟು ಕಟ್ಟಡಗಳು ನೈಸರ್ಗಿಕವಾಗಿ ತಟಸ್ಥವಾಗಿರುತ್ತವೆ ಎಂದು ಗಮನ ಸೆಳೆಯುತ್ತಾರೆ ಮನುಷ್ಯನ ಬದುಕಿನ ಬಗೆಗಿದ್ದ ಅಖಂಡ ದೃಷ್ಟಿಯನ್ನು ಕಳೆದುಕೊಂಡು ಸಂಕುಚಿತ ಮನೋಭಾವ ತಿಳಿಸಿಕೊಂಡದ್ದೆ ಇದಕ್ಕೆ ಕಾರಣವೆಂದು ವಿಶ್ಲೇಷಿಸುವ ಅವರು ಮನುಷ್ಯನ ಗ್ರಹಿಕೆಯಲ್ಲಿಯೇ ಮೂಲಭೂತ ಕ್ರಾಂತಿಯಾಗಬೇಕೆಂದು ಅಭಿಪ್ರಾಯಪಡುತ್ತಾರೆ.

1964 ರಲ್ಲಿ ಜನಿಸಿದ ಶ್ರೀಮತಿ ಸತ್ಯಾ ಅವರು ಸರಕಾರಿ ಮತ್ತು ಸರಕಾರೇತರ ಸಂಘಟನೆಗಳ ಮೂಲಕ ಸಮುದಾಯದ ಜಾಗೃತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಪರಿಸರ ನಿರ್ವಹಣೆ ಮಾಡುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಕನ್ನಡಪ್ರಭ, ಜನವಾಹಿನಿ, ಟೈಮ್ಸ್ ಆಫ್ ಇಂಡಿಯಾ ಮುಂತಾದ ಪತ್ರಿಕೆಗಳಲ್ಲಿ ಕಾರ್ಯನಿರ್ವಹಿಸಿದ್ದಾರೆ. ಉದಯವಾಣಿ ದಿನ ಪತ್ರಿಕೆಯ ಮಹಿಳಾ ಸಂಪದದಲ್ಲಿ ಪ್ರಕಟವಾಗುತ್ತಿದ್ದ "ಮನದ ಮಾಮರ" ಎಂಬ ಅಂಕಣ ಅವರಿಗೆ ಜನಪ್ರೀಯತೆಯನ್ನು ಒದಗಿಸಿದೆ. "ನಾವು ಮತ್ತು ನಮ್ಮ ಪರಿಸರ" ಎಂಬ ಡಾ. ಸಬಿಹಾ ಭೂಮಿಗೌಡಾ ಸಂಪಾದಿಸಿದ ಪುಸ್ತಕದಲ್ಲಿ ಪರಿಸರ ರಕ್ಷಣೆಯಲ್ಲಿ ತಮ್ಮನ್ನು ಗುರ್ತಿಸಿಕೊಳ್ಳಲು ಮಹಿಳೆಯರು ಹೆಣಗಿದ ರೀತಿಯನ್ನು ವಿವರಿಸಿದ್ದಾರೆ. ಪರಿಸರದ ಜೊತೆಗೆ ಸಹಜ ಸಂಬಂಧವನ್ನು ಹೊಂದಿರುವ ಮಹಿಳೆ ಬೀಜ ರಕ್ಷಣೆ ಮಣ್ಣಿನ ಸವಕಳಿ ತಡೆ, ಬೆಳೆ ವೈವಧ್ಯತೆ ರಕ್ಷಣೆಯಲ್ಲಿ ತನ್ನದೇ ಆದ ಪಾರಂಪರಿಕ ಜ್ಞಾನವನ್ನು ಬಳಸುತ್ತಿದ್ದಾಳೆ. ಆದರೂ ಅವಳ ಕಾಳಜಿಗೆ ಶ್ರಮಕ್ಕೆ ಸೂಕ್ತ ಪ್ರತಿಫಲ ದೊರಕುತ್ತಿಲ್ಲ ಎಂದು ವಿಷಾದಿಸುವ ಲೇಖಕ ಖಾಸಗಿಯಾಗಲಿ, ಸಾರ್ವಜನಿಕವಾಗಲಿ ಎಲ್ಲಾ ಆಸ್ತಿಗಳಲ್ಲಿ ಮಹಿಳೆಯರಿಗೂ ಸಮಾನ ಪಾಲು ಸಮಾನ ಹಕ್ಕು ದೊರೆತರೆ ಪರಿಸರ ನಾಶದಂತಹ ಸಮಸ್ಯೆ ಪರಿಹಾರವಾಗಬಲ್ಲದು ಎನ್ನುತ್ತಾರೆ.

ಜೂನ್ 26, 1953 ರಲ್ಲಿ ಜನಿಸಿದ ಶ್ರೀ ಸಿ. ಯತಿರಾಜರು ತುಮಕೂರಿನ ಕಾಳಿದಾಸ ಪದವಿಪೂರ್ವ ಮಹಾವಿದ್ಯಾಲಯದ ಪ್ರಾಚಾರ್ಯರಾಗಿದ್ದು ಸಮುದಾಯ ಸಾಂಸ್ಕೃತಿಕ ಸಂಘಟನೆಯಲ್ಲಿ ತೊಡಗಿ ಕಲಾ ಜಾಥಾಗಳ ಮೂಲಕ

ವೈಚಾರಿಕ ಮತ್ತು ವೈಜ್ಞಾನಿಕ ಸಂಗತಿಗಳ ಪ್ರಚಾರ ಕಾರ್ಯದಲ್ಲಿ ನಿರತರಾಗಿದ್ದಾರೆ. ಪ್ರಜಾವಾಣಿ, ಕನ್ನಡಪ್ರಭ, ವಿಜಯ ಕರ್ನಾಟಕ ಪತ್ರಿಕೆಗಳಲ್ಲಿ ಪರಿಸರ ಅಭಿವೃದ್ಧಿ ಶಿಕ್ಷಣ ಕುರಿತು ಅನೇಕ ಲೇಖನಗಳನ್ನು ಪ್ರಕಟಿಸಿದ್ದಾರೆ. 'ನೆಲದ ಮಾತು' ಪರಿಸರ ಪತ್ರಿಕೆಯ ಸಂಪಾದಕರಾಗಿದ್ದ ಇವರು ಪ್ರಸ್ತುತ "ಧರಣಿ ಮಂಡಲ" ಎಂಬ ಪರಿಸರ ಮತ್ತು ಅಭಿವೃದ್ಧಿಗೆ ಮೀಸಲಾದ ಪತ್ರಿಕೆಯ ಸಂಪಾದಕರಾಗಿದ್ದಾರೆ. "ನೆಲ ನೀರು" "ವಿಜ್ಞಾನ ಲೋಕದ ವಿಶ್ವಾಮಿತ್ರ – ಮೇಘನಾದಕ್ಷಹಾ" "ನಿಸರ್ಗ ಸಮಾಜ ವಿಜ್ಞಾನ" "ಜೀವ ಲೋಕದ ಕಿಂದರ ಜೋಗಿ", "ಹಿರೋಸೀಮಾದಿಂದ ಬುದ್ಧನ ನಗುವಿನವರೆಗೆ" "ಕರಗುತ್ತಿರುವ ಹಿಮ ಆತಂಕದ ವಿಷಯವೇ!" ಮುಂತಾದ ವೈಜ್ಞಾನಿಕ ಪುಸ್ತಕಗಳನ್ನು ರಚಿಸಿದ್ದಾರೆ. "ನೆಲದ ಮಾತು" ಎಂಬ ಪತ್ರಿಕೆಯಲ್ಲಿ ಭವಿಷ್ಯದಲ್ಲಿ ಯುದ್ಧಗಳಿಗೆ ಜಲ ಕಾರಣವಾಗಲಿದೆ. ಹೆಚ್ಚುತ್ತಿರುವ ಜನಸಂಖ್ಯೆ, ಕೈಗಾರಿಕೀಕರಣ, ಏಕಬೆಳೆ ಸಂಸ್ಕೃತಿಗಳು ನೀರಿನ ಬೇಡಿಕೆಗಳನ್ನು ಅಧಿಕಗೊಳಿಸುತ್ತಿವೆ. ವೈವಿಧ್ಯಮವಾದ ಭೊಗೋಳಿಕ ಅಂಶಗಳನ್ನು ಹೊಂದಿರುವ ನಮ್ಮ ದೇಶದಲ್ಲಿ ಕೆಲವು ಕಡೆ ಬರ ಕಾಡುತ್ತಿದ್ದರೆ, ಕೆಲವು ಕಡೆ ನೆರೆಹಾವಳಿ ಕಾಡುತ್ತದೆ. ದೇಶದ ಎಲ್ಲ ನದಿಗಳನ್ನು ಪರಸ್ಪರ ಜೋಡಿಸುವುದೆ ಇದಕ್ಕೆ ಪರಿಹಾರ ಎಂದು ಪ್ರತಿಪಾದಿಸಲಾಗುತ್ತದೆ. ಆದರೆ ನದಿ ಜೋಡನೆಯಿಂದಾಗಬಹುದಾದ ಅನಾಹುತಗಳನ್ನು ಯತಿರಾಜು ಗಮನ ಸೆಳೆಯುತ್ತಾರೆ. ಹಿಂದಿನ ಅನೇಕ ವಿನಾಶಕಾರಿ ಯೋಜನೆಗಳಿಂದಾದ ಪರಿಸರ ಹಾನಿಯಿಂದ ಪಾಠಕಲಿಯದೇ ಅದೇ ತಪ್ಪುಗಳನ್ನು ಪುನರಾವರ್ತಿಸುವುದು ಅಪಾಯಕ್ಕೆ ಆಹ್ವಾನ ನೀಡಿದಂತೆ ಎಂದು ಭಯ ವ್ಯಕ್ತ ಪಡಿಸಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯದ ಕಾರವಾರ ಸ್ನಾತಕೋತ್ತರ ಕೇಂದ್ರದ ಕಡಲ ಜೀವ ವಿಜ್ಞಾನ ವಿಭಾಗದ ಮುಖ್ಯಸ್ಥರಾದ ಡಾ.ವ್ಹಿ.ಎನ್.ನಾಯಕರು ನೇತಾಜಿ ನಡುಗಡ್ಡೆಯ ಜೀವ ವೈವಿಧ್ಯ ಅಧ್ಯಯನ ಕಾಳಿ ನದಿತೀರದ ಕಾಂಡ್ಲಾ ಪಪನಗಳ ದಾಖಲೀಕರಣ, ಕಡಲಾಮೆಗಳ ಜೀವನ ವಿಧಾನ ಮತ್ತು ಸಂತತಿ ಸಂರಕ್ಷಣೆ, 'ಕಡಲ ತೀರದಲ್ಲಿ ಹಸಿರು ಕವಚ ನಿರ್ಮಾಣ ಕಾರ್ಯಾ ಅಧ್ಯಯನ ಹೀಗೆ ಹಲವು ಪರಿಸರ ಆಧಾರಿತ ಸಂಶೋಧನಾ ಅಧ್ಯಯನ ಪೂರ್ಣಗೊಳಿಸಿದ್ದಾರೆ. "ಕರ್ನಾಟಕ ಸರಕಾರದ ಕಡಲ ತೀರದ ಪರಿಸರ ಅಧ್ಯಯನ" ಎಂಬ ಯೋಜನೆಯಡಿಯಲ್ಲಿ ತೊಡಗಿದ್ದಾರೆ. "ವಾಯುಗುಣ ಬದಲಾವಣೆ" "ಜೀವ ವೈವಿಧ್ಯ ನಮ್ಮ ಅಮೂಲ್ಯ ಸಂಪತ್ತು" "ಸಾಗರಕ್ಕೆ ಸಾವುಂಟೇ?" ಎಂಬ ಗ್ರಂಥಗಳನ್ನು ಪ್ರಕಟಿಸಿದ್ದಾರೆ ಇಂದು ಭೂ ತಾಪಮಾನ ಬಹುಚರ್ಚಿತವಾಗುತ್ತಿರುವ ವಿಷಯ, ಹೆಚ್ಚುತ್ತಿರುವ ಜನಸಂಖ್ಯೆ ಮತ್ತು ಅಭಿವೃದ್ಧಿ ಚಟುವಟಿಕೆಗಳು ಭೂ ತಾಪಮಾನದ ಹೆಚ್ಚಳಕ್ಕೆ ಕಾರಣಗಳಾಗಿವೆ. ಇದರಿಂದ ನೆರೆ, ಬರ ಬಿರುಗಾಳಿ, ಭೂಕಂಪನಗಳಂತಹ ನಿಸರ್ಗ ವಿಕೋಪಗಳು ಸಂಭವಿಸಲಿವೆ ಆದ್ದರಿಂದ ಭೂ ತಾಪಮಾನವನ್ನು ಕಡಿಮೆ ಮಾಡಲು ಜಗತ್ತಿನ ರಾಷ್ಟ್ರಗಳೆಲ್ಲ ಒಂದೆಡೆ ಸೇರಿ ಚರ್ಚೆ ನಡೆಸಿವೆ. ಆದರೂ ಆಶಾದಯಕ ಪರಿಣಾಮಗಳು ಕಂಡುಬರುತ್ತಿಲ್ಲ. ಆದ್ದರಿಂದ ಪ್ರತಿಯೊಬ್ಬರೂ ತಮ್ಮದೇ ಆದ ರೀತಿಯಲ್ಲಿ ತಾಪಮಾನವನ್ನು ಕಡಿಮೆ ಮಾಡಲು ಅಳಿಲು ಸೇವೆ ಸಲ್ಲಿಸಬಹುದಾಗಿದೆ. ಭೂ ತಾಪಮಾನದ ಕಾರಣ ಪರಿಣಾಮ ಮತ್ತು ಪರಿಹಾರೋಪಾಯಗಳನ್ನು ವಿವರಿಸುತ್ತಾರೆ.

ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲೂಕಿನ ಕಳವೆಯವರಾದ ಶ್ರೀ ಶಿವಾನಂದ ಕಳವೆ ನಮ್ಮ ಸುತ್ತಲಿನ ಪರಿಸರದ ಕುರಿತು ಅಧಿಕೃತವಾಗಿ ಮಾತನಾಡಬಲ್ಲ ಸಾಮರ್ಥ್ಯವುಳ್ಳವರು ಪರಿಸರ ಕುರಿತು ನುಡಿಚಿತ್ರ ಬರಹಗಳಲ್ಲಿ ಪರಿಣತಿ ಪಡೆದಿದ್ದಾರೆ. ವಿಜಯ ಕರ್ನಾಟಕದಲ್ಲಿ "ಕಾನ್‌ಚಿಟ್ಟೆ" ಉದಯವಾಣಿಯಲ್ಲಿ "ಬಹುಧಾನ್ಯ" ಅಡಿಕೆ ಪತ್ರಿಕೆಯಲ್ಲಿ "ಮುಡೆಬಳ್ಳಿ" ಕೃಷಿ ಪಂಪದ, ಅಂತರ್ ಜಾಲತಾಣ ಪತ್ರಿಕೆಯಲ್ಲಿ "ಮುಳ್ಳೆಹಣ್ಣು" ಎಂಬ

ಅಂಕಣಗಳು ಅವರಿಗೆ ಹೆಸರು ತಂದುಕೊಟ್ಟಿವೆ. ಕರ್ನಾಟಕ ನದಿ ದಂಡೆಯ ಕಾಡು ಮಾವು ಕುರಿತು ಅಧ್ಯಯನ ನಡೆಸಿ 450 ಮಿಡಿ ಮಾವಿನ ತಳಿಗಳ ದಾಖಲಾತಿ ನಡೆಸಿ 50 ತಳಿಗಳನ್ನು ಸಂರಕ್ಷಿಸಿ ಬೆಳೆಸಿದ್ದಾರೆ. 'ಕರ್ನಾಟಕದ ಕೆರೆ ನೀರಾವರಿ ಪರಂಪರೆ, ಉತ್ತರಕನ್ನಡ ಬಿದಿರು ಸಂಪತ್ತು, ಪಶ್ಚಿಮಘಟ್ಟದ ಏಕಜಾತಿ ನೆಡುತೋಪುಗಳ ಕುರಿತು ಅಧ್ಯಯನ ಮಾಡಿದ್ದಾರೆ. ಕೃಷಿ, ಗ್ರಾಮೀಣ ಪರಿಸರ ಪತ್ರಿಕೋದ್ಯಮದ ಬಗ್ಗೆ 20 ಕ್ಕೂ ಹೆಚ್ಚು ರಾಜ್ಯಮಟ್ಟದ ಶಬಿರಗಳನ್ನು ಸಂಘಟಿಸಿದ್ದಾರೆ. ಶಿರಸಿ ಸಾಗರಗಳಲ್ಲಿ ಮಿಡಿ ಮಾವಿನ ಉತ್ಸವ, ಹಲಿಸಿನ ಮೇಳ, ಅಡವಿ ಆಹಾರ ಕಾರ್ಯಗಾರ ಮತ್ತು ಜಲ ತರಬೇತಿ ಕಾರ್ಯಗಾರಗಳನ್ನು ಮಾಡಿದ್ದಾರೆ,. "ಕಾಡು ನೆಲದ ಕಾಲಮಾನ" "ಒಡಲ ನೋವಿನ ತೊಟ್ಟಿಲ ಹಾಡು" "ಮೇನೋಕಲ್ಚರ್ ಮಹಾಯಾನ" "ಕಾಲುದಾರಿಯ ದಾಖಲೆ" "ದೇಸಿ ಅರಣ್ಯ ಜ್ಞಾನ" "ತದ್ರೊಪಿ ಕಾಡು" "ಕಂಪ್ಯೂಟರ ಊಟ ಹಳ್ಳಿ ಮಾರಾಟ" ಇವು ಅವರ ಕೃತಿಗಳು.

ಜಾಗತೀಕರಣ ನಮ್ಮ ದೇಶದ ಸಾಂಸ್ಕೃತಿಕ ವೈವಿಧ್ಯತೆಯನ್ನು ನಾಶ ಮಾಡುತ್ತಿರುವಂತೆಯೇ ಮೋನೋಕಲ್ಚರ್ ಎಂಬುದು ನಮ್ಮ ಕಾಲದ ಜೀವವೈವಿಧ್ಯತೆವನ್ನು ನಾಶಪಡಿಸುತ್ತದೆ. ನಿರ್ದಿಷ್ಟ ಪ್ರದೇಶದಲ್ಲಿ ಏಕರೂಪದ ಬೆಳೆ ಬೆಳೆಯುವುದನ್ನು ಮೋನೋಕಲ್ಚರ ಎನ್ನುವರು. ಅಲೆಮಾರಿಯಾಗಿದ್ದ ಮಾನವ ನೆಲೆ ನಿಂತು ಕೃಷಿಯನ್ನು ಅವಲಂಬಿಸಿದಾಗ ಮೋನೋಕಲ್ಚರ ವಿಶ್ವದರ್ಶನವಾಗುತ್ತದೆ. ಕೈಗಾರಿಕೀಕರಣದ ಪರಿಣಾಮವಾಗಿ ನೈಸರ್ಗಿಕ ಕಾಡುಗಳು ಕಡಿಮೆಯಾದಾಗ ಅವುಗಳ ಅಗತ್ಯಗಳಿಗೆ ಅನುಗುಣವಾಗಿ ನೆಡುತೋಪುಗಳು ಹೆಚ್ಚಾದವು. ಪರಿಸರ ಚಳುವಳಿಯಲ್ಲಿ ಕೇಳಿಬರುವ ವಿಶಿಷ್ಟ ಹೆಸರು ವಂದನಾ ಶಿವ ಅವರದು. ದೇಶಜ್ಞಾನ, ಪ್ರಾಕೃತಿಕ ಸಂಪತ್ತು ಮತ್ತು ಜೀವವೈವಿಧ್ಯದ ಉಳಿವಿಗಾಗಿ ಇವರು ಹೋರಾಟ ನಡೆಸಿದ್ದಾರೆ. ಚಿಪ್ಕೋ ಆಂದೋಲನದಲ್ಲಿ ತೊಡಗಿಸಿಕೊಂಡಿದ್ದಾರೆ. ಇವರ ಪರಿಸರ ಕುರಿತ ಕೃತಿಗಳೆಂದರೆ Staying Alive, Mono Culture of the Mind, stolen Harvest, Water wars, Violence of the Green Revolution ಮುಂತಾದವು, Staying Alive, Women Ecology Development in India ಕೃತಿಯನ್ನು ಐತಾಳ್‌ರು 'ಬತ್ತದ ಚಿಲುಮೆ' ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ, ಮಹಿಳೆಗೂ, ನೈಸರ್ಗಿಕ ಸಂಪತ್ತಿಗೂ ಮತ್ತು ಅಭಿವೃದ್ಧಿಗೂ ಇರುವ ಅನ್ಯೋನ್ಯ ಸಂಬಂಧವನ್ನು ಪರಿಣಾಮಕಾರಿಯಾಗಿ ಚರ್ಚಿಸಿದ್ದಾರೆ. ಇವೆಲ್ಲವುಗಳನ್ನೂ ಮನಗಂಡು ಸಂಶೋಧನೆಗೆ ಹೊಸದಾರಿ ತೆರೆಯುತ್ತಿದೆ ಎಂಬುವುದು ಸ್ಪಷ್ಟವಾಗುತ್ತದೆ.

**ಪರಾಮರ್ಶನ ಗ್ರಂಥಗಳು**


- ಬಸವರಾಜ ಸಬರದ (2010). *ಜಾನಪದ ಅಯಾಮಗಳು.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- *ಕರ್ನಾಟಕದ ಪರಿಸರ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ. *ಕನ್ನಡ ಅಧ್ಯಯನ.* (ನಿಯತ ಕಾಲಿಕೆ).
- ನೆಲದ ಮಾತು ಪತ್ರಿಕೆ
- ಸಬಿಹಾ ಭೂಮಿಗೌಡ ಮತ್ತು ಕೆ.ಶಿವರಾ ಕಾರಂತ. (ಸಂ.). *ನಾವು ಮತ್ತು ನಮ್ಮ ಪರಿಸರ.*

ಸೃಜನಿ

**SRUJANI: Indian Journal of Innovative Research and Development (SIJIRD)**
Volume-3 Issue 3, July-August 2024, Pp. 95-103
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಹರಿಹರನ ರಗಳೆಗಳಲ್ಲಿ ಕಥಾನಾಯಕರ ಸಾಮಾಜಿಕ ಮೌಲ್ಯಗಳ ವಿಶ್ಲೇಷಣೆ

**ಡಾ. ವಜ್ರೇಶ್ವರಿ ಎಸ್ ಮೂರ್ತಿ**
ಸಹಾಯಕ ಪ್ರಾಧ್ಯಾಪಕರು, ಎಂಇಎಸ್ ಇನ್ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್, ರಾಜಾಜಿನಗರ, ಬೆಂಗಳೂರು.

***Abstract:***

*ಕನ್ನಡ ಸಾಹಿತ್ಯದಲ್ಲಿ 12ನೇ ಶತಮಾನದ ಶಿವಶರಣರ ಶಿವಭಕ್ತಿ, ಕಾಯಕನಿಷ್ಠೆ, ಇಷ್ಟಲಿಂಗಪೂಜೆ, ದಾಸೋಹ ಪದ್ಧತಿ, ಅತಿಥಿ ಸತ್ಕಾರ, ಸರ್ವಸಮಾನತೆ ಮುಂತಾದ ಮೌಲ್ಯಗಳನ್ನು ತನ್ನ ರಗಳೆ ಸಾಹಿತ್ಯದಲ್ಲಿ ನೂತನ ಸಂಪ್ರದಾಯದ ರೀತಿಯಲ್ಲಿ ಅಳವಡಿಸಿಕೊಂಡ ಹರಿಹರ ಮತ್ತು ಅವನ ಸಾಹಿತ್ಯ ಜನಮನಗಳನ್ನು ಮೆಚ್ಚಿಸಿದಂತವು. ಹರಿಹರನ ಕಾವ್ಯಾಭ್ಯಾಸದಿಂದ ಯಾರಿಗಾದರೂ ಆಧ್ಯಾತ್ಮಿಕ ಸಾಧನೆ ಮಾಡಬೇಕೆಂಬ ಹಂಬಲ ಗಟ್ಟಿಗೊಳ್ಳುತ್ತದೆ. ಲೌಕಿಕ ಪ್ರಪಂಚದಿಂದ ಪಾರಲೌಕಿಕ ಪ್ರಪಂಚದೆಡೆಗೆ ಮನಸ್ಸು ತುಡಿಯುವಂತೆ ಮಾಡುತ್ತದೆ. ಹಲವಾರು ಸಣ್ಣ ಸಣ್ಣ ಹಳ್ಳಗಳನ್ನು ತೋಡಿ ಅಲ್ಲಿ ನೀರನ್ನು ಪಡೆಯಬೇಕೆಂಬ ಹಂಬಲವನ್ನು ಬಿಟ್ಟು ಒಂದೇ ಸ್ಥಳದಲ್ಲಿ ಆಳವಾಗಿ ಹಳ್ಳವನ್ನು ತೋಡಿದಾಗ ಮಾತ್ರ ನೀರಿನ ಚಿಲುಮೆ ದೊರೆಯುತ್ತದೆ ಎಂಬ ಬದುಕಿನ ಸತ್ಯವನ್ನು ಇದು ತಿಳಿಸುತ್ತದೆ. ಅಂದರೆ ಒಂದೇ ದೇವರನ್ನು (ಶಿವ) ಆಳವಾಗಿ ಅರಿತಾಗ ಮಾತ್ರ ನಿಶ್ಚಲವಾದ ಭಕ್ತಿ ಬೆಳೆಯಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಹರಿಹರನ ರಗಳೆಗಳಲ್ಲಿ ಕಥಾನಾಯಕರ ಸಾಮಾಜಿಕ ಮೌಲ್ಯಗಳ ವಿಶ್ಲೇಷಣೆಯನ್ನು ಪ್ರಸ್ತುತ ಲೇಖನದಲ್ಲಿ ಚರ್ಚಿಸಲಾಗಿದೆ.*

***Keywords:*** *ಕನ್ನಡ ಸಾಹಿತ್ಯ, ಹರಿಹರನ ರಗಳೆಗಳು, ಕಥಾ ನಾಯಕ, ಸಾಮಾಜಿಕ ಮೌಲ್ಯ.*

## ಪೀಠಿಕೆ

ಶಿವಶರಣರು ಜೀವನದಲ್ಲಿ ಕೈಗೊಂಡ ವೃತ್ತಿಗಳನ್ನು ಆಧ್ಯಾತ್ಮಿಕ ಸಾಧನೆಗೆ ಅಳವಡಿಸಿಕೊಳ್ಳಲು ದಾರಿದೀಪವಾಗುತ್ತದೆ. ಜೀವನದಲ್ಲಿ ಸುಳ್ಳು, ವಂಚನೆ, ಮೋಹ ಅಹಂಕಾರ, ಅನ್ಯಾಯದಿಂದ ಏನನ್ನೂ ಸಂಪಾದಿಸಲು ಸಾಧ್ಯವಿಲ್ಲ. ಅವೆಲ್ಲ ಅಲ್ಪಸುಖವೆಂಬ ಅರಿವು ಮೂಡಿಸುತ್ತದೆ. ಸತ್ಯ, ನ್ಯಾಯ, ದಾನ–ಧರ್ಮ, ತ್ಯಾಗ ಮತ್ತು ಆದರ್ಶಗಳನ್ನು ನಿತ್ಯಜೀವನದಲ್ಲಿ ಅಳವಡಿಸಿಕೊಂಡರೆ ಅವೇ ನಮ್ಮನ್ನು, ನಮ್ಮ ಕುಟುಂಬವನ್ನು ಹಾಗು ನಾವು ವಾಸಮಾಡುವ ಪ್ರದೇಶವನ್ನು ಕಾಪಾಡುತ್ತದೆ. ಅಂತಹ ಆದರ್ಶ ಮೌಲ್ಯಗಳೇ ಶಿವಭಕ್ತಿ ಎಂದು ಹಲವು ಕಥೆಗಳ ನಿದರ್ಶನದೊಂದಿಗೆ ಸಾರಿರುವ ಹರಿಹರ ಎಲ್ಲರನ್ನೂ ಶಿವಭಕ್ತರನ್ನಾಗಿ ಮಾರ್ಪಡಿಸಿ ಶಿವಪುರವನ್ನೇ ಸೃಷ್ಟಿಸಿದ್ದಾನೆ. "ಹನ್ನೆರಡನೆಯ ಶತಮಾನ ಕರ್ನಾಟಕದಲ್ಲಿ ಹೊನ್ನಿನಕ್ಷರಗಳಲ್ಲಿ ಬರೆದಿಡುವಂಥದ್ದಾಗಿದೆ. ಈ ಕ್ರಾಂತಿಯು ವೀರಶೈವ ಮತಕ್ಕಷ್ಟೇ ಸಂಬಂಧಿಸಿದುದಲ್ಲ. ಕರ್ನಾಟಕದಲ್ಲಿ ಎಲ್ಲ ಮತಗಳ ಜೀವಾಳವನ್ನು ತಗುಲಿದುದು ಅದು ಮತ ಮಾತ್ರಕ್ಕೆ ಸಂಬಂಧಪಟ್ಟ ಕ್ರಾಂತಿಯಲ್ಲ. ಜನಸಾಮಾನ್ಯರಿಗೆ ಸಂಬಂಧಪಟ್ಟ ಸರ್ವವಿಷಯಗಳಿಗೂ ತಗುಲಿದ ಕ್ರಾಂತಿ

***Please cite this article as:*** ವಜ್ರೇಶ್ವರಿ ಎಸ್ ಮೂರ್ತಿ. (2024). ಹರಿಹರನ ರಗಳೆಗಳಲ್ಲಿ ಕಥಾನಾಯಕರ ಸಾಮಾಜಿಕ ಮೌಲ್ಯಗಳ ವಿಶ್ಲೇಷಣೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 95–103

ಸರ್ವತೋಮುಖವಾದದ್ದು. ಅದು ಭಾವನಾತರಂಗದ ಲ್ಲಿಯೇ ನಿಂತು ಮುಂದೆ ಬುಡಮೇಲಾದ ಕ್ರಾಂತಿಯಲ್ಲ; ಕಾರ್ಯರಂಗಕ್ಕಿಳಿದು ಕಳೆಗೊಂಡು ಕಡೆತನಕ ಕಾಲೂರಿನಿಂತ ಕಾರ್ಯಗಳಿಂದ ಕೂಡಿದ ಕ್ರಾಂತಿ"[1] ಹೀಗೆ ಹರಿಹರನು 12ನೇ ಶತಮಾನದಲ್ಲಿ ಸಾಹಿತ್ಯವನ್ನು ಜನತೆಯೆಡೆಗೆ ತಂದ ಶರಣರ ಕ್ರಾಂತಿ ಜೀವನವನ್ನು ಮುಂದುವರಿಸಿದ್ದಾನೆ. ಆದ್ದರಿಂದ ಹರಿಹರನನ್ನು "ಕ್ರಾಂತಿಕವಿ" ಎಂದಿರುವ ವಿಮರ್ಶಕರ ಅಭಿಪ್ರಾಯ ಒಪ್ಪುವಂತದ್ದು. ಹರಿಹರನ ರಗಳೆಗಳು ಸಾಹಿತ್ಯ ಚರಿತ್ರೆಯಲ್ಲಿ ಜೀವಕಳೆಯನ್ನು ತುಂಬಿಕೊಳ್ಳಲು ಅವು ತಾಳಿರುವ ಹೊಸ ದೃಷ್ಟಿಕೋನದ ನೆಲೆಗಳೇ ಕಾರಣವಾಗಿದೆ. ಅವು,

1. ಕಥಾನಾಯಕರ ಸಾಮಾಜಿಕ ಮೌಲ್ಯಗಳು
2. ಶಿವ–ಭಕ್ತರನ್ನು ಪರೀಕ್ಷಿಸುವ ರೀತಿ
3. ಪವಾಡ ಸಾದೃಶ್ಯತೆಯ ಪರಿ
4. ಶಿವತತ್ವ ಪ್ರತಿಪಾದನೆ
5. ಭಕ್ತನ ಆದರ್ಶ ಮತ್ತು ಜೀವನ ದರ್ಶನ
6. ಲೋಕಾನುಭವ – ಶಿವಾನುಭವ

ಈ ಎಲ್ಲಾ ಅಂಶಗಳನ್ನು ಒಳಗೊಂಡಿರುವ ಹರಿಹರನ ರಗಳೆಗಳು, ಪಂಪಾದಿಗಳು ರಚಿಸಿದ್ದ ಧಾರ್ಮಿಕ, ಲೌಕಿಕ ಪರಂಪರೆಗಿಂತ ಭಿನ್ನವಾದ ನೆಲೆಗಳಿಂದ, ನವೀನ ಮಾದರಿಯಲ್ಲಿ ರಚಿತವಾಗಿದೆ. ಆದ್ದರಿಂದ ರಗಳೆಗಳ ಕಂಪು, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಮೈಲಿಗಲ್ಲಾಗಿ ನಿಲ್ಲುತ್ತವೆ ಎಂಬುದು ಸತ್ಯ. ವಚನಸಾಹಿತ್ಯದ ಪರಂಪರೆಯನ್ನು ಮುಂದುವರಿಸುವ ಈ ಭಕ್ತಿ ಸಾಹಿತ್ಯ, ಜನಮಾನಸದಲ್ಲಿ ಬೇರೂರುವಂತೆ ಮಾಡಿದೆ.

**ಕಥಾನಾಯಕರ ಸಾಮಾಜಿಕ ಮೌಲ್ಯಗಳ ವಿಶ್ಲೇಷಣೆ**

ಆರಂಭದಿಂದಲೂ ಕನ್ನಡ ಕಾವ್ಯಗಳ ಕಥಾನಾಯಕರು, ರಾಜರು, ಧೀಮಂತರು, ವೀರರು ಹೀಗೆ ಖ್ಯಾತಿವೆತ್ತವರೇ ಆಗಿರುತ್ತಿದ್ದರು. ಪಂಪ, ರನ್ನರ ಕಾವ್ಯಗಳಲ್ಲಿ ಕ್ರಮವಾಗಿ ಅರ್ಜುನ, ಭೀಮ, ಕೃಷ್ಣರೇ ಮೊದಲಾದವರು ಕಥಾನಾಯಕರಾದರೆ ಸಮೀಕರಣವಾಗಿ 2ನೇ ಅರಿಕೇಸರಿ, ಇರಿವಬೆಡಂಗ ಸತ್ಯಾಶ್ರಯ ರಾಜರುಗಳು ನಾಯಕರಂತೆ ಚಿತ್ರಿತರಾಗುತ್ತಿದ್ದರು. ಧಾರ್ಮಿಕ ಕಾವ್ಯಗಳಲ್ಲಿ ಜೈನರಾದ ವೃಷಭನಾಥ, ಅಜಿತನಾಥ, ಶಾಂತಿನಾಥ ಮೊದಲಾದ ತೀರ್ಥಂಕರರು ನಾಯಕ ಸ್ಥಾನವನ್ನು ಅಲಂಕರಿಸುತ್ತಿರುತ್ತಿದ್ದರು. ಪಂಡಿತವರ್ಗ ಮತ್ತು ರಾಜರ ಆಸ್ಥಾನದ ನಡುವೆಯೇ ಇದ್ದ ಸಾಹಿತ್ಯ ಪರಂಪರೆ ಹರಿಹರನ ಕಾಲಕ್ಕೆ ಬೀದಿಬೀದಿಯಲ್ಲಿ ಸುತ್ತಾಡಿ ಯಾರಲ್ಲಿ ಶಿವಭಕ್ತಿ, ಮೌಲ್ಯಾದರ್ಶ ಎಂಬ ಅರ್ಹತೆಗಳಿವೆಯೋ ಅವರಿಗೆ ಮಾತ್ರ ನಾಯಕಪಾತ್ರ ಒಲಿಯಿತು. ಹೀಗೆ ಹರಿಹರನ ರಗಳೆಗಳಲ್ಲಿ ನಾಯಕಪಟ್ಟ ಪಡೆದುಕೊಳ್ಳುವುದು ಸುಲಭವಾಗಿದ್ದು, ಅವರು ಶಿವಭಕ್ತರಾಗಿದ್ದರೆ ಸಾಕಾಗಿತ್ತು. ಅವರ ಜಾತಿ, ಲಿಂಗ, ವಯಸ್ಸು, ಅಂತಸ್ಥಿಕೆ, ಕೌಟುಂಬಿಕ ಹಿನ್ನೆಲೆ, ಶಿಕ್ಷಣ ಮುಂತಾದ ಯಾವುದೇ ಅರ್ಹತೆಗಳು ಮುಖ್ಯವೆನಿಸುವುದಿಲ್ಲ. ಶಿವಭಕ್ತರಲ್ಲದವರ ಭವಿಗಳಾಗುತ್ತಾರೆ. ಭವಿಗಳು ಶಿವಭಕ್ತರ ಎದುರು ಸೋತವರಾಗಿ, ಶರಣಧರ್ಮವನ್ನು ಅನುಸರಿಸಲು ಮುಂದಾಗುತ್ತಾರೆ. ಕೆಲವೊಮ್ಮೆ ಶಿವಭಕ್ತರನ್ನು ವಿರೋಧಿಸಿದ ಜೈನ, ವೈಷ್ಣವ ಧರ್ಮೀಯರೇ ಶಿವಭಕ್ತರಿಂದ ತಕ್ಕ ಶಿಕ್ಷೆಯನ್ನು ಅನುಭವಿಸುವಂತಾಗಿ, ಸೋತು ಶೈವಧರ್ಮವನ್ನು ಸೇರುತ್ತಾರೆ. ಊರಿಗೆ ಊರೇ ಶಿವಪುರವಾಗುತ್ತದೆ. ಇದಕ್ಕೆ ಕಾರಣ ಕಥಾನಾಯಕನ ಭಾವಪೂರ್ಣ ಶಿವಭಕ್ತಿಯ ಆಚರಣೆಯೊಂದಿಗೆ ಅವನ ಮೌಲ್ಯದರ್ಶವೇ ಹೊರತು ಬೇರೆಯದಲ್ಲ.

ಹರಿಹರನ ರಗಳೆಗಳಲ್ಲಿ ಭಕ್ತಿ ಎನ್ನುವಂತದ್ದು ಭಾವದ ವಿಷಯವಾಗಿದೆ. ಈ ಭಾವದಲ್ಲಿ ಪ್ರೇಮಭಾವ ತುಂಬಿಕೊಂಡು ಅದನ್ನು ಉತ್ಕಟವಾಗಿ ಅನುಭವಿಸುವಂತಹದ್ದು ಕಾಣುತ್ತದೆ. ಎಲ್ಲಾ ರಗಳೆಗಳಲ್ಲಿ ಶಿವ–ಭಕ್ತರ ನಡುವೆ ಪ್ರೇಮವೆಂಬ ಭಾವನಾತ್ಮಕ ಸಂಬಂಧವನ್ನು ಕಟ್ಟಿಕೊಡುತ್ತಾನೆ. ಅದರೊಂದಿಗೆ ಶಿವಭಕ್ತರು ಶಿವಸ್ವರೂಪಿಗಳೂ

ಆಗಿರುತ್ತಾರೆ ಎಂದು ಹರಿಹರ ಸಾರಿದ್ದಾನೆ. ಹರಿಹರನ ಕಥಾಪಾತ್ರಗಳು ಭಕ್ತಿಯ ಭಾಗವಾಗಿ ಬರುವ ಸ್ವಾವಲಂಬಿ ಜೀವನವನ್ನು ಬದುಕುವ ಭಕ್ತರು ಎಂಥ ಕಡಿಮೆ ಸ್ಥಾನದವರಾಗಿದ್ದರೂ ತೊಂದರೆಯಿಲ್ಲ, ವೃತ್ತಿಯಲ್ಲಿ ತಾದಾತ್ಮ್ಯ ಸಾಧಿಸುತ್ತಾ ಭಕ್ತಿಯನ್ನು ಏಕೀಕರಣಗೊಳಿಸಿಕೊಂಡಿದ್ದರೆ ಸಾಕು, ಅವರು ಅದೆಲ್ಲವನ್ನು ಶಿವಶರಣನಿಗಾಗಿ ಇಲ್ಲವೆ ಶಿವನಿಗಾಗಿ ಸಮರ್ಪಣ ಮನೋಭಾವದಿಂದ ಅರ್ಪಿಸುವ ಗುಣ ಶಿವಭಕ್ತರದು.

## ಕಥಾನಾಯಕರು ಮತ್ತು ಅವರ ಸಾಮಾಜಿಕ ಮೌಲ್ಯಗಳು

### *ಕಾಯಕ ನಿಷ್ಠೆ*

ಕ್ರಿ.ಶ.12 ಮತ್ತು 13ನೇ ಶತಮಾನದಲ್ಲಿ ಶಿವಶರಣರು ಸಮಾಜಕ್ಕೆ ಹೊರೆಯಾಗಬಾರದೆಂಬ ನಿಲುವು ತಾಳಿ, ದುಡಿದೇ ಜೀವನವನ್ನು ನಡೆಸುವವರಾಗಿದ್ದರು. ಅವರ ಪಾಲಿಗೆ ದುಡಿಮೆಯೇ ದೇವರಾಗಿತ್ತು. ತಾವು ಮಾಡುವ ಕಾಯಕವನ್ನು ಹೀನವೆಂದು ಪರಿಗಣಿಸದೇ ಅದನ್ನೇ ಆಧ್ಯಾತ್ಮಿಕ ಸಾಧನೆಯನ್ನಾಗಿ ಪರಿವರ್ತಿಸಿಕೊಂಡು ಶಿವಭಕ್ತಿ ಮೆರೆದರು. ವೃತ್ತಿಯಲ್ಲೇ ಧಾರ್ಮಿಕ ಭಕ್ತಿಯನ್ನು ಸಾಧಿಸುವುದರ ಜೊತೆಗೆ ಆರ್ಥಿಕ ಸಮಾನತೆಯ ಕಡೆಗೆ ಓಗೊಟ್ಟರು. ಶುದ್ಧ ಆರೋಗ್ಯ ಪೂರ್ಣ ಸಮಾಜದ ನಿರ್ಮಾಣಕ್ಕೆ ಇಂತಹ ಕಾಯಕನಿಷ್ಠೆಯು ಅವಶ್ಯಕವಾದುದು. ರೈತನಾಗಿದ್ದ ಇಳೆಯಾಂಡ ಗುಡಿಮಾರ, ಮಡಿವಾಳನಾಗಿದ್ದ ತಿರುಕುರುಂಪೆ ತೊಂಡರ, ಮೀನು ಹಿಡಿಯುವವನಾಗಿದ್ದ ಅತಿಭಕ್ತ, ಮಡಿಕೆ ಮಾಡುವವನಾಗಿದ್ದ ಕುಂಬಾರ ಗುಂಡಯ್ಯ, ಬೇಡರ ಕಣ್ಣಪ್ಪ, ಗೋಪಾಲಕ ಆನಾಯನಾರ, ಅಂತರಂಗ–ಬಹಿರಂಗಶತ್ರುಗಳನ್ನು ಎದುರಿಸುವುದನ್ನೇ ಉದ್ಯೋಗವನ್ನಾಗಿ ಮಾಡಿಕೊಂಡಿದ್ದ ಸೇದಿರಾಜ, ಅಶ್ವಪಾಲಕ ಮಾದರ ಚೆನ್ನಯ್ಯ, ಮಂತ್ರಿ ಬಸವಣ್ಣ ಮತ್ತು ಜ್ಞಾನಕ್ರಿಯೆಯನ್ನೇ ಉದ್ಯೋಗವನ್ನಾಗಿಸಿ ಕೊಂಡಿದ್ದ ಅಲ್ಲಮಪ್ರಭುಗಳೇ ಮೊದಲಾದ ಶಿವಶರಣರ ಕಾಯಕನಿಷ್ಠೆಯ ಅಂಶಗಳು ರಗಳೆಗಳಲ್ಲಿ ಆಧ್ಯಾತ್ಮಿಕ ಸಾಧನೆಗೆ ಹೇಗೆ ವೃತ್ತಿಗಳು ಕಾರಣವಾಗಿವೆ ಎಂಬುದನ್ನು ಸ್ಪಷ್ಟವಾಗಿ ಹರಿಹರನು ಅಭಿವ್ಯಕ್ತಿಸಿದ್ದಾನೆ. ಇನ್ನು ಕೆಲವು ಶಿವಭಕ್ತರು ಉದ್ಯೋಗವನ್ನು ಮಾಡದೆ ಹೋದರೂ ಶಿವಭಕ್ತರ ಸೇವೆಯನ್ನೇ ನಿಷ್ಠೆಯಿಂದ ಮಾಡುವವರ, ಶಿವಭಕ್ತರ ಕಥೆಯನ್ನು ಹರಿಹರ ತಿಳಿಸಿದ್ದಾನೆ. ಉದಾ: ಅಮರನೀತಿ, ಪಾಂಡ್ಯಮಹಾದೇವಿ, ಎಡೆಗೆಳೆಯರ, ಕಳಚೆಂಗ ಪೆರುಮಾಳ, ಬಾಹೂರ ಬೊಮ್ಮಿತಂದೆ, ಮೂರ್ಖನಾಯನಾರರೇ ಮೊದಲಾದವರು. ಇವರುಗಳೆಲ್ಲಾ ತಮ್ಮ ಬಳಿ ಇರುವ ಸಂಪತ್ತನ್ನು ವಿನಿಯೋಗಿಸಿ ಶಿವ, ಶಿವಭಕ್ತರ ಸೇವೆ, ಪೂಜಾ ಕೈಂಕರ್ಯಗಳನ್ನು ನೆರವೇರಿಸಿ ಆಧ್ಯಾತ್ಮ ಸಾಧಕರಾದವರು. ಆದರೆ ಹರಿಹರನು ಇವರ ಉದ್ಯೋಗನಿಷ್ಠೆಯ ಕಡೆಗೆ ಒತ್ತನ್ನು ನೀಡದೆ ಅವರ ಸೇವಾಕಾರ್ಯ, ದಾನ–ಧರ್ಮದ ವಿಚಾರಗಳನ್ನು ತಿಳಿಸಿ, ಆ ಮೂಲಕವೇ ಅವರ ಶಿವಸಾಯುಜ್ಯವನ್ನು ಸಂಪಾದಿಸಿರುವುದರ ಕಥೆಯನ್ನು ತಿಳಿಸಿದ್ದಾನೆ. ಇಲ್ಲಿ ಕವಿ ಶಿವಭಕ್ತರ ನಿಶ್ಚಲ ಮನಸ್ಸಿನ ಭಕ್ತಿ ಮತ್ತು ಸೇವಾಕಾರ್ಯದ ಮನೋಭಾವವನ್ನು ಅಭಿವ್ಯಕ್ತಿಸಿದ್ದಾನೆ. ಆದರೆ ಇಲ್ಲಿ ಕಠಿಣ ಪರಿಶ್ರಮದ ಕೆಲಸ/ಉದ್ಯೋಗದ ಯಾವುದೇ ವಿವರಗಳು ಇಲ್ಲ. ಒಂದೊಂದು ರಗಳೆಯ ಕಾಯಕನಿಷ್ಠೆಯ ಮಹತ್ವವನ್ನು ಸಾರಿದರೆ, ಮತ್ತೊಂದಷ್ಟು ರಗಳೆಗಳು ಶಿವಭಕ್ತಿ, ಪೂಜೆ, ನೇಮನಿಷ್ಠೆ ಮತ್ತು ಶಿವಭಕ್ತರ ಸೇವೆಯ ಮಹಿಮೆಯನ್ನು ಕುರಿತು ತಿಳಿಸುತ್ತವೆ.

ಕಾಯಕ ನಿಷ್ಠೆಗೆ ತದ್ವಿರುದ್ಧವಾದ ಅಂಶಗಳನ್ನು ಕೆಲವು ರಗಳೆಗಳಲ್ಲಿ ಗುರುತಿಸಬಹುದು. ಹಾವಿನ ಹಾಳ ಕಲ್ಲಯ್ಯ ರಗಳೆಯಲ್ಲಿ ಅಕ್ಕಸಾಲಿಗ ವೃತ್ತಿಯನ್ನು ನಿರ್ವಹಿಸುತ್ತಿದ್ದ ಅವನ ತಂದೆಯು ಉದ್ಯೋಗ ಮಾಡಬೇಕೆಂದು ಮಗನಿಗೆ ತಿಳಿಯಹೇಳಿದನು. ಆದರೆ ತಂದೆಯ ಮಾತಿಗೆ ವಿರುದ್ಧವಾಗಿ ಕಲ್ಲಯ್ಯ ಉದ್ಯೋಗ ಮಾಡದೆ ಶಿವಪೂಜೆಯಲ್ಲಿಯೇ ತಲ್ಲೀನನಾಗಿದ್ದನು. ಇದರಿಂದ ಕುಪಿತನಾದ

ತಂದೆಯು ಮಗ ಕಲ್ಲಯ್ಯನನ್ನು ಬಡಿದಾಗ ಆಕ್ರೋಶದಿಂದ ತಂದೆಯನ್ನೇ ಥಳಿಸಿ, ತಂದೆ ಶಿವನಿರಬೇಕಾದರೆ ನನ್ನನ್ನು ಬಡಿಯಲು ಇವನು ಯಾರು? ಎಂದು ಕೋಪದಿಂದ ತನ್ನನ್ನೇ ತಾನು ಇರಿದುಕೊಂಡನು.

ಹೊಟ್ಟೆಯಲ್ಲಿದ್ದ ಕರಳುಗಳನ್ನೆಲ್ಲಾ ಎಳೆದುಕೊಂಡು ಶಿವಲಿಂಗಕ್ಕೆ ಸುತ್ತಿ, ಉದ್ಯೋಗ ಮಾಡಬೇಕೆಂದು ಬಡಿದ ತಂದೆಗೆ ಬೈದುಕೊಳ್ಳುತ್ತಾ ಶಿವನನ್ನೇ ಸ್ತುತಿಸಿ ಮೂರ್ಛೆಹೊಂದಿದನು. ಈ ಸ್ಥಿತಿಯನ್ನು ಗಮನಿಸಿದಾಗ ಕಾಯಕ ಮಹತ್ವದ ಅರಿವನ್ನು ಇಲ್ಲಿ ನಿರ್ಲಕ್ಷಿಸಿರುವುದಕ್ಕೆ ಸಾಕ್ಷಿಯಿದೆ. ವೃತ್ತಿಗಿಂತ ಭಕ್ತಿಯೇ ಮೇಲುಗೈ ಸಾಧಿಸಿದೆ. ಕೆಂಭಾವಿ ಭೋಗಣ್ಣನಾಗಲಿ, ಏಕಾಂತ ರಾಮಿತಂದೆ, ಓಹಿಲಯ್ಯ, ಉದ್ಭಟದೇವ, ಹಲಾಯುಧ, ಮಲಯರಾಜ, ಮಲುಹಣ ಇವರೇ ಮೊದಲಾದ ಶಿವಭಕ್ತರ ಭಕ್ತಿಯ ನೆಲೆಗಳೇ ವಿಭಿನ್ನವಲಯದ್ದು. ಇವರು ಯಾರು, ಯಾವ ಕಾಯಕವನ್ನು ಮಾಡುತ್ತಾರೆ ಎಂಬ ಸುಳಿವನ್ನೂ ನೀಡುವುದಿಲ್ಲ. ದಾನಧರ್ಮ ಮಾಡುವುದಕ್ಕೆ ಅವಶ್ಯವಾದ ಹಣದ ಮೂಲ ಎಲ್ಲಿಯದು ಎಂಬಂಶವೂ ಪ್ರಶ್ನೆಯಾಗಿಯೇ ಉಳಿಯುತ್ತದೆ. ತಂಡೇಶ ಪಿಳ್ಳೆಯ ತಂದೆ ಮಗನಿಗೆ ಊರಿನ ಗೋವುಗಳನ್ನು ಮೇಯಿಸುವ ಕಾಯಕಕ್ಕೆ ನಿಯೋಜಿಸುತ್ತಾನೆ. ಆದರೆ ಅವನ ಗುಪ್ತ ಶಿವಭಕ್ತಿಯನ್ನು ಪ್ರಕಟಮಾಡಿದ್ದಕ್ಕೆ ತಂದೆಯನ್ನು ಬಡಿದು ಸಾಯಿಸಿದ ಪ್ರಸಂಗವನ್ನು ಗಮನಿಸಿದಾಗ ಕೆಲವು ಶಿವಭಕ್ತರ ಪಾಲಿಗೆ ಉದ್ಯೋಗ ಅಮುಖ್ಯವಾಗುವುದನ್ನು ಗುರುತಿಸಬಹುದು. ನಿಂಬಿಯಕ್ಕ ಮಾಡುವ ಕಾಯಕಸೇವೆ, ಕಥೆಯ ದೃಷ್ಟಿಯಿಂದ ಕೇಳುವುದೇ ಮುಜುಗರವೆನಿಸುತ್ತದೆ. ವಾಸ್ತವ ಜೀವನದಲ್ಲಿ ಅದರ ಸತ್ಯಾಸತ್ಯತೆಗಳನ್ನು ಪರಿಶೀಲಿಸ ಹೊರಟಾಗ ಅವಳು ವೇಶ್ಯೆಯೆನಿಸಿಕೊಂಡು, ಅದು ಅನೈತಿಕತೆ ಆಗುತ್ತದೆ. ಹೀಗೆ ಕೆಲವುಶಿವಭಕ್ತರಲ್ಲಿ ಕಾಯಕನಿಷ್ಠೆಯೇ ಆಧ್ಯಾತ್ಮಿಕ ಸಾಧನೆಗೆ ದಾರಿಯಾದರೆ, ಮತ್ತೆ ಕೆಲವರು ಶಿವನಪೂಜೆ, ಭಕ್ತರು, ಶರಣರ ಸೇವೆಯಲ್ಲಿಯೇ ಮುಳುಗಿರುವುದನ್ನು ಗುರುತಿಸಬಹುದು. ಪ್ರಸ್ತುತ ಸಮಾಜದಲ್ಲಿಯೇ ದೇವರ ಹೆಸರಿನಲ್ಲಿ ಹಣ ಸಂಪಾದಿಸುವ, ಮನೆಮನೆಗೆ ಭಿಕ್ಷೆಗೆ ಬರುವ ಸಾಧು ಸನ್ಯಾಸಿಗಳು, ಹಿಮಾಲಯಪರ್ವತ, ವನಗಳಲ್ಲಿ ವಾಸಿಸುವ ಭಕ್ತರಾಗಿ, ತಪಸ್ವಿಗಳಾಗಿ, ಅಘೋರಿಗಳಾಗಿರುವವರನ್ನು ನಾವು ನೆನೆಯಬಹುದು, ಅವರು ತಮ್ಮ ಜೀವನದ ಹಾದಿಯನ್ನು ಧಾರ್ಮಿಕ ಭಕ್ತಿವಲಯಕ್ಕೆ ಸೀಮಿತಗೊಳಿಸಿಕೊಂಡಿರುತ್ತಾರೆ.

***ದಾನ–ಧರ್ಮ–ತ್ಯಾಗ***

ಹರಿಹರನ ರಗಳೆಗಳ ಮತ್ತೊಂದು ಪ್ರಮುಖವಾದ ಸಾಮಾಜಿಕ ಮೌಲ್ಯವೆಂದರೆ ದಾನ– ಧರ್ಮ–ತ್ಯಾಗ. ಇವು ಒಂದು ಮಾನವೀಯ ಮೌಲ್ಯವೆನಿಸಿಕೊಳ್ಳುತ್ತದೆ. ಉಳ್ಳವರು ಇಲ್ಲದವರಿಗೆ ನೀಡುವ ದಾನ–ಧರ್ಮ–ತ್ಯಾಗಗಳು ಅವರ ಬದುಕನ್ನು ಹಸನಾಗಿಸಲು ಸಾಧ್ಯವಾಗುತ್ತದೆ. ಬಡತನದ ಸಮಸ್ಯೆ ನಿವಾರಣೆಯಾಗಿ ಆರ್ಥಿಕ ಸಮಾನತೆಗೆ ಒತ್ತು ನೀಡಿದಂತಾಗುತ್ತದೆ. ಉದಾ: ಇಹಃ ಪಗೆಂಡರ, ಇಳೆಯಾಂಡ ಗುಡಿಮಾರ, ಅಮರನೀತಿ, ಸಿರಿಯಾಳ, ಬಸವಣ್ಣ, ಮನುನೀತಿ ಚೋಳ, ಮಾನಕಂಜರರೇ ಮೊದಲಾದ ಮಹಾಶಿವಭಕ್ತರು ಸಮಾಜದಲ್ಲಿ ಬಡಜನರು, ಶಿವಭಕ್ತರಿಗೆ ಹೇರಳವಾಗಿ ದವಸ–ಧಾನ್ಯ, ವಸ್ತ್ರ, ಹಣ–ಸಂಪತ್ತು ಉದಾರ ಮನೋಭಾವದಿಂದ ನೀಡಿ ಸಮಾಜೋದ್ಧಾರದ ಕಾರ್ಯಗಳಿಗೆ ಪ್ರೇರಿತರಾಗಿದ್ದರು. ಆದರೆ ಮತ್ತೆ ಕೆಲವು ಶಿವಭಕ್ತರಲ್ಲಿ ಈ ರೀತಿಯ ಗುಣಗಳಿರುವುದು ಹರಿಹರ ಗುರುತಿಸಿಲ್ಲ. ಅದರಲ್ಲೂ ಪ್ರಮುಖವಾಗಿ ತಂದೆ ಸಂಪಾದಿಸಿದ ಹಣವನ್ನು ತನ್ನ ಸುಖಕ್ಕೆ ಮಾತ್ರ ಮೀಸಲಾಗಿಸಿಕೊಂಡು, ಹಣ ತೀರಿಹೋದಾಗ ಪ್ರೇಯಸಿಯ ಮಾತಿನಂತೆ ಶಿವನ ಒಲುಮೆಯನ್ನು ಬೆಳೆಸಿಕೊಂಡ ಮಲುಹಣನ ಚರಿತ್ರೆ ದಾನ–ಧರ್ಮದಂತಹ ಮೌಲ್ಯವನ್ನು ಮರೆದಿರುವುದಿಲ್ಲ. ತಿರುನೀಲಕಂಠ, ಉದ್ಭಟದೇವ, ಮಲಯರಾಜ ಮೊದಲಾದ ರಗಳೆಗಳಲ್ಲಿ ದಾನ–ಧರ್ಮದ

ವಿಷಯಗಳು ಪ್ರಸ್ತಾಪವಾಗಿರುವುದಿಲ್ಲ. ಜೀವನದಲ್ಲಿ ಕೈಗೊಳ್ಳುವ ವೃತ್ತಿಗಳನ್ನು ಆಧ್ಯಾತ್ಮಿಕಕ್ಕೆ ಅಳವಡಿಸಿಕೊಳ್ಳುವ ಕೌಶಲ್ಯ ಶಿವಭಕ್ತರದು. ಜೀವನ ವೃತ್ತಿಗಳಿಂದ ಗಳಿಸಿದ ಸಂಪಾದನೆ ಇಲ್ಲವೆ ತನ್ನ ಬಳಿ ಇರುವ ಸಂಪತ್ತಿನಿಂದ ದಾನ–ಧರ್ಮದಂತಹ ಕಾರ್ಯಗಳನ್ನು ಮುಕ್ತ ಮನಸ್ಸಿನಿಂದ ಮಾಡುತ್ತಿದ್ದರು. ಈ ಮಾನವೀಯ ಗುಣಗಳನ್ನು ಪರಮಾತ್ಮನ ಸಾಕ್ಷಾತ್ಕಾರದ ಸಾಧನಗಳನ್ನಾಗಿ ಬಳಸಿಕೊಂಡ ಶಿವಭಕ್ತರ ಪ್ರಪಂಚವನ್ನು ತನ್ನ ರಗಳೆಗಳಲ್ಲಿ ಹರಿಹರನು ಕಟ್ಟಿಕೊಟ್ಟಿದ್ದಾನೆ. ಇಳೆಯಾಂಡ ಗುಡಿಮಾರ, ಅಮರನೀತಿ, ಸಿರಿಯಾಳ, ಮನುನೀತಿ ಚೋಳ, ನಿಡುಮಾರ ದೇವ, ಚೇರಮನಾರರ ರಗಳೆಗಳಲ್ಲಿ ಧರ್ಮನಿಷ್ಠ ಮನೋಭಾವಗಳು ಎದ್ದುತೋರುತ್ತದೆ.

***ಜೀವನದ ಆದರ್ಶಗಳು***

ಮಾನವರು ಜೀವನದಲ್ಲಿ ಸಾಧನೆಮಾಡಿ ಸಾಫಲ್ಯವನ್ನು ಪಡೆಯುವ ಸಲುವಾಗಿ ಇಡೀ ತನ್ನ ಪರಿಸರವನ್ನೇ ಶಿವಮಯಗೊಳಿಸುವ ಹರಿಹರ, ಭಕ್ತಿಯ ಏಕಾಂತ ಜೀವನವನ್ನೇ ಕಾವ್ಯದ ವಸ್ತುವನ್ನಾಗಿ ಮಾಡಿಕೊಂಡಿದ್ದಾನೆ. ರಗಳೆಯ ಕೊನೆಯಲ್ಲಿ ಈ ಶಿವಭಕ್ತನ ಅತಿಭಕ್ತಿಗೆ ಭವಬಂಧನದಿಂದ ದೂರವಾದ ಮೋಕ್ಷಪದವಿಯನ್ನು ನೀಡಿ, ಯಶಸ್ಸು ಕೋರಿ ಹರಸಿರುವಂತೆ ನನಗೂ ಕೃಪೆದೋರು ಹಂಪೆಯ ವಿರೂಪಾಕ್ಷದೇವನೆ ಎಂದು ಬೇಡುವ ಆ ಸಾಲುಗಳಲ್ಲಿ ಹರಿಹರನ ವಿನಮ್ರ ಸ್ವರೂಪದ ಭಯ–ಭಕ್ತಿ ಎದ್ದು ತೋರುತ್ತದೆ. ಆದ್ದರಿಂದ ಹರಿಹರನ ಕುರಿತು ಡಾ.ಜಿ.ಎಸ್. ಶಿವರುದ್ರಪ್ಪ ಹೇಳಿರುವ ಮಾತುಗಳು ಅರ್ಥಪೂರ್ಣವೆನಿಸೆದೆ. ಹರಿಹರನ ರಗಳೆಗಳು ಮುಖ್ಯವಾಗಿ ಭಕ್ತಿಜೀವನ ಅಂತರಂಗದ ಕೈಪಿಡಿಗಳು, ಅವನ ದರ್ಶನಕ್ಕೆ ನಿದರ್ಶನವಾಗಿ ಒಡ್ಡಿದ ಕಥಾಪ್ರತಿಮೆಗಳು ವಚನಕಾರರ ಜೀವನ ಹಾಗು ಮೌಲ್ಯಗಳಿಗೆ ಬರೆದ ಭಾಷ್ಯಗಳಾಗಿವೆ.[2] ಹೀಗೆ ಹರಿಹರನಿಗೆ ಇಷ್ಟು ಸವಿಸ್ತಾರವಾದ ಜೀವನಶ್ರದ್ಧೆ ಬೆಳೆಯಲು ಪ್ರಮುಖವಾಗಿ ಆತನ ಕೌಟುಂಬಿಕ ಹಿನ್ನೆಲೆ, ಗುರುಕುಲ ವಿದ್ಯಾಭ್ಯಾಸ, ಶೈವ–ವೀರಶೈವ ಮತ ಸಂಪ್ರದಾಯಗಳು, ತಮಿಳುನಾಡಿನ ಅರವತ್ತಮೂರು ಪುರಾತನರು, ವಚನ ಸಾಹಿತ್ಯದ ಕಾಲದಲ್ಲಿ ಶಿವಶರಣರ ನೇರ ನಡೆ–ನುಡಿ, ಧರ್ಮಶ್ರದ್ಧೆ, ಕಾಯಕತತ್ವ, ಶಿವಾನುಭವ ಹಾಗು ಕ್ರಾಂತಿ ಮನೋಭಾವ ಭಾರತದಲ್ಲಿದ್ದ ಶಿವಭಕ್ತರು ಮತ್ತು ವೈಯಕ್ತಿಕ ಜೀವನಾನುಭವ, ಶಿವಭಕ್ತಿ, ಧರ್ಮಶ್ರದ್ಧೆ ಮೌಲ್ಯಗಳೇ ಕಾರಣವಿರಬಹುದು. ಸತ್ಯ, ಮನಃಶುದ್ಧಿ, ನಿಷ್ಠೆ, ನ್ಯಾಯ ನೀತಿಗಳೆಂಬ ಮೌಲ್ಯ ಆದರ್ಶಗಳನ್ನು ಕಥೆಯ ಮೂಲಕ ಪ್ರತಿಷ್ಠಾಪನೆಯನ್ನು ಹರಿಹರ ಮಾಡಿದಂತಿದ್ದಾನೆ. ಏಕಾಂತರಾಮಯ್ಯ, ಕುಲಚ್ಚೆರೆ, ಮೊನೆಯಿಡುವರ, ಮೆರೆಮಿಂಡದೇವ, ಇಹಃ ಪಗೆಯಾಂಡರ, ಸೇದಿರಾಜ, ಕಲಿಕಾಮದೇವರ, ಶಂಕರದಾಸಿಮಯ್ಯ ಮೊದಲಾದ ರಗಳೆಗಳಲ್ಲಿ ಸಂಘರ್ಷಗಳು ಹೋರಾಟದ ಹೆಸರಿನಲ್ಲಿ ಮೂಡಿಬಂದಿದ್ದರೂ, ಶಿವಶರಣರು ತಮ್ಮ ಜೀವನದ ಆದರ್ಶಗಳಿಗೆ ಬದ್ಧರಾಗಿಯೇ ನಡೆದಿರುವುದು ವಿಶೇಷವಾಗಿದೆ. "ಭಕ್ತಿ, ನಿಷ್ಠೆ, ಸಮರ್ಪಣೆ – ಇವುಗಳು ದೈವೀ ಜೀವನದ ಸಾಧನೆಗಳೆಂಬ ಮಾತು ಸ್ಪಷ್ಟವಿದೆ. ಆದರೆ ಜೀವನದ ವ್ಯವಹಾರ ಬೇರೆ; ಆಧ್ಯಾತ್ಮದ ಹಾದಿ ಬೇರೆ ಎಂಬ ವಿಭಾಜಕ ದೃಷ್ಟಿಯು ಸಾಮಾನ್ಯವಾಗಿ ಮಾನವರಲ್ಲಿ ಕಂಡುಬರುತ್ತಿದೆ. ಇದಲ್ಲದೆ ಜೀವನದ ವ್ಯವಹಾರವು ಆಧ್ಯಾತ್ಮದ ಸಾಧನೆಗೆ ತೊಡಕಾಗುವುದೆಂದು ತಿಳಿದು ಜೀವನದಿಂದ ವಿರಕ್ತಿ ಪಡೆಯುವ ಹವಣಿಕೆಯಾದರೂ ಇರುತ್ತದೆ. ಹರಿಹರನ ಶಿವಗಣ ಪ್ರಪಂಚದಲ್ಲಿ ಇಂತಹ ದೃಷ್ಟಿಗಳಿಗೆ ಅವಕಾಶವಿಲ್ಲ, ದಿನಚರಿಯ ವ್ಯವಹಾರದೊಂದಿಗೆ ದೈವೀ ಜೀವನವನ್ನು ಸಾಧಿಸಬೇಕೆಂಬ ದೃಷ್ಟಿಯನ್ನು ಹರಿಹರನು ನಿರೂಪಿಸಿದ್ದಾನೆ"[3] ಇಂಥ ಮೌಲ್ಯದರ್ಶನಗಳನ್ನು ಒಳಗೊಂಡ ಭಕ್ತಿ ಸೂತ್ರವು ಸುತ್ತಣ ಜೀವನವನ್ನು

ಅರ್ಥೈಸುವ ಸಾಧನವನ್ನು ಹರಿಹರನು ತನ್ನ ರಗಳೆಗಳಲ್ಲಿ ದರ್ಶನವನ್ನಾಗಿಸಿದ್ದಾನೆ.

ಹರಿಹರ ಕವಿಯನ್ನು ಕನ್ನಡ ಸಾಹಿತ್ಯದ ಎಲ್ಲಾ ಕವಿಗಳಿಗಿಂತ ವಿಭಿನ್ನಗೊಳಿಸಿರುವುದು ಕವಿಯ ಜೀವನಾದರ್ಶ ಮತ್ತು ಅವರ ಕೃತಿಗಳಿಂದ ಅಲ್ಲಿ ವ್ಯಕ್ತವಾಗುವ ಜೀವನ ಆದರ್ಶ ಮತ್ತು ದರ್ಶನಗಳು ಎಲ್ಲಾ ಕಾಲಕ್ಕೂ ಮೌಲ್ಯಗಳಾಗಿ ನಿಲ್ಲುವ ಸಾಮರ್ಥ್ಯವನ್ನು ಹೊಂದಿರುವಂಥವು. ಅಲ್ಲದೆ ಸಮಾಜಕ್ಕೆ "ಬದುಕು" ಎಂಬುದನ್ನು ದೇವರು ಕೊಟ್ಟ ವರ, ಅದನ್ನು ಭಕ್ತಿ–ಭಾವದಲ್ಲಿ ಮುಳುಗಿಸಬೇಕು ಎಂಬುದು ವೇದ್ಯವಾಗುತ್ತದೆ. ಬದುಕನ್ನು ಕಲೆ ಮತ್ತು ನಂಬಿಕೆಯಾಗಿ ತಿಳಿದು ಅರ್ಥಪೂರ್ಣವಾಗಿ ಜೀವಿಸುವುದು ಮನವನ ಚಾತುರ್ಯವೆನಿಸುತ್ತದೆ. ಎಷ್ಟು ವರ್ಷ ಬದುಕಿದ ಎನ್ನುವುದಕ್ಕಿಂತಲೂ ಹೇಗೆ ಬದುಕಿದ ಎನ್ನುವುದೇ ಬಾಳುವೆಯಲ್ಲಿರುವ ಸಾರ್ಥಕ್ಯ, ಅದನ್ನು ಭಕ್ತಿಭಾವದಿಂದ, ಧರ್ಮಯುತವಾಗಿ, ಆದರ್ಶ ಅನುಕರಣೀಯವಾಗಿ ಕೈಗೊಳ್ಳುವುದರಲ್ಲೇ ಮಾನವ ಜೀವಿತದ ಪರಮೋನ್ನತಿ ಅಡಗಿರುವುದು ಎಂದೆನಿಸುತ್ತದೆ. ಸಾವಿರಾರು ವರ್ಷಗಳು ಸಂದರೂ ಈ ಭೂಮಿಯಲ್ಲಿ ಎಷ್ಟೋ ಜನರು ಜನಿಸುತ್ತಾರೆ, ಜೀವಿಸುತ್ತಾರೆ, ನಂತರ ಮೃತಿ ಹೊಂದುತ್ತಾರೆ. ಆದರೆ ಹುಟ್ಟಿದ ಎಲ್ಲರೂ ಸ್ಮರಣೀಯರಾಗುವುದಿಲ್ಲ. ಹುಟ್ಟುಸಾವುಗಳೆಂಬ ಈ ಪ್ರಕ್ರಿಯೆಯು ನಿರಂತರವಾಗಿದ್ದರೂ ಎಲ್ಲೋ ಅಲ್ಲೊಬ್ಬರು, ಇಲ್ಲೊಬ್ಬರು ಮಾತ್ರ ಸ್ಮರಣೀಯರಾಗುತ್ತಾರೆ. ಹುಟ್ಟುವವರೆಲ್ಲರೂ ರಾಜರಾಗಿಯೇ ಶ್ರೀಮಂತರಾಗಿಯೇ ಹುಟ್ಟುವುದಿಲ್ಲ. ಬದಲಿಗೆ ಬಂದ ಸ್ಥಿತಿಯಲ್ಲೇ ಬದುಕನ್ನು ಸ್ವೀಕರಿಸುತ್ತಾ ಕಲೆ, ಕೃಷಿ, ಉದ್ಯೋಗ, ವ್ಯಾಪಾರ, ಧಾರ್ಮಿಕ, ಸಮಾಜ ಸೇವೆ ಹೀಗೆ ವೈವಿಧ್ಯಮಯ ಕಸುಬಿನಲ್ಲಿ ನಿರತರಾಗಿ ಸಂತೃಪ್ತಿಯಾದಾಗಲೇ ಬದುಕಿಗೆ ಒಂದು ಅರ್ಥ. ಇದೇ ತತ್ವವನ್ನೇ ಅಂದು ವಚನಕಾರರು ಸಾರಿದ್ದು, ಬದುಕನ್ನು ಕರುಣಿಸಿದಂತಹ ಶಿವನನ್ನು ಸದಾ ನೆನೆಯುತ್ತಾ, ಸಮರ್ಪಣಾ ಮನೋಭಾವದಿಂದ ಯಾರು ದುಡಿಯುತ್ತಾರೋ ಅವರೇ ಶ್ರೇಷ್ಠರು. ಬಸವಣ್ಣನವರ "ಕಾಯಕವೇ ಕೈಲಾಸ" ಎಂಬ ವೃತ್ತಿನಿಷ್ಠೆಯ ತತ್ವವನ್ನು ನಂಬಿ, ಜೀವನದ ಆದರ್ಶಗಳನ್ನು ಮೈಗೂಡಿಸಿಕೊಂಡಿದ್ದಾರೆ. ದುಡಿದು ಗಳಿಸಿದ ಸಂಪಾದನೆಯಲ್ಲಿ ದೀನದಲಿತರ ಕಣ್ಣೀರೊರೆಸುವ, ಬದುಕನ್ನು ಹಸನುಗೊಳಿಸುವ, ಬದುಕುವ ಮತ್ತು ಬದುಕಲು ಅವಕಾಶವನ್ನೀಯಬೇಕೆಂಬ ತತ್ವ ಬಾಳಿಗೆ ಇಳಿಯುತ್ತದೆ. ಆಗ ಮಾತ್ರ ಬದುಕು ಒಂದು ಸುಂದರ ಕಲೆಯಾಗುತ್ತದೆ. ಸಾರ್ಥಕ ಬದುಕಾಗುತ್ತದೆ ಎಂಬ ಸಾರ್ಥಕದ ಬದುಕಿನ ಸಾರವನ್ನು ಹರಿಹರ ಶಿವಭಕ್ತರ ಕಥೆಗಳ ಮೂಲಕ ಸಾದರಪಡಿಸಿದ್ದಾನೆ. ಇಂಥ ಜೀವನಾದರ್ಶನಗಳನ್ನು ಒಳಗೊಂಡಿರುವ ಶಿವಭಕ್ತರ ಭಕ್ತಿಯುತವಾದ ಜೀವನ ದರ್ಶನವನ್ನು ಹರಿಹರ ತನ್ನ ಕೃತಿಗಳಲ್ಲಿ ಎತ್ತಿಹಿಡಿದಿದ್ದಾನೆ. ಅಲ್ಲದೆ "ಬಸವಣ್ಣನವರ ವಚನಗಳು ಭಕ್ತಿ, ಕಾಯಕ, ದಾಸೋಹಗಳನ್ನು ಬಿಂಬಿಸುತ್ತವೆ. ಇಂಥ ಭಕ್ತಿಯನ್ನು

ಹರಿಹರ ಆಚರಿಸಿದ ಮತ್ತು ಅಂತ ಭಕ್ತಿಯುಳ್ಳ ಪುರಾತನರ, ಶರಣರ ಚರಿತ್ರೆಗಳನ್ನು ರಚಿಸಿದ. ಸ್ವತಃ ತಾನೇ ಭಕ್ತನಾದುದರಿಂದ ತನ್ನ ಕಾವ್ಯಗಳಲ್ಲಿ ಅತ್ಯಂತ ತಾದಾತ್ಮ್ಯನಾಗುವುದರಿಂದ ಆ ಕಾವ್ಯಗಳು ಓದುಗರ ಅಂತರಂಗದ ಕದಗಳನ್ನು ತೆರೆಯುತ್ತವೆ. ಸಾಮರಸ್ಯದ ಸುಖವನ್ನು ನೀಡುತ್ತವೆ."[4] ಹರಿಹರನ ರಗಳೆಗಳು ಮಾನವನ ಭಕ್ತಿಪಾಶದಿಂದ ಶಿವನನ್ನು ಸೆರೆ ಹಿಡಿಯುತ್ತದೆ. ಶಿವನನ್ನು ಬಿಟ್ಟು ಅಗಲಾರದಷ್ಟು ಭಕ್ತನ ಮನಸ್ಸು ಗಟ್ಟಿಯಾಗುತ್ತದೆ.

***ವರ್ಗ–ವರ್ಣ–ಸ್ತ್ರೀ ಬೇಧ ನಿರಾಕರಣೆ***

ಆದಿಕಾಲದಿಂದಲೂ ಮನುಷ್ಯರಿಂದ ನಿರ್ಮಾಣಗೊಂಡಿರುವ ಅಸಮಾನತೆಯನ್ನು ಹರಿಹರ ಕವಿ, 12ನೇ ಶತಮಾನದ ವಚನಕಾರರ ಆಶಯದಂತೆ ಅದನ್ನು ನಿರಾಕರಿಸುವ ಮತ್ತು ಹೋರಾಟ ಮನೋಭಾವದ ಮೂಲಕ ಗೆದ್ದುನಿಲ್ಲುವ ಮನೋಧೈರ್ಯ ಅಚ್ಚುಕಟ್ಟಾಗಿ ಮೂಡಿದೆ. "ಪುರಾತನ ಶರಣರ ಚರಿತ್ರೆಗಳನ್ನು

ಕಾವ್ಯಗೊಳಿಸುವುದೆಂದರೆ ಅವರ ಮೌಲ್ಯಗಳನ್ನು ಕಾವ್ಯಗೊಳಿಸುವುದಾಗಿದೆ.

ಈ ಕೆಲಸವನ್ನು ಸಾಧಿಸುವುದಕ್ಕಾಗಿ ಹರಿಹರ ವಚನಮೌಲ್ಯಗಳಾದ ವರ್ಗಬೇಧ, ವರ್ಣಬೇಧ ಮತ್ತು ಲಿಂಗಬೇಧ ನಿರಾಕರಣೆಗಳಿಗೆ ತನ್ನ ಕೃತಿಗಳನ್ನು ನೆಲೆಯಾಗಿಸಿದನು. ವೈದಿಕರ ಈ ಬೇಧ ಮೌಲ್ಯಗಳನ್ನು ಕಟ್ಟುವ ಬಗ್ಗೆ ರಗಳೆಗಳಲ್ಲಿ ಅನನ್ಯರೀತಿಯಲ್ಲಿ ಮೂಡಿದೆ."[5] ಎಂಬ ಡಾ॥ಎಂ.ಎಂ.ಕಲಬುರ್ಗಿರವರ ಹೇಳಿಕೆಯು ಒಪ್ಪುವಂತದ್ದು. ಈ ಸಮಾಜದಲ್ಲಿ ಜನರ ನಡುವೆ ಬೇಧವೆಂಬುದು ಹುಟ್ಟಿ ಒಬ್ಬರು ಮತ್ತೊಬ್ಬರನ್ನು ಕೀಳಾಗಿ ಕಾಣುವುದಕ್ಕೆ ಧರ್ಮದ ಹೆಸರಿನಲ್ಲಿ ಹುಟ್ಟಿರುವ ಅಸಮಾನತೆಗಳೇ ಕಾರಣ

1. ಮೇಲ್ಜಾತಿ – ಕೆಳಜಾತಿ
2. ಶ್ರೀಮಂತ ವರ್ಗ – ಬಡವರ್ಗ
3. ಪುರುಷವರ್ಗ – ಸ್ತ್ರೀ ವರ್ಗ

ಇಲ್ಲಿ ಮೇಲ್ಜಾತಿವಲಯ, ಶ್ರೀಮಂತ ಮತ್ತು ಪುರುಷ ವರ್ಗವು ತಮ್ಮಷ್ಟಕ್ಕೆ ತಾವು ಉತ್ತಮರು, ಶ್ರೇಷ್ಠರೆನಿಸಿಕೊಂಡು, ಕೆಳಜಾತಿ, ಬಡವವರ್ಗ, ಸ್ತ್ರೀವಲಯವನ್ನು ಶೋಷಣೆಗೊಳಪಡಿಸಿ ಅವರನ್ನು ಅಧಮರೆನಿಸಿಬಿಟ್ಟಿದ್ದಾರೆ. ಈ ಬಗೆಯ ಅಸಮಾನತೆಯನ್ನು ನಿರಾಕರಿಸುವ ಉದ್ದೇಶದಿಂದ

1. ವರ್ಣಬೇಧ
2. ವರ್ಗಬೇಧ
3. ಲಿಂಗಬೇಧವೆಂಬ ಪ್ರತಿಪಾದನೆಯನ್ನು ಹರಿಹರ ತನ್ನ ರಗಳೆಗಳಲ್ಲಿ ಗುರುತಿಸಿದ್ದಾನೆ.

ಈ ಅಂಶಗಳನ್ನು ಡಾ. ಎಂ.ಎಂ. ಕಲಬುರ್ಗಿ ಮತ್ತು ಡಾ. ಗುರುಪಾದ ಮರಿಗುದ್ದಿ ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ.

1. ವರ್ಣಬೇಧ ನಿರಸನ ರಗಳೆಗಳು
2. ವರ್ಗಬೇಧ ನಿರಸನ ರಗಳೆಗಳು
3. ಲಿಂಗಬೇಧ ನಿರಸನ ರಗಳೆಗಳು

ಎಂಬ ಕೃತಿಗಳನ್ನು ಡಾ. ಗುರುಪಾದ ಮರಿಗುದ್ದಿರವರು ಪ್ರಕಟಿಸಿರುತ್ತಾರೆ. ಹರಿಹರನ ರಗಳೆಗಳಲ್ಲಿ ಕಾಣುವ ಬೇಧ ನಿರಸನವು ಬಹುದೊಡ್ಡ ಕ್ರಾಂತಿಯ ನೆಲೆಯಲ್ಲಿ ವ್ಯಕ್ತವಾಗಿರುವ ಅಂಶಗಳನ್ನು ಈ ಮೇಲಿನ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಸಮಾಜದಲ್ಲಿ ಕಡೆಗಣಿಸಲ್ಪಟ್ಟಿರುವವರು ಶಿವಭಕ್ತರಾಗಿದ್ದರೆ ಸಾಕು, ಅವರು ಕಥಾನಾಯಕ/ನಾಯಕಿರಾಗಿ, ಭಕ್ತಿ–ಭಾವದಿಂದ ಕೂಡಿ ಧರ್ಮ ಹಾಗು ನ್ಯಾಯಯುತ ಬದುಕನ್ನು ಬಾಳಿ ಎಲ್ಲರಿಗೂ ಮಾದರಿಯಾಗಿ ಆದರ್ಶಪ್ರಾಯರಾಗಬಹುದು. ಇದು ಸಾಹಿತ್ಯ ಕ್ಷೇತ್ರದಲ್ಲಿ ನಡೆದ ಅಭೂತಪೂರ್ಣ ಬದಲಾವಣೆ ಎನಿಸಿಕೊಂಡಿದೆ. ವನಕಕಾರರಿಂದ ಪ್ರಭಾವಹೊಂದಿ ಶಿವಶರಣರ ಚರಿತ್ರೆಯನ್ನು ಹೊಸ ಶೈಲಿಯಲ್ಲಿ ರಚಿಸಿರುವ ಹರಿಹರನ ಸಾಹಿತ್ಯ ಜೀವನಾದರ್ಶವಾಗಿದೆ. ವರ್ಣ–ವರ್ಗ–ಸ್ತ್ರೀ ಬೇಧ ನಿರಾಕರಣೆಯಿಂದಾಗಿ ಸಮಾಜದಲ್ಲಿ ಸಮಾನತೆಯೆಂಬ ಹೊಸಬೆಳಕು ಎಲ್ಲೆಡೆ ಮೂಡಿ ಧಾರ್ಮಿಕ ಸಾಮಾಜಿಕ ಸ್ವಾತಂತ್ರ್ಯಕ್ಕೆ ಅವಕಾಶವಿತ್ತು. ಇಲ್ಲಿ ಹೊಸ ಸಮಾಜದ ನಿರ್ಮಾಣಕ್ಕೆ ರಗಳೆಗಳಲ್ಲಿ ಪ್ರತಿಪಾದನೆಯಾಗಿದ್ದ ಇಂತಹ ಮೌಲ್ಯಗಳ ಅಗತ್ಯವಿದೆ. ಕೆಳವರ್ಗ, ಕೆಳಜಾತಿ ಮತ್ತು ಸ್ತ್ರೀ ಪರವಾದ ಸಂವೇದನೆಯು ಒಂದು ಸಮಾಜದ ಅಭಿವೃದ್ಧಿಯ ಆರೋಗ್ಯಕರ ಬೆಳವಣಿಗೆಯಾಗಿದೆ. ಉದಾ : ಅಕ್ಕಮಹಾದೇವಿ, ಕಾರಿಕಾಲಮ್ಮೆ, ವೈಜಕವ್ವೆ, ನಿಂಬಿಯಕ್ಕ, ಕೊಡಗೂಸು, ಹೆರೂರು ಹೆಣ್ಣು, ಮಾದಾರ ಚೆನ್ನಯ್ಯ, ಇಳೆಯಾಂಡ ಗುಡಿಮಾರ, ಬೋಗಣ್ಣ, ಬೇಡರ ಕಣ್ಣಪ್ಪ, ಅರಿವಾಳ್ತಾಂಡರ ಮೊದಲಾದ ರಗಳೆಗಳಲ್ಲಿ ನಿರ್ಲಕ್ಷ ಸಮಾಜದ ಪರವಾದ ಧನಿ ಮೂಡಿದೆ.

***ರಾಜ/ಯಾಜಮಾನ್ಯರೆಂಬ ಸಂಸ್ಕೃತಿಯ ನಿರಾಕರಣೆ***

ಹರಿಹರನ ರಗಳೆಗಳಲ್ಲಿ ರಾಜ–ಯಾಜಮಾನ್ಯರೆಂಬ ಪ್ರಬಲರ ನಿರಾಕರಣೆ ಕಂಡುಬರುತ್ತದೆ. ಇಹಃ ಪರೆಯಾಂಡರ, ಪಾಂಡ್ಯ ಮಹಾದೇವಿ, ಮಾದರ ಚೆನ್ನಯ್ಯ, ಬೋಗಣ್ಣ

ಮೊದಲಾದ ರಗಳೆಗಳಲ್ಲಿ ರಾಜರ ಪ್ರಸ್ತಾಪವಿದ್ದರೂ, ಅವರ ಸಂಪತ್ತು, ಅಧಿಕಾರದ ಬಲದಿಂದ ಅವರಿಗೆ ನಾಯಕಪಟ್ಟ ಒದಗಿ ಬರುವುದಿಲ್ಲ. ಬದಲಿಗೆ ಅಲ್ಲೆಲ್ಲ ನಿಷ್ಠಾವಂತ ಶಿವಭಕ್ತರೇ ನಾಯಕಪಟ್ಟಕ್ಕೇರುವುದು. ಅವರು ಹೊಂದಿರುವ ಭಕ್ತಿಯೇ ಅವರ ಪ್ರಧಾನ ಆಸ್ತಿ. ಶಿವಭಕ್ತರು ತಮ್ಮ ದಾನ–ಧರ್ಮ–ವೃತ್ತಿನಿಷ್ಠೆ–ಆದರ್ಶಗಳನ್ನೊಳಗೊಂಡ ಶಿವಭಕ್ತಿಯಿಂದ ಶಿವನನ್ನು ಮೆಚ್ಚಿಸಿ ಕೈಲಾಸದಲ್ಲಿ ಗಣಪದವಿ ಪಡೆಯುತ್ತಾರೆ. ಹರಿಹರನ ರಗಳೆಗಳಲ್ಲಿ ವ್ಯಕ್ತವಾಗಿರುವ ಕೌಟುಂಬಿಕ ವ್ಯವಸ್ಥೆಯಲ್ಲಿ ಗಂಡ ಹೆಂಡತಿಯ ನಡುವೆ ಸಮಾನತೆ ಇದೆ.

ಸತಿ–ಪತಿಗಳೀರ್ವರೂ ಒಂದಾಗಿ ನಡೆಸುವ ಭಕ್ತಿಗೆ ಶಿವಮೆಚ್ಚಿ ಕೈಲಾಸದಲ್ಲಿ ಗಣಪದವಿಯನ್ನೀಯುತ್ತಾನೆ. ಉದಾ : ಇಳೆಯಾಂಡ ಗುಡಿಮಾರನ ಕುಟುಂಬ, ಅಮರನೀತಿ ಕುಟುಂಬ, ಭಕ್ತಸಿರಿಯಾಳ, ಬಸವಣ್ಣ ದಂಪತಿಗಳು, ಓಹಿಲಯ್ಯ, ಕಲ್ಲಯ್ಯನ ತಂದೆ–ತಾಯಿ, ಮಹಾದೇವಿಯಕ್ಕನ ತಂದೆ–ತಾಯಿ, ಶಿವಭಕ್ತ–ಶಿವಭಕ್ತೆಯರು, ಜಡೆಯ ನಾಯನಾರ್–ಯಸ್ಯಜ್ಞಾನದೇವಿ, ಮಲುಹಣ ದಂಪತಿಗಳು ಇಲ್ಲಿನ ದಂಪತಿಗಳ ನಡುವೆ ತಾರತಮ್ಯವೆಂಬುದಿಲ್ಲ. ಏನಿದ್ದರೂ ಪರಸ್ಪರ ನಂಬಿಕೆ, ಪ್ರೀತಿ ವಿಶ್ವಾಸ, ಹೊಂದಾಣಿಕೆ, ಸಮನ್ವಯತೆಯಿಂದ ಕೂಡಿದ ಬದುಕಾಗಿರುತ್ತದೆ. ಇಬ್ಬರೂ ಒಂದುಗೂಡಿ ನಡೆಸುವ ಶಿವಭಕ್ತಿಗೆ ಶಿವನು ಒಲಿಯುವುದು ಬಹುಪಾಲು ಕಥೆಗಳಲ್ಲಿ ಗೋಚರವಾಗುವ ಅಂಶವಾಗಿದೆ.

ಹರಿಹರನ ಬದುಕಿನಲ್ಲಿ ಶಿವನ ಮೇಲಿನ ಅಪಾರ ನಂಬಿಕೆಯು ಮತ್ತು ಸಮಾಜದಲ್ಲಿ ಭಕ್ತಿ ಕೇಂದ್ರಿತ ಶಿವಶರಣರ ಕಥೆಗಳ ಪ್ರೇರಣೆಯಿಂದ ಅವನ ಬದುಕಿನ ಸರ್ವಸ್ವವೂ ಶಿವಮಯವೇ ಆಯಿತೆನ್ನಬಹುದು. ಹೀಗೆ ಭಕ್ತನು ಭಗವಂತನ ಮೇಲೆ ಅಪಾರ ನಂಬಿಕೆಯನ್ನಿಟ್ಟುಕೊಂಡು ಆರಾಧಿಸುವ ಸಾಧನವೇ ಭಕ್ತಿ. ಭಕ್ತನು ಮೌಲ್ಯ, ಆದರ್ಶ, ನಿಷ್ಠೆ ಮತ್ತು ಭಕ್ತಿಯಿಂದ ಶಿವನ ಸ್ವರೂಪವನ್ನು ಅರಿಯಲು ಪ್ರೇಮ, ಸ್ನೇಹ, ವಾತ್ಸಲ್ಯ ಮತ್ತು ದಾಸ್ಯತನದ ನೆಲೆಗಳಿಂದ ಮುನ್ನಡೆಯುತ್ತಾನೆ. ಅಲ್ಲಿ ಶಿವಭಕ್ತನು ಶಾಂತಸ್ವರೂಪಿಯೂ, ಧೈರ್ಯವಂತನಾಗಿಯೂ, ಮಧುರ ತನದಿಂದಲೂ ಕೆಲವೊಮ್ಮೆ ಉಗ್ರನಿಷ್ಠನಾಗಿಯೂ ಮತ್ತು ಸತಿ–ಪತಿ ಭಾವದಿಂದ ಶಿವ–ಭಕ್ತರ ಬಾಂಧವ್ಯ ಅನ್ಯೋನ್ಯತೆಯಿಂದ ಕೂಡಿರುತ್ತದೆ. ಈ ನಂಟಿಗೆ ಶಿವನು ಭಕ್ತರ ಮೇಲಿಟ್ಟಿರುವ ಪ್ರೀತಿ ಎಷ್ಟು ಅಪಾರವಾದುದೋ ಅಷ್ಟೇ ಪ್ರೇಮ ಮತ್ತು ವಿಶ್ವಾಸವನ್ನು ಭಕ್ತನು ಶಿವನ ಮೇಲಿಟ್ಟಿರುತ್ತಾನೆ. ಹೀಗೆ ಶಿವಭಕ್ತರ ಭಕ್ತಿ ಮತ್ತು ಜೀವನಾದರ್ಶಗಳು ಸರ್ವಕಾಲಕ್ಕೂ ಸಲ್ಲುವ ಸಾಮಾಜಿಕ ಮೌಲ್ಯಗಳಾಗಿವೆ. ಇಂಥ ಮೌಲ್ಯಾದರ್ಶಗಳಿಗೆ ಬದ್ಧರಾಗಿ ಬದುಕುವ ಶಿವಭಕ್ತರ ಕಥೆಗಳು ಸಮಾಜಕ್ಕೆ ಆದರ್ಶಪ್ರಾಯವಾಗಿದೆ.

## ಕಥಾನಾಯಕರ ವೈಶಿಷ್ಟ್ಯಗಳು

***ಶಿವಶರಣರು ನಿಸ್ಸೀಮ ಭಕ್ತರಾಗಿರುತ್ತಾರೆ***

ಶಿವಶರಣರೆಲ್ಲಾ ಶಿವನ ಒಲುಮೆಗಾಗಿ ಭಕ್ತಿಯಿಂದ ಸರ್ವಸಮರ್ಪಣಾ ಭಾವದಿಂದ ಕೂಡಿರುತ್ತಾರೆ. ಶಿವಶರಣರ ಜೀವಿತಕಾಲದಲ್ಲಿ ನಾಡಿನ ಸಮಕಾಲೀನ ಸಮಾಜದಲ್ಲಿ ಮನೆಮಾಡಿಕೊಂಡ ಲೋಪದೋಷಗಳು ಕಂಡುಬರುತ್ತದೆ. ಶೈವ, ವೈಷ್ಣವ, ಜೈನ, ವೈದಿಕ ಧರ್ಮಗಳ ನಡುವೆ ಸಂಘರ್ಷವಿರುವುದು ಗೋಚರಿಸುತ್ತದೆ. ಇದರ ಮಧ್ಯೆ ಶೈವಧರ್ಮ ತನ್ನ ಪ್ರಖರತೆ ಕಾಪಾಡಿಕೊಳ್ಳಲು ಅನ್ಯಧರ್ಮಗಳ ನಡುವೆ ಹೋರಾಟಮಾಡಿರುವ ವೀರ ಭಕ್ತನಾಯಕರನ್ನು ರಗಳೆಗಳಲ್ಲಿ ಗುರುತಿಸಬಹುದು. ಉದಾ : ಏಕಾಂತ ರಾಮಿತಂದೆ, ತೆಲುಗು ಜೊಮ್ಮಯ್ಯ, ಹೆರೂರು ಹೆಣ್ಣು ವೈಜಕವ್ವೆ, ವಾಗೀಶ್ವರ, ಮಾರುಡಿಗೆ ನಾಚಿತಂದೆ, ಬಸವಣ್ಣ ಮೊದಲಾದ ಶಿವಭಕ್ತರು ವೃತ್ತಿಯಲ್ಲಿ ಆಧ್ಯಾತ್ಮಿಕ ಸಾಧನೆಯ ಅರ್ಥವನ್ನು ಹುಡುಕುವ ನೆಲೆಯ ಕಡೆಗೆ ಶಿವಭಕ್ತರು ಕಥಾನಾಯಕರಾಗಿ ವಿಜೃಂಭಿಸಿದ್ದಾರೆ. ಶಿವಭಕ್ತನ ಭಕ್ತಿಯ ಮುಂದೆ ಕುಲ–ವೃತ್ತಿ–ಲಿಂಗ ಬೇಧಗಳು ಕಾಣಿಸುವುದಿಲ್ಲ. ಏನಿದ್ದರೂ ಅವರವರ

ಮನೋನಿಷ್ಠೆಯೇ ಮುಖ್ಯವೆನಿಸುತ್ತದೆ. ಅಂತರಂಗ ಶುದ್ಧಿಭರಿತವಾದ ನೇಮಕ್ಕೆ ಒತ್ತು ಕೊಟ್ಟಿದ್ದಾರೆ. ಶಿವನನ್ನು ಅರಿಯಲು ಹೋಗುವ ಭಕ್ತರು ಒಂದೇ ಪದ್ಧತಿಯಡಿಯಲ್ಲಿ ಹೋಗುವ ಅವಶ್ಯಕತೆ ಇಲ್ಲ. ಅದು ಭಕ್ತನ ಸ್ವಇಚ್ಛೆಯಾಗಿರುತ್ತದೆ. ಆ ಭಕ್ತನ ಅನುಭಾವ ಸಾರ್ಥಕತೆಯ ಫಲವನ್ನು ವಿವರಿಸಿದ್ದಾನೆ. ಸಮಾಜದ ಸಹೃದಯರೆಲ್ಲಾ ಆ ಭಕ್ತರ ಜೀವನದ ಯಶೋಗಾಥೆಯನ್ನು ತಿರುಗಿ ನೋಡುವಂತೆ ಅದನ್ನು ಅನುಸರಿಸಲು ಪ್ರೇರೇಪಣೆಯನ್ನು ಹರಿಹರ ತನ್ನ ರಗಳೆಗಳಲ್ಲಿ ನೀಡಿದ್ದಾನೆ.

***ಶಿವನು ತನ್ನ ಭಕ್ತರಿಗೆ ತಂದೊಡ್ಡುವ ಪರೀಕ್ಷೆಯ ಸ್ವರೂಪ***

ಹರಿಹರನ ಪಾಲಿಗೆ **'ಶಿವ'** ಎಂದರೆ ಶಾಂತ, ಮಂಗಳ, ನಿತ್ಯಾನಂದ, ಸ್ವಸ್ಥ, ಶಾಶ್ವತ ಎಂದೆಲ್ಲಾ ನಾವೂ ಅವನ ಕೃತಿಗಳ ಮೂಲಕ ಅರ್ಥೈಸಿಕೊಳ್ಳಬಹುದು. ನಿರಾಡಂಬನಾಗಿರುವ ಶಿವನು ಸರ್ವಸಮರ್ಥನೂ ಹಾಗೂ ಜಗದ್ದೋದ್ಧಾರನೂ ಆಗಿರುವ ಅವನನ್ನು ಒಲಿಸಿಕೊಳ್ಳುವುದಕ್ಕೆ ಮುಖ್ಯವಾಗಿ ಬೇಕಾದದ್ದು ಭಕ್ತಿಯೊಂದೇ. ಭಕ್ತಿಯಿಂದ ಏನನ್ನು ಸಮರ್ಪಿಸಿದರೂ ಶಿವನು ಒಲಿದು ಸಂತುಷ್ಟನಾಗಿ ಬಿಡುತ್ತಾನೆ. ಪರಿಪೂರ್ಣ ಮನಸ್ಸಿನ ಶಿವಭಕ್ತರ ಕೂಗಿಗೆ ಓಗೊಡುವ ಶಿವನು ಅವರನ್ನು ಪ್ರೀತಿಸಿ, ಸದಾ ತನ್ನ ಬಳಿಯಲ್ಲಿಯೇ ಇರಿಸಿಕೊಳ್ಳಲು ಹಂಬಲಿಸುತ್ತಾನೆ. ಶಿವಸಾಯುಜ್ಯವನ್ನು ಗಳಿಸುವುದೇ ಭಕ್ತನ ಧ್ಯೇಯವಾಗಿರುತ್ತದೆ.

**ಹರಿಹರನ ರಗಳೆಗಳ ಕಥಾವಸ್ತು ಸಾಮಾನ್ಯವಾಗಿ ಎರಡು ರೀತಿಯದ್ದು :**

1. ಭೂಲೋಕದಲ್ಲಿ ಹುಟ್ಟಿದ ಮನುಜರು ಶಿವಭಕ್ತಿಯನ್ನು ಮೆರೆದು ಕೈಲಾಸದಲ್ಲಿ ಗಣಪದವಿಯನ್ನು ಪಡೆದು ಶ್ರೇಷ್ಠ ಭಕ್ತರಾಗುವುದು.
2. ಶಿವಲೋಕದಲ್ಲಿನ ಶಿವಗಣಗಳು ಯಾವುದೋ ತಪ್ಪೊಂದನ್ನು ಮಾಡಿ ಮತ್ತೆ ಭೂಲೋಕದಲ್ಲಿ ಹುಟ್ಟಿ ಭಕ್ತಿಯನ್ನು ಮೆರೆದು ಕೈಲಾಸ ಸೇರಿ ಶಿವಸಾಯುಜ್ಯವನ್ನು ಗಳಿಸುವುದು.

**ಕೊನೆಟಿಪ್ಪಣಿಗಳು**

1. ಬಸವರಾಧ್ಯ, ಎನ್. *ಹರಿಹರದೇವ.* ಪುಟ.213
2. ಹೆಂಡಿ, ಬಿ.ಬಿ. *ಹರಿಹರ ಕವಿಯ ಜೀವನದರ್ಶನ.* ಪುಟ.34
3. ಮಾಳವಾಡ ಸ.ಸ. *ಹರಿಹರನ ರಗಳೆಗಳಲ್ಲಿ ಜೀವನದರ್ಶನ.* ಪುಟ. 96, 97
4. ಕಲಬುರ್ಗಿ, ಎಂ.ಎಂ. *ಹರಿಹರನ ರಗಳೆಗಳು.* ಪೀಠಿಕೆ ಭಾಗ
5. ಅದೇ. ಪೀಠಿಕೆ ಭಾಗ

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 104-113
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಕನ್ನಡ ಸಾಹಿತ್ಯದಲ್ಲಿ 'ಸಂಸ್ಕೃತಿಯ ಪರಿಕಲ್ಪನೆ' ನಿಷ್ಪತ್ತಿ ಮತ್ತು ಬೆಳವಣಿಗೆ : ಐತಿಹಾಸಿಕ ಚಿಂತನೆ

**ಡಾ. ವೈ. ಚಂದ್ರಬಾಬು**

ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ, ಗಂಗಾವತಿ ಭಾಗ್ಯಮ್ಮ ಗ್ರಾಮೀಣ ಪದವಿ ಕಾಲೇಜು, ಹೂವಿನ ಹಡಗಲಿ, ವಿಜಯನಗರ ಜಿಲ್ಲೆ

**Abstract:**

*ಸಂಸ್ಕೃತಿಯ ಪರಿಕಲ್ಪನೆ ಸಂಕೀರ್ಣ ಮತ್ತು ವ್ಯಾಪಕವಾದುದು. ಅದು ನಿರಂತರ ಮಾನವ ನಿರ್ಮಿತಿಯ ರಚನಾತ್ಮಕ ಸೃಷ್ಟಿ. ಪ್ರಕೃತಿ ಸತ್ಯ, ಇರುವಂತಹದು. ವಿಕೃತಿ ಪ್ರಕೃತಿಯ ವಿನಾಶ, ಇರುವುದನ್ನು ನಾಶಪಡಿಸುವುದು. ಸಂಸ್ಕೃತಿ ಸತ್ಯಸ್ಯ ಸತ್ಯ, ಇದು ಪ್ರಕೃತಿ ಪೂರಕ, ಹೊಸ ಆವಿಷ್ಕಾರ, ಒಂದು ರೀತಿಯ ಪ್ರಕೃತಿ ಪರಿಷ್ಕರಣೆ, ನವಸೃಷ್ಟಿಯೂ ಹೌದು ಎಂಬುದು ಪ್ರಕೃತಿ, ವಿಕೃತಿ, ಸಂಸ್ಕೃತಿಗಳ ಬಗ್ಗೆ ಒಂದು ಸರಳ ಚಿಂತನೆ. ಅರಿಸ್ಟಾಟಲ್ ಕೂಡ ಕಾವ್ಯ ನಿರ್ಮಿತಿ ಕುರಿತು ಇದೇ ರೀತಿಯ ಚಿಂತನೆಯನ್ನು ನೀಡಿದ್ದಾನೆ. ಪ್ರಸ್ತುತ ಸಂಸ್ಕೃತಿ ಎಂಬ ಪದ ಇತ್ತೀಚಿನ ದಿನಗಳಲ್ಲಿ ನಮ್ಮ ಬೌದ್ಧಿಕ ವಲಯದಲ್ಲಿ ಬಹಳ ಚರ್ಚೆಗೆ ಬರುತ್ತಿದೆ. ಸಂಸ್ಕೃತಿಯ ಹೆಸರಿನಲ್ಲಿಯೇ ಮಾನವನ ಬದುಕನ್ನು ಅರ್ಥೈಸುತ್ತಿದ್ದೇವೆ. ಪ್ರಸ್ತುತ ಲೇಖನದಲ್ಲಿ ಕನ್ನಡ ಸಾಹಿತ್ಯದಲ್ಲಿ 'ಸಂಸ್ಕೃತಿಯ ಪರಿಕಲ್ಪನೆ' ನಿಷ್ಪತ್ತಿ ಮತ್ತು ಬೆಳವಣಿಗೆ ಕುರಿತು ಚರ್ಚಿಸಲಾಗಿದೆ.*

**Keywords:** *ಸಂಸ್ಕೃತಿ, ಸಂಸ್ಕೃತಿ ಪರಿಕಲ್ಪನೆ, ಭೌತಿಕ ಸಂಸ್ಕೃತಿ, ಅಭೌತಿಕ ಸಂಸ್ಕೃತಿ.*

## ಪೀಠಿಕೆ

ಸಂಸ್ಕೃತಿಯ ಹೆಸರಿನ ಪರಂಪರೆಯಲ್ಲಿ ಕೆಳಸಂಸ್ಕೃತಿ, ಮೇಲ್ ಸಂಸ್ಕೃತಿ, ಪ್ರತಿ ಸಂಸ್ಕೃತಿ, ಉಪ ಸಂಸ್ಕೃತಿ, ಜನಪದ ಸಂಸ್ಕೃತಿ, ಕುಲೀನ ಸಂಸ್ಕೃತಿ, ವಿದೇಶಿ ಸಂಸ್ಕೃತಿ, ಭೋಗ ಸಂಸ್ಕೃತಿ, ಅನ್ಯಸಂಸ್ಕೃತಿ, ಮಾರುಕಟ್ಟೆ ಸಂಸ್ಕೃತಿ, ಅಕಾಡೆಮಿಕ್ ಸಂಸ್ಕೃತಿ, ಒಂದೇ, ಎರಡೇ ಭಾರತದಲ್ಲಿ ಜಾತಿ, ಮತ, ಧರ್ಮಗಳ ಅಧೀನ ಅಥವಾ ಅವುಗಳ ಜೋಡಣೆಯಾಗಿ, ಸಂಸ್ಕೃತಿ ಪದ ಬಳಕೆಯನ್ನು ಮಾಡುತ್ತ ಬರುತ್ತಿದ್ದೇವೆ. ಕಸಬುಗಳು ಕಾರ್ಯಗಳು ಸೇವೆಗಳನ್ನು ಸಂಸ್ಕೃತಿಯ ವ್ಯಾಪ್ತಿಗೆ ತಂದು ವಿವರಿಸುತಿದ್ದೇವೆ. ಮಾತನಾಡುತ್ತಿದ್ದೇವೆ, ಬರೆಯುತ್ತಿದ್ದೇವೆ, ಸಂಘರ್ಷ ಮಾಡುತ್ತಿದ್ದೇವೆ. ಹಾಗೆಂದು ಸಂಸ್ಕೃತಿ ಕುರಿತ ಚರ್ಚೆ ಇತ್ತೀಚಿನದೂ ಅಲ್ಲ. ಹಲವು ದಶಕಗಳಿಂದ ನಮಗೆ ಸಂಸ್ಕೃತಿ ಪದದ ಪರಿಚಯವಿದೆ. ಜಾಗತೀಕರಣ, ಖಾಸಗೀಕರಣ, ಉದಾರೀಕರಣಗಳ ಜೊತೆ ಮಾರುಕಟ್ಟೆ ಕುರಿತು ಚರ್ಚಿಸುವಾಗ ತಟ್ಟನೆ ಸಂಸ್ಕೃತಿ ಎಂಬ ಪದ ಬಂದು ನಿಂತುಬಿಡುತ್ತದೆ.

ಸಂಸ್ಕೃತಿ ಎಂದರೇನು? ಇಂದಿನ ಯುವ ಪೀಳಿಗೆ ಯಾವುದೇ ಯೋಚನೆ ಮಾಡದೆ ಕಲ್ಚರ್(culture) ಎಂದು ಆಂಗ್ಲ ಸ್ವೀಕೃತಿ ಪದದಿಂದ ಉತ್ತರಿಸಿಬಿಡುತ್ತದೆ. ಸಾಹಿತ್ಯ ವಿಮರ್ಶೆಯ ಚಿಂತನೆಗಳಲ್ಲಿಯೂ ಈ ಪದ ಉಪ್ಪಿನ ಕಾಯಿಯಂತೆ ಬಳಕೆಯಾಗುತ್ತಿದೆ.

**Please cite this article as:** ಚಂದ್ರಬಾಬು, ವೈ. (2024). ಕನ್ನಡ ಸಾಹಿತ್ಯದಲ್ಲಿ 'ಸಂಸ್ಕೃತಿಯ ಪರಿಕಲ್ಪನೆ' ನಿಷ್ಪತ್ತಿ ಮತ್ತು ಬೆಳವಣಿಗೆ: ಐತಿಹಾಸಿಕ ಚಿಂತನೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(3), 104–113

ಶ್ರೀಸಾಮಾನ್ಯನಿಗೆ ಅರ್ಥವಾಗದ ದ್ವಂದ್ವ. ಹಾಗೆಂದರೂ ತಪ್ಪು. ಅರ್ಥವಾಗಿದೆ. ಹೇಗೆ ಗೊತ್ತಿಲ್ಲ? 'ಮರವೆಲ್ಲ ಎಲೆಯಾದಾಗ, ಎಲೆ, ಕೊಂಬೆ, ಕಾಂಡ. ಬೇರು' ಹೇಳುವುದಕ್ಕೆ ಗೊಂದಲ. ಆದರೆ ಸಂಸ್ಕೃತಿಯ ಬಗ್ಗೆ ಅರಿವಂತೂ ಇದೆ. ಶ್ರೀಸಾಮಾನ್ಯ ಎಂದೂ ಸಂಸ್ಕೃತಿ ಪದವನ್ನು ಉಪಯೋಗಿಸಿಲ್ಲ, ಚರ್ಚೆ ಮಾಡಿಲ್ಲ, ಬಳಸಿಲ್ಲ. ಜಗತ್ತಿನಾದ್ಯಂತ ಈ ಶ್ರೀಸಾಮಾನ್ಯನ ಬದುಕಿನ ವಿಶೇಷತೆಗಳನ್ನು ಕುರಿತು ಸಂಸ್ಕೃತಿ ಪದವನ್ನು ಹುಟ್ಟು ಹಾಕಿ ಚರ್ಚಿಸುತ್ತಿದ್ದೇವೆ. ಸಂಸ್ಕೃತಿ ಪದವನ್ನು ಸುಶಿಕ್ಷಿತರು, ವಿದ್ಯಾವಂತರು, ನಾಗರಿಕರು, ಬೌದ್ಧಿಕ ಚಿಂತಕರು, ಉನ್ನತ ಎಂದು ಗುರುತಿಸಿಕೊಂಡಿರುವ ಸಮುದಾಯಗಳು ತಮ್ಮ ಸ್ಥಾನಮಾನದ, ಚರ್ಚೆಯ, ಅಸ್ಮಿತೆಯ ಪದವಾಗಿ ಬಳಸುತ್ತ ಬರುತ್ತಿವೆ.

ಕರ್ನಾಟಕ ಅಥವಾ ಭಾರತದಲ್ಲಿ ಸಂಸ್ಕೃತಿ ಪದದ ಬಳಕೆಯಾಗುವುದೇ ವಸಾಹತುಶಾಹಿಯ ಕಾಲದಲ್ಲಿ, ಬ್ರಿಟಿಷರು ಭಾರತವನ್ನು ಆಕ್ರಮಿಸಿ ಭಾರತೀಯರನ್ನು ಗುಲಾಮರನ್ನಾಗಿ ಮಾಡಿದರು. ಅವರ ಆಚಾರ–ವಿಚಾರಗಳನ್ನು, ಅವರ ವಸ್ತು–ಪರಿಕರಗಳನ್ನು ಉಡುಗೆ–ತೊಡುಗೆಗಳನ್ನು ಭಾರತೀಯರ ಮೇಲೆ ಏರಿ ತಮ್ಮದು ಶ್ರೇಷ್ಠ ಜೀವನಕ್ರಮವೆಂದು "Good culture" ಎಂದು ಸಾರಿದರು. ಆಗ ಭಾರತೀಯ ಸಂಸ್ಕೃತಿಯ ಪುನರ್ ಪರಿಷ್ಕರಣೆಯಾಗಬೇಕಾದ ಅನಿವಾರ್ಯತೆ ಎದುರಾದವು. ಅಷ್ಟೇ ಅಲ್ಲದೆ ಯುರೋಪಿಯನ್ ಭಾಷೆ ಮತ್ತು ವಿಷಯಗಳ ಅಧ್ಯಯನದಿಂದ ಸಂಸ್ಕೃತಿ ಪದ ಇಂಗ್ಲಿಷಿನ culture ಪದಕ್ಕೆ ಸಂವಾದಿಯಾಗಿ ಜೀವ ಪಡೆದು, ದೇಶೀಯತೆಯ ರೂಪಕವಾಗಿ ಸಜೀವಕ್ಕೆ ತಡಕಾಡಿತು. ಭಾರತೀಯ ಬಹುವಿಧದ ಜೀವನ ಕ್ರಮಗಳನ್ನು ಒಪ್ಪುವ, ಅವುಗಳನ್ನು ಏಕೀಭವಿಸಿ ಪುನರುಜ್ಜೀವನಗೊಳಿಸಿಕೊಂಡು, ನಡೆಯುವ ಭರವಸೆಗಳಿಂದ ಜಾಗೃತ ಆಂದೋಲನಗಳು ನಡೆದವು. ಆಗ ಹುಟ್ಟಿದ ಪದವೇ ಸಂಸ್ಕೃತಿ ಎಂದರೆ ತಪ್ಪಾಗಲಾರದು. ಇನ್ನಷ್ಟು ವಿವರಣೆಗಳನ್ನು ನೀಡುವುದಾದರೆ, ಭಾರತ ಸ್ವಾತಂತ್ರ್ಯ ಸಂಗ್ರಾಮದ ಹೋರಾಟ, ದೇಶೀಯ ಚಳುವಳಿ, ದೇಶದ ಜನರ ಒಕ್ಕೂಟವನ್ನು ಸಧೃಡಗೊಳಿಸಿ ಬಲಿಷ್ಠ ಸಮಾಜವನ್ನು ಕಟ್ಟುವ ಕನಸು, ವಿದೇಶೀಯರ ವಿರುದ್ಧ ಸೆಟೆದು ನಿಲ್ಲುವ ಆಶಯಗಳ ಪ್ರತಿಫಲವೇ, ಸಂಸ್ಕೃತಿ ಪದದ ಹುಟ್ಟಿಗೂ ಕಾರಣವಾಯಿತು.

ಅಂತಹ ವೈಚಾರಿಕ ಜಾಗೃತಿಯ ನೆಲೆಯಲ್ಲಿ ಭಾರತೀಯ ಪುರೋಹಿತ–ಅರಸೊತ್ತಿಗೆಯ ವ್ಯವಸ್ಥೆಯಲ್ಲಿ, ಅರ್ಥಾತ್ ವೈಧಿಕ ಸಮಾಜದ ಜೀವನ ಪದ್ಧತಿಗಳಲ್ಲಿ, ದೇವರು–ಧರ್ಮಗಳ ಹೆಸರಿನಲ್ಲಿ ನಡೆಯುವ ತಾರತಮ್ಯ, ಆರ್ಥಿಕತೆಯಿಂದ ಸದ್ರೃಢಗೊಳ್ಳುವ ಅವಕಾಶಗಳನ್ನು ಕಸಿದುಕೊಳ್ಳುವಿಕೆ, ಶ್ರಮದ ಮತ್ತು ಶ್ರಮಜೀವಿಗಳ ಬಗ್ಗೆ ತಾತ್ಸಾರ, ಶ್ರಮಜೀವಿಗಳನ್ನು ಅವಮಾನಗೊಳಿಸಿ, ಅವರ ಇರುವಿಕೆಯನ್ನುದೂಷಿಸಿ ತೇಜೋವಧೆಗೊಳಿಸುವುದು, ಗದ್ಗದ ಧ್ವನಿಹೊರಸೂಸುವಿಕೆ, ಜಡಸ್ವರೂಪ, ನರಕಯಾತನೆ ಕೊನೆಗೆ ಪ್ರಾಣಾಂತಿಕ ಹಲ್ಲೆ, ಬರ್ಬರ ಮರಣ ಎಂದು ಏನೆಲ್ಲಾ ಕರೆದರೂ ಕಡಿಮೆಯೇ ಎನ್ನುವಂತಹ ವಿಕೃತಿ ನೋವುಗಳಿಗೆ ತಳ್ಳಿದ ಸ್ವರೂಪಗಳು. ಶೂದ್ರರನ್ನು ಒತ್ತಾಯ ಪೂರ್ವಕವಾಗಿ ಶೋಷಣೆ ಮಾಡುತ್ತ, ಪಶುಗಳಿಗಿಂತ ಹೀನಾಯವಾಗಿ ಕಂಡು, ತಮ್ಮನ್ನು ಮಾತ್ರ, ಪುರೋಹಿತರು, ಕ್ಷತ್ರಿಯರು, ವೈಶ್ಯ ಸಮುದಾಯಗಳೆಂದು ಗುರುತಿಸಿಕೊಂಡು, ಮುಕ್ತಿಗೆ ಅರ್ಹವಾದ ಶ್ರೇಷ್ಠಕುಲಗಳೆಂದು ಬಿಂಬಿಸಿಕೊಂಡು, ಉಳಿದ ಶೂದ್ರ ಸಮುದಾಯಗಳನ್ನು ಅಸಮಾನತೆ, ಅಸ್ವಾತಂತ್ರ್ಯ, ಅಸೋದರತನಗಳಿಂದ ಕಾಣುವುದಲ್ಲದೆ, ಕೆಲವರನ್ನು ನಾಯಿ, ಬೆಕ್ಕು ಕತ್ತೆಗಳಿಗಿಂತ ಕಡೆಯಾಗಿ ನೋಡಿದ್ದರು. ಈ ವಿಕೃತ ಶೋಷಣೆಯ ನೆಲೆಗಳು ಬಹಿರಂಗವಾಗಿ ಚರ್ಚೆಗೆ ಒಳಗಾದವು.

ಭಾರತೀಯರಲ್ಲಿ ಈ ಅರಿವಿನ ಆಂದೋಲನಕ್ಕೆ ಕಾರಣ ಬ್ರಿಟಿಷರೇ, ಅವರ ಇಂಗ್ಲಿಷ್ ಶಿಕ್ಷಣ, ತಮ್ಮ ಅನುಕೂಲಕ್ಕಾಗಿ ದೇಶೀಯ ಜೀವನ ಪದ್ಧತಿಗಳನ್ನು

ಗುರುತಿಸುವುದು, ಸಾಹಿತ್ಯ ಗ್ರಂಥಗಳ ಸಂಗ್ರಹಣೆ, ರಾಜಕೀಯ ಉದ್ದೇಶದ ಭೇದ ನೀತಿ, ಶೋಷಿತ ಜನರ ಬಗ್ಗೆ ಜಡ ನಿಲುವು ಮತ್ತು ಅಲ್ಪಸ್ವಲ್ಪದ ಮೃದುಧೋರಣೆ, ಮತಪ್ರಚಾರಗಳು, ಭಾರತೀಯರ ರಾಜಕೀಯ ಸ್ವಾತಂತ್ರ್ಯವನ್ನು ಕಸಿದುಕೊಂಡಿರುವುದಲ್ಲದೆ, ಧರ್ಮ ಶ್ರೇಷ್ಠತೆಯ ಸಂಘರ್ಷ, ತಾರತಮ್ಯ, ಗ್ರಾಮೀಣ ಆರ್ಥಿಕತೆಗೆ ದಕ್ಕೆ, ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಬಹಳಷ್ಟು ಪಲ್ಲಟಗಳು ನಿರ್ಮಾಣವಾಗಲು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಕಾರಣಿಭೂತರಾದ್ದದು, ಭಾರತೀಯರನ್ನು ಕೆರಳಿಸುವಷ್ಟು, ಬ್ರಿಟಿಷರ ಹಲವು ಆಢಳಿತ ಸುಧಾರಣೆಗಳು, ಅವರನ್ನು ಒಂದುಗೂಡಿಸಲು ಪ್ರೇರೇಪಿಸಿತು. ಜೊತೆಗೆ ದೇಶೀಯ ನಾಯಕತ್ವಕ್ಕೆ ರಾಜಮನೆತನಗಳಲ್ಲದೆ, ಹೊಸಮುಖಗಳನ್ನು ಪರಿಚಯಿಸಿ ಅವರಲ್ಲಿ ವೈಚಾರಿಕ ಚಿಂತನೆಗಳು ಬೆಳೆಯಲು ಇದೇ ಬ್ರಿಟಿಷರು ಕಾರಣರಾದರು. ಈ ಹಲವು ಕಾರಣಗಳಿಂದ ಭಾರತದ ವೈಧಿಕರಿಗೆ ಬ್ರಿಟಿಷರಿಂದ ಮೇಲಿಂದ ಮೇಲೆ, ಅವಮಾನವಾಗುವ ಸನ್ನಿವೇಶಗಳು ಪುನಃ ಪುನಃ ಎದುರಾದಾಗ ಅವರ ವಿರುದ್ಧ ಹೋರಾಡುವ ಸಂಕಲ್ಪಗಳು ಬಲಗೊಂಡವು. ತಂತ್ರಗಳು ನೂರಾರನ್ನು ಯೋಚಿಸಲು ಮುಂದಾದರು.

ಮೇಲುನೋಟಕ್ಕೆ ಭಾರತೀಯ ವೈಧಿಕ ಸಮಾಜದ ಭಾಗವೇ ಆಗಿ, ಗುಲಾಮರಂತೆ ಬದುಕುತ್ತಿದ್ದ ಕೆಳಸಮುದಾಯಗಳು ಬ್ರಿಟೀಷರ ಸಹಾಯ ಪಡೆದು ಸ್ವಾತಂತ್ರ್ಯ ಜೀವನ, ಶೋಷಣೆಯಿಂದ ಬಿಡುಗಡೆಗೊಳಿಸಿಕೊಳ್ಳಬೆಂಕೆಂಬ ಚಿಂತನೆ ಬೆಳೆಸಿಕೊಳ್ಳುವ ಆಲೋಚನೆಗಳನ್ನು ಬಹಿರಂಗವಾಗಿ ಮಾತನಾಡಿದ ಸಂದರ್ಭದಲ್ಲಿ, ಅವರು ಬ್ರಿಟೀಷರ ಸೆಳೆತಕ್ಕೆ ಒಳಗಾಗುವುದನ್ನು ತಡೆಯಲು ವೈಧಿಕ ಧರ್ಮದ ಪರಿಷ್ಕರಣೆಯ ಅವಶ್ಯಕತೆಯಿದೆ, ವೇದಕಾಲದಲ್ಲಿ ಮಹಿಳೆ ಮತ್ತು ಶೂದ್ರರಿಗೆ ಉತ್ತಮ ಸ್ಥಾನಮಾನಗಳಿದ್ದವು, ಕಾಲಾನುಕ್ರಮದಲ್ಲಿ ಹಲವು ದೋಷಗಳು ಸೇರಿರಬಹುದು, ಅವುಗಳನ್ನು ಪರಿಶೀಲಿಸುವ ಅಗತ್ಯತೆಯಿದೆ. ಆದರೆ ಈಗ ಅಗತ್ಯವಾಗಿ ಬೇಕಿರುವುದು ಭಾರತದ ಸ್ವಾತಂತ್ರ್ಯ. ಅದನ್ನು ಪಡೆಯಲು ಭಾರತದ ಪ್ರತಿಯೊಬ್ಬರು ತ್ಯಾಗ ಬಲಿದಾನಗಳಿಗೆ ಬದ್ಧರಾಗಬೇಕು, ಎಂದು ಕೆಲವು ಸುಧಾರಣೆಗಳನ್ನು ವೈಧಿಕ/ಹಿಂದೂ ಧರ್ಮದ ಹೆಸರನ್ನು ಮುನ್ನಲೆಗೆ ತರಲು ಪ್ರಯತ್ನಿಸಲಾಯಿತು. ರಾಮರಾಜ್ಯದ ಕನಸನ್ನು ಸಾಂಸ್ಕೃತಿಕ ನಾಯಕತ್ವದ ನೆರಳಲ್ಲಿ ಹರಿಬಿಡಲಾಯಿತು.

ದೇಶಸೇವೆ, ನಾಡಿನ ನೆಲ ಜಲಗಳನ್ನು ಉಳಿಸುವುದು ಭಾರತದಲ್ಲಿ ಹುಟ್ಟಿದ ಪ್ರತಿಯೊಬ್ಬರ ಕರ್ತವ್ಯ, ಹಾಗೆ ನಡೆಯದವರು ದೇಶ ದ್ರೋಹಿಗಳು ಎನ್ನುವ ನಂಬಿಕೆ ಬೆಳೆಸುವಲ್ಲಿ ಮುಂದುವರೆದ ಭಾರತೀಯ ಜಾತಿಗಳು ಸಫಲವಾದವು. ಎಷ್ಟೋ ಸಮುದಾಯಗಳು ವೈಧಿಕ ಸಮುದಾಯದ ಶೋಷಣೆಗಳ ನಡುವೆಯೂ ದೇಶವೆಂಬ ಕಾರಣಕ್ಕಾಗಿ ಅನಿವಾರ್ಯವಾಗಿ ದ್ವಂದ್ವದಿಂದಲೇ ದೇಶ ಪ್ರೇಮದ ಬಂಧಿಯಾದರು. ಬ್ರಿಟೀಷರ ಕಾರಣದಿಂದ, ಪರಂಪರೆಯ ರಾಜ್ಯಶಾಹಿ ವಿನಾಶದ ಸಂದರ್ಭದಲ್ಲಿ, ಜನತಂತ್ರದ ಒತ್ತಡಕ್ಕೆ ಮಣಿದು ಪ್ರಜಾತಂತ್ರಕ್ಕೆ ಒಗ್ಗಿಕೊಳ್ಳುವ ಸಂದರ್ಭ ಭಾರತೀಯರಿಗೆ ಎದುರಾದಾಗ ಪ್ರಾಚೀನ ಪುರೋಹಿತಶಾಹಿ ವ್ಯವಸ್ಥೆ, ಹೊಸ ರೂಪಾಂತರ ಭಾರತೀಯ ನವ ಪುರೋಹಿತ ಶಾಹಿ ಚಳುವಳಿಯಾಗಿ ಬೆಳೆಯಿತು. ಇದು ಪರಕೀಯರ ವಿರುದ್ಧ ದೇಶೀಯ ಸಂಘಟನಾತ್ಮಕ, ಭಾವನಾತ್ಮಕ ತಂತ್ರಗಳನ್ನು ಬಲಗೊಳಿಸಲು ಯುರೋಪಿಯನ್ ಸಮುದಾಯಕ್ಕೆ ಅರ್ಥವಾಗುವ culture (ಕಲ್ಚರ್) ಪದಕ್ಕೆ ಸಂಸ್ಕೃತಿ ಪದದ ರೂಪವನ್ನು ಕೊಟ್ಟು ನನ್ನ ಸಂಸ್ಕೃತಿ, ಜನಪದ ಸಂಸ್ಕೃತಿ, ರೈತಸಂಸ್ಕೃತಿ, ಗ್ರಾಮೀಣಸಂಸ್ಕೃತಿ, ಮಹಿಳಾ ಸಂಸ್ಕರತಿ, ಭಾರತೀಯಸಂಸ್ಕೃತಿ ಎಂಬೆಲ್ಲಾ ರೂಪಕಗಳಲ್ಲಿ ಸಂಸ್ಕೃತಿಪದ ಮಹತ್ವವನ್ನು ಬೆಳೆಸಿಕೊಂಡಿತು. ಇದರಿಂದ ಬ್ರಿಟೀಷರ ವಿರುಧ್ಧದ, ದೇಶೀಯ ದಂಗೆಗೆ ಸಂಸ್ಕೃತಿಪದ ಅಸ್ತ್ರವಾಯಿತು.

ಅದು ಭಾರತೀಯ ಜನರನ್ನು ಒಗ್ಗೂಡಿಸುವ ಶಕ್ತಿಯಾಯಿತು.

ಮಹಾತ್ಮ ಗಾಂದೀಜಿಯವರಂತಹ ನಾಯಕರು ಸತ್ಯ, ಅಹಿಂಸೆ, ಸತ್ಯಾಗ್ರಹಗಳನ್ನು ಬೋಧಿಸಲು ಆಕರ ರೂಪಗಳಾಗಿದ್ದ ವಾಸ್ತವ ಚರಿತ್ರೆಗಳೆಂದರೆ, ಭಾರತೀಯ ಶೋಷಿತ, ಮೂಕ, ಶ್ರಮಜೀವಿ ಮಹಿಳಾ ಜೀವನ ಮತ್ತು ಶೂದ್ರ–ದಲಿತವರ್ಗಗಳಲ್ಲಿನ ನಿರುಪದ್ರವ ಭಾವನಾತ್ಮಕ ಗುಣಗಳೇ ಪಠ್ಯಭಾಗಳು. ವೈಧಿಕ ಧರ್ಮ ರಾಜಕಾರಣ, ಅಧಿಕಾರ ರಾಜಕಾರಣಗಳಿಂದ ಎಷ್ಟೇ ಶೋಷಣೆ, ನರಕಯಾತನೆಗಳನ್ನು ಅನುಭವಿಸಿದರೂ ಅದನ್ನು ಸಹಿಸುತ್ತಾ ಎದುರಾಡದ ಈ ಶ್ರಮಜೀವಿ ಮಹಿಳೆ ಮತ್ತು ಶೂದ್ರ–ದಲಿತರ ಅಹಿಂಸಾ ರೂಪದ, ಹಾಗೆಯೇ ಆಕಳ ಸ್ವಭಾವದ ಸತ್ಯ, ಪ್ರಾಮಾಣಿಕತೆಯ ಗುಣಗಳು ಪಕೃತಿಯಷ್ಟೇ ಸಹಜವಾಗಿ, ಬ್ರಿಟೀಷರ ವಿರುದ್ಧದ ಚಳುವಳಿಗೆ ಶಕ್ತಿ ತುಂಬಿರುವುದು ವಾಸ್ತವ. ಸತ್ಯ, ಅಹಿಂಸೆ, ಸತ್ಯಾಗ್ರಹಗಳಿಂದ ಭಾರತಕ್ಕೆ ಸ್ವಾತಂತ್ರ್ಯ ದೊರಕಿರುವುದು ನಿಜವಾದರೆ, ಅದೆಲ್ಲದರ ಹಿಂದೆ ಈ ದೇಶದ ಶೋಷಿತ ಶ್ರಮರೂಪಿ, ನಿರುಪದ್ರವರೂಪಿ ಮಹಿಳೆ ಮತ್ತು ಶೂದ್ರ–ದಲಿತ ಜನಾಂಗಗಳ, ಭಾವನಾತ್ಮಕ ಮಾನಸಿಕ ಸದೃಢತೆಯ ಸ್ವಭಾವಗಳ ಹಿಂದಿನ ಶಕ್ತಿಯೇ ಕಾರಣ. ಈ ಬಗೆಯ ಕೆಲವು ವೈರುಧ್ಯಗಳ ಕ್ರಾಂತಿಕಾರಕ ಪರಿಸರದಲ್ಲಿಯೇ ಸಂಸ್ಕೃತಿಪದ ಭಾರತೀಯ ಶ್ರೇಷ್ಟ ಜೀವನದ ಮಹೋನ್ನತ ರೂಪವಾಗಿ, ಭಾರತೀಯ ಮಣ್ಣಿನ ಮಕ್ಕಳ ಸ್ವರೂಪವನ್ನು ವಿವರಿಸಲು ಬಳಕೆಯಾದ ಪಾರಿಭಾಷಿಕ ಪದವಾಗಿ, ತನ್ನ ಸ್ವರೂಪ, ಅಸ್ತಿತ್ವ, ಮಹತ್ವಗಳನ್ನು ದಾಖಲಿಸಿಕೊಂಡು ಬೆಳಕಿಗೆ ಬರಲು ಕಾರಣವಾಯಿತು.

ಬ್ರಿಟಿಷರ ವಿರುದ್ಧ ಹೋರಾಡುವ ಸಂದರ್ಭದಲ್ಲಿ ಅತ್ಯವಶ್ಯಕ ಪರಿಕಲ್ಪನೆಯಾಗಿ ಬೆಳೆದ ಸಂಸ್ಕೃತಿ ಎಂಬ ಪದದ ವ್ಯಾಖ್ಯಾನವನ್ನು ಪ್ರಾರಂಭದಲ್ಲಿ ಜೀವನ ಮೌಲ್ಯಗಳ ನೆಲೆಯಲ್ಲಿ ಗುರುತಿಸಲಾಯಿತು. ಸುಧಾರಣಾ ಚಳುವಳಿಗಳ ಮೂಲಕ ವೈಚಾರಿಕ ಕ್ರಾಂತಿಯಾಗಿ, ಹಿಂದೂ ಧರ್ಮದಲ್ಲಿನ ದೋಷವಾದ ಸತಿ ಸಹಗಮನ ಪದ್ಧತಿಯಂತಹ ಮಾರಾಣಾಂತಿಕ ಮತ್ತು ಪೈಚಾಚಿಕವೆಂಬ ಕಾರಣದ ಪಿಡುಗನ್ನು ತಡೆಯಲು ಪ್ರಯತ್ನಿಸಲಾಯಿತು. ರಾಮ ಆದರ್ಶ ಪುರುಷ, ಸೀತೆ ಮಹಾಸತಿ ಇದು ಭಾರತ ಸಂಸ್ಕೃತಿಯೆಂಬ ಚಿಂತನೆ ಬೆಳೆಯಿತು. ರಾಮನ ವ್ಯಕ್ತಿತ್ವ ಧರ್ಮಸಂರಕ್ಷಣೆಯ ರೂಪ ಪಡೆಯಿತು. ಇದರಿಂದ ಪುರುಷರ ಜೀವನ ಪದ್ಧತಿಗಳು ಹಳೆಯ ಭೂಮಾಲಿಕ ಮತ್ತು ಪುರೋಹಿತಶಾಹಿ ವ್ಯವಸ್ಥೆಗೆ ಅಂಟಿಕೊಂಡವು. ಮಹಿಳೆಯನ್ನು ಮತ್ತು ಶೂದ್ರ–ದಲಿತರನ್ನು ಮೂಲಸ್ಥಾನಗಳಿಗೆ ತಳ್ಳಲು ನೆರವಾದವು. ಶ್ರೀರಾಮನನ್ನು ಆದರ್ಶವಾಗಿ ತೆಗೆದುಕೊಂಡರೂ ಆತ ಭಾರತದ ಪುರುಷನಾಗಿ ಅಪವಾದವಾಗಿ ಕಂಡ. ಭಾರತದ ಪಾಳೆಗಾರಿಕೆ ಸಂಸ್ಕೃತಿಯ ಭೋಗ ಸುಖಗಳಿಗೆ ಶ್ರೀರಾಮನ ಆದರ್ಶ ಅಡ್ಡಿಯಾಗಲಿಲ್ಲ. ಆದರೆ, ಸೀತೆ ಎಷ್ಟೇ ನೋವುಂಡರೂ ಗಂಡನ ಪ್ರೀತಿಗಾಗಿ ಆಕೆ ಸಹಿಷ್ಣೆ. ಹೆಣ್ಣಿಗೆ ಪುರುಷನಿಂದ ಏನೇ ಕಷ್ಟಗಳಾದರೂ ಆಕೆ ಪ್ರತಿಭಟಿಸದೇ ಸೌಮ್ಯಮೂರ್ತಿಯಾದರೇ ಆಕೆ ಮಹಾಸತಿ ಮೈತುಂಬ ಬಟ್ಟೆ ಒದ್ದು, ತನ್ನ ಗಂಡ ವ್ಯಭಿಚಾರಿಯಾದರೂ, ಅವನ ಜೊತೆ ಬಾಳುತ್ತ, ಪರಪುರುಷರನ್ನು ಕಣ್ಣೆತ್ತಿ ಸಹ ನೋಡದಿದ್ದರೆ, ಆಕೆ ಗರತಿ, ಗಂಡ ಸತ್ತು ತಾನು ಅತ್ತೆ ಮನೆಯಲ್ಲಿಯೇ ಉಳಿದು ಜೀವನ ಪರ್ಯಂತ ಒಂಟಿಯಾಗಿ, ಅಮಂಗಲೆಯಾಗಿ, ಭಾವಶೂನ್ಯವಾಗಿ ಬದುಕಿದರೆ, ಆಕೆ ಮನೆ ಮಗಳು. ಮನೆಯ ಮಗಳು ಸಹ ಅನ್ಯ ಜಾತಿ ಪುರಷರ ಜೊತೆ ವಿವಾಹವಾದರೆ ಅವಳು, ರಾಕ್ಷಸಿ ಮರ್ಯಾದೆಗಾಗಿ ಅವಳನ್ನು ಹತ್ಯೆ ಮಾಡಬಹುದು. ಗಂಡಿಗೆ ಈ ನಿಯಮ ಅನ್ವಯಸುವುದಿಲ್ಲ. ಅದು ಮರ್ಯಾದೆ ಹತ್ಯೆ. ಕಾನೂನು ಸಹ ಇದನ್ನು ಸರಿಯಾಗಿ ದಂಡಿಸಲಾಗಿಲ್ಲ. ಇದು ಸಂಸ್ಕೃತಿಯ ವಾಪ್ತಿಯಲ್ಲಿ ಸೇರಿಕೊಂಡಿತು.

ಗ್ರಾಮೀಣ ಮುಗ್ದ ಮನಸ್ಸುಗಳ ಭಯ–ಭಕ್ತಿ, ನಯ ನಾಜೂಕು, ಆಚಾರ–ವಿಚಾರಗಳು, ಜಾತಿ

ಸಮುದಾಯಗಳ ಶ್ರೇಣೀಕರಣ ಸಂಸ್ಕೃತಿ. ಗುರುಹಿರಿಯರಿಗೆ ಗೌರವ ಕೊಡಬೇಕು ಇದು ಕಿರಿಯರಿಗೆ ಸಭ್ಯ ಸಂಸ್ಕಾರ. ಉತ್ತಮ ನಡೆತೆಯ ಲಕ್ಷಣವೆಂದು ಸಾರಲಾಯಿತು. ರವಿಂದ್ರನಾಥ ಟ್ಯಾಗೂರ್, ಮಹಾತ್ಮ ಗಾಂಧಿ, ಡಾ.ಬಿ.ಆರ್.ಅಂಬೇಡ್ಕರ್, ರಾಮಮೋಹರ ಲೋಹಿಯ ಮೊದಲಾದ ವೈಚಾರಿಕ ಚಿಂತಕರಿಂದ ಜಾತಿ ವ್ಯವಸ್ಥೆಯ ಬಗ್ಗೆ ವೈಚಾರಿಕ ಕ್ರಾಂತಿ ಬೆಳೆದರೂ, ಅದು ಹೋಗಲಿಲ್ಲ. ಬಡತನ, ಅಶ್ಪೃಶ್ಯತೆ ನಿವಾರಣೆ ಸಾಮಾಜಿಕ ಕೀಳಿರಿಮೆಗಳನ್ನು ಹೋಗಲಾಡಿಸಲು ಮೀಸಲಾತಿ, ಮಹಿಳಾ ಶೋಷಣೆಯ ವಿಮೋಚನೆಯ ಮಸೂದೆಗಳನ್ನು ತಂದರೂ, ಅದರ ಸರಿಯಾದ ಸದ್ಬಳಕೆಯಾಗದಂತೆ ಜಾಣ ಕುರುಡುತನ, ನಟನೆಗಳ ಜೊತೆಗೆ ಹಳೆಯ ಪುರೋಹಿತಶಾಹಿ ವ್ಯವಸ್ಥೆ ಮೇಲುನೋಟಕ್ಕೆ ಸಡಿಲವಾಗಿದೆ ಎಂದು ಬಿಂಬಿಸುತ್ತಲೇ, ನವ ಪುರೋಹಿತಶಾಹಿಯ ನೆಲೆಗಳಾಗಿ ಬಲಗೊಳ್ಳುವ ಪ್ರಕ್ರಿಯೆ ಯಥಾವತ್ತಾಗಿ ನಡೆಯಿತು. ಉತ್ತಮ, ಕುಲೀನ ಜಾತಿಗಳೆಲ್ಲವೂ ಗುರುಹಿರಿಯರ ಸಾಲಿನಲ್ಲಿ ನಿಂತು, ಗೌರವಾದರಗಳಿಗೆ ಪಾತ್ರವಾದರೆ, ಕಿರಿಯರು, ಕೆಳಜಾತಿಗಳು, ಮಹಿಳೆಯರು ಆಯಾ ಜಾತಿಗಳಿಗನುಗುಣವಾಗಿ ಸ್ಥಾನಮಾನ, ಗೌರವಗಳಿಗೆ ಅರ್ಹರೆಂಬ ನೀತಿಗಳು ಮತ್ತೆ ದಟ್ಟಣೆಗೊಂಡು ಇದು ನಮ್ಮ ಸಂಸ್ಕೃತಿ, ಎಂಬ ಹೆಸರಿನಲ್ಲಿ ಸಾಂಪ್ರದಾಯಿಕ ಜಾಹೀರಾತುಗಳಲ್ಲಿ ಪ್ರಚಾರಗೊಂಡಿತು. ಆ ಮೂಲಕ ನಮ್ಮ ಸಂಸ್ಕೃತಿ ಎಂಬ ಪದವನ್ನು ಒಪ್ಪಿ ಅಥವಾ ಒಪ್ಪಲೇ ಬೇಕಾದ ಶೋಷಣೆಯ ಜೀವನಕ್ರಮದಲ್ಲಿ ಮಹಿಳೆ ಮತ್ತು ದಲಿತರನ್ನು ಭಾರತದಲ್ಲಿ ಅಡಕಗೊಳಿಸುವ ತಂತ್ರಗಳು ಬೆಳೆದವು. ಮಹಾ ಮಾನವತಾವಾದಿ ಬಸವಣ್ಣನವರು ಹೇಳಿದ ಆದರ್ಶ ಪರಿಕಲ್ಪನೆ ಪ್ರತಿಯೊಬ್ಬರನ್ನು ತನ್ನವರೆಂದು ಗುರುತಿಸುವ ಮಾನವ ಪ್ರೀತಿ “ಇವ ನಮ್ಮವ, ಇವ ನಮ್ಮವನೆಂದು ಕಾಣಿರಯ್ಯ” ಎಂಬ ಹೇಳಿಕೆಯನ್ನು ಮತೀಯಗೊಳಿಸಿ, ಜಾತೀಯ ಗೊಳಿಸಿ ತಮ್ಮ ತಮ್ಮ ಜಾತಿಗಳ ಹೆಸರಲ್ಲಿ ಒಗ್ಗೂಡುವ ನಾಟಕ ದಟ್ಟವಾಗಿ ಬೆಳೆಯಿತು. ಜಾತಿ ವ್ಯವಸ್ಥೆಯ ಹಳ್ಳಿಗಳ ಜೊತೆ ನವ ನಗರ, ಪಟ್ಟಣಗಳಲ್ಲಿ ಕುಲೀನ ಜಾತಿ ಕಾಲೋನಿಗಳು ಬೆಳೆದಿವೆ.

ಹೆಣ್ಣು ಎರಡನೆಯ ಪ್ರಜೆಯಾಗಿ, ಮಕ್ಕಳ ಮುಸುಡಿ, ಮುಕಳಿಗಳನ್ನು ತೊಳೆಯುತ್ತ, ಅಡುಗೆ ಮನೆಯಲ್ಲಿದ್ದರೆ, ಅದು ನಮ್ಮ ಸಂಸ್ಕೃತಿ, ಶೂದ್ರ–ದಲಿತರು ಬಡವರಾಗಿ, ಗುಲಾಮ ಕೆಲಸಕ್ಕಾಗಿ, ಮೀಸಲಿದ್ದರೆ, ಜಾತಿ ವ್ಯವಸ್ಥೆಯನ್ನು ಒಪ್ಪಿಕೊಂಡು, ಸ್ವಾಭಿಮಾನ ಕಳೆದರೂ ನಾಯಿ, ಬೆಕ್ಕುಗಳಂತೆ ಬದುಕಿದರೆ, ಅದು ನಮ್ಮ ಸಂಸ್ಕೃತಿ, ಶೋಷಣೆಯ ವಿರುದ್ಧ ಮಾತನಾಡಿದರೆ, ಅಥವಾ ತಾವೂ ಉತ್ತಮ ಆರ್ಥಿಕ ಬದುಕನ್ನು ಕಟ್ಟಿಕೊಳ್ಳಲು ಪ್ರಯತ್ನಿಸಿದರೆ, ಅಸಹಿಷ್ಣತೆಯ ಬೆಂಕಿಯ ಕಾವು, ಸಂಪ್ರದಾಯ ಸಂಸ್ಕೃತಿಯ ನಾಶದ ಬೆದರಿಕೆ ಪಟ್ಟ ಮತ್ತು ದೇಶ ದ್ರೋಹದ ಹಣೆಪಟ್ಟಿ, ಅಸಂಸ್ಕೃತ, ಮೊದಲಾದ ಭಾವನಾತ್ಮಕ ದಳ್ಳುರಿ, ಮತ್ತು ದಾಳಿಗೆ ಒಳಗಾಗಬೇಕಾಗುತ್ತದೆ. ಶೀತಲ ಸಮರವೂ ಆಗುವುದುಂಟು. ಅದರಿಂದ ಸಂಸ್ಕೃತಿ ಪದದಲ್ಲಿ ಭಾರತದ ವಿವಿಧ ಸಮುದಾಯಗಳ ಏಳು–ಬೀಳುಗಳು, ಕಷ್ಟ–ನಷ್ಟಗಳು, ಶೋಷಿತ–ಶೋಷಣೆಗಳು ನಿರಂತರ ಸಂಘರ್ಷದಲ್ಲಿ ತೊಡಗಿರುವುದುಂಟು. ಹೆಣ್ಣಿನ ಬಟ್ಟೆ–ಬರೆ, ಆಚಾರ–ವಿಚಾರಗಳು, ನಡೆ–ನುಡಿಗಳ ಬಗ್ಗೆ ಸಂಸ್ಕೃತಿಯ ಹೆಸರಿನಲ್ಲಿ ಅಪಶೃತಿ ಎತ್ತುತ್ತೇವೆ. ಶೂದ್ರ–ದಲಿತ ಜಾತಿಗಳ ಪ್ರಗತಿಯ ಬಗ್ಗೆ ಅಸಹಿಷ್ಣುತೆಯನ್ನು ಪ್ರದರ್ಶಿಸುವಂತಹದು ಸಾಮಾನ್ಯವಾಗಿದೆ. ವಿಚಾರಶೀಲರಾದ ಶೂದ್ರ–ದಲಿತ ಮತ್ತು ಸ್ತ್ರೀಯರ ಚಿಂತನೆಗಳು ವೈಚಾರಿಕವಾಗಿ ಪ್ರಶ್ನಿಸಲು ಪ್ರಯತ್ನಿಸಿದಾಗ ಅದನ್ನು ಜೀರ್ಣಿಸಿಕೊಳ್ಳಲು ಪ್ರಸ್ತುತ ಸಮಾಜಕ್ಕೆ ಸಾಧ್ಯವಾಗುತ್ತಿಲ್ಲ. ಸಂಸ್ಕೃತಿಯ ಹೆಸರಿನಲ್ಲಿ ಮೌಲ್ಯಗಳನ್ನು ಏರುವುದು ಅಥವಾ ಅದನ್ನು ವಿರೋಧಿಸುವ ಸಂಘರ್ಷದ ದ್ವಂದ್ವದಲ್ಲಿ, ನಿಜವಾದ ಸಂಸ್ಕೃತಿಯ ಪದದ ಮಹತ್ವವು ಅರ್ಥವನ್ನು ಕಳೆದುಕೊಳ್ಳುವ ಅಪಾಯವೂ ಇದೆ. ಸಂಸ್ಕೃತಿ ಪದದ

ವಾಸ್ತವಿಕ ಸ್ವರೂಪ ಕಾಣಿಸದೆ ಮಸುಕಾಗುವುದು ಉಂಟು.

ಸರ್ಕಾರಗಳು ಪಾರಂಪರಿಕ ಮಾನವನ ಮನೋಕಲಾಪ್ರಕಾರಗಳನ್ನು ಗುರುತಿಸಿ ನಾಡಿನ ಹಬ್ಬ ಹರಿದಿನಗಳಲ್ಲಿ ಪ್ರದರ್ಶನಗೊಳ್ಳಲು ಉತ್ತೇಜನ ನೀಡುತ್ತಿವೆ. ಜನಪದದ ಹೆಸರಿನಲ್ಲಿ, ಗೀತೆ, ನಾಟಕ, ವಿವಿಧ ನೃತ್ಯಪ್ರಕಾರಗಳು, ಬುಡಕಟ್ಟು ಕುಲಕಸುಬುಗಳು, ಅಂದಿನ ಅಲೆಮಾರಿ ಜನರ ಹೊಟ್ಟೆಪಾಡಿನ ಕಸರತ್ತುಗಳನ್ನು ಬೆರಗುಗಣ್ಣಿನಿಂದ ನೋಡಿ ಇದು ನಮ್ಮ ಸಂಸ್ಕೃತಿ, ಇದು ನಮ್ಮ ಕಲೆ, ಇದು ನಮ್ಮ ಸಾಹಿತ್ಯ, ಭಾಷೆ, ಇದು ನಮ್ಮ ಆಟ–ಪಾಟಗಳು ಎಂದು, ಇದು ನಮ್ಮ ಸಂಸ್ಕೃತಿಯ ವೈವಿಧ್ಯವೆಂದು ಸಂಸ್ಕೃತಿ ಅಭಿವೃದ್ಧಿ ಹೆಸರಿನಲ್ಲಿ ಪ್ರತ್ಯೇಕ ಇಲಾಖೆ, ಅಧಿಕಾರಿಗಳು, ಮಂತ್ರಿಗಳನ್ನು ನೇಮಿಸಿ ಹಳೆಯ ಸಾಂಸ್ಕೃತಿಕ ವಲಯವನ್ನು ರಕ್ಷಿಸುತ್ತಿರುವಾಗ, ಬಹಳಷು ಜನರು ಸಂಸ್ಕೃತಿ ಎಂದರೆ ವೇಷಭೂಷಣ, ಬಡಬಗ್ಗರ ಕುಣಿತಗಳು, ಪ್ರಾದೇಶಿಕ ಭಾಷೆ–ಸಾಹಿತ್ಯಗಳು ಎನ್ನುವ ವಾದವೂ ಇದೆ.

ಸಂಸ್ಕೃತಿ ಕುರಿತ ಚರ್ಚೆ–ಸಮಾಜಶಾಸ್ತ್ರ, ಮಾನವಶಾಸ್ತ್ರ, ಜಾನಪದ ಮತ್ತು ಸಂಸ್ಕೃತಿ ಅಧ್ಯಯನ ಶಾಸ್ತ್ರಗಳ ವಿವರಣೆಯಂತೆ, ಸಂಸ್ಕೃತಿಯೆಂಬುದು ಮಾನವನ ಹಳೆಯ ಜೀವನ ಕ್ರಮಗಳ, ಪದ್ಧತಿಗಳ ಸ್ವರೂಪ, ಅರ್ಥಾತ್ ಆದಿಮಾನವನ ಜೀವನಕ್ಕೆ ಹತ್ತಿರವಿರುವ ಗಿರಿಜನ, ಬುಡಕಟ್ಟು, ಆದಿವಾಸಿ ಎನ್ನಿಸಿಕೊಳ್ಳುವ ಜನರ ನಡೆ–ನುಡಿ, ಆಹಾರ–ವಿಹಾರ, ವಾಸ, ನಂಬಿಕೆ, ಆಚಾರ–ವಿಚಾರ, ಸಮರಸ–ಸಂಘರ್ಷ ವಿಚಾರಗಳನ್ನು ಸಂಸ್ಕೃತಿ ಎಂದು ಅರ್ಥೈಸಲಾಗಿದೆ. ಮಾನವನ ಶಿಲಾಯುಗದಿಂದ ಕೃಷಿಯುಗದ ಹಂತದ ಜೀವನ ಕ್ರಮಗಳನ್ನು ಪ್ರಾರಂಭಿಕ ಅಥವಾ ಮೂಲ ಜೀವನ ಪದ್ಧತಿಗಳು ಎಂದು ಗುರುತಿಸಿ ಅದನ್ನು ಸಂಸ್ಕೃತಿ ಎಂಬ ಹೆಸರಿನಲ್ಲಿ ಅಧ್ಯಯನ ವಿಷಯಗಳಾಗಿ ಗುರುತಿಸಲಾಗುತ್ತಿದೆ. ಇಲ್ಲಿ ನಾಗರೀಕತೆಯಿಂದ ದೂರವಾದ ಹಳೆಯ ಮಾನವನ ಜೀವನಕ್ರಮಗಳು ಎಂದು ಅರ್ಥ ಕೊಟ್ಟು ಸಂಸ್ಕೃತಿ ಪದದ ವ್ಯಾಪ್ತಿಯನ್ನು ವಿಸ್ತರಿಸಲಾಗಿದೆ. ಈ ವಿವರಣೆಯಲ್ಲಿ ಮಾನವನ ಭೂತದ ಜೀವನಕ್ರಮಗಳನ್ನು ಗುರುತಿಸಿ ಅವುಗಳ ಸ್ವರೂಪಗಳನ್ನು ಅರ್ಥೈಸಿಕೊಳ್ಳುವ ಪ್ರಕ್ರಿಯೆಗಳು ಗಮನಾರ್ಹವಾಗಿದೆ.

ಮಾನವ ಜೀವನದ ಹಳೆಯದೆಲ್ಲವೂ ಸಂಸ್ಕೃತಿಯಾದರೆ, ಅವುಗಳ ಸ್ವರೂಪಗಳೆಲ್ಲವು ಅವನ ವಿಶೇಷತೆಗಳಾದರೆ, ಅದಕ್ಕೆ ಕಾರಣವಾದ ನೆಲೆಗಳಾವುವು? ದ್ವಂದ್ವ, ಮಂಗನಿಂದ ಮಾನವನಾದ ಎಂಬ ಡಾರ್ವಿನ್‌ನ ವಿಕಾಸ ಸಿದ್ಧಾಂತದ ಆಧಾರದಲ್ಲಿ ಸಂಸ್ಕೃತಿ ಪರಿಕಲ್ಪನೆಯನ್ನು ರೂಪಿಸಿ ಸಂಸ್ಕೃತಿ ಅಧ್ಯಯನವನ್ನು ಮಾಡುವುದಾದರೆ, ಅಥವಾ ಮಾನವನ ಭೂತದ ಭೌತಿಕ–ಅಭೌತಿಕ ನೆಲೆಗಳೆಲ್ಲವು ಸಂಸ್ಕೃತಿ ಎಂದಾದರೆ, ವರ್ತಮಾನದ ಸ್ವರೂಪವೇನು? ಅದನ್ನು ಏನೆಂದು ಕರೆಯಬೇಕಾಗುತ್ತದೆ. ಅಥವಾ ನಾಗರೀಕತೆಯಿಂದ ದೂರವಾದ ಮಾನವನ ಜೀವನಪದ್ಧತಿಗಳು ಸಂಸ್ಕೃತಿ ಎನ್ನುವ ಅರ್ಥದಲ್ಲಿ ಗುರುತಿಸಿದರೆ, ಈ ನಾಗರೀಕತೆಯ ಮೂಲ ಯಾವುದು? ಸಂಸ್ಕೃತಿ, ನಾಗರಿಕತೆಗಳನ್ನು ಹೇಗೆ ವಿವರಿಸಬೇಕಾಗುತ್ತದೆ? ಇಲ್ಲಿಯೂ ದ್ವಂದ್ವ, ಸಂಕೀರ್ಣ ಸ್ವರೂಪ ಎದುರಾಗುತ್ತದೆ. ಇದಕ್ಕೆ ಪರಿಹಾರ ರೂಪವಾಗಿ ಮತ್ತೊಂದು ವ್ಯಾಖ್ಯಾನವೂ ಇದೆ. ಅದೇನೆಂದರೆ, ತತ್ವ, ಸಿದ್ಧಾಂತ ನಿರೂಪಿತ, ವೈಚಾರಿಕ ಪ್ರಜ್ಞಾವಂತರು, ಚಿಂತಕರು ಹೇಳುವಂತೆ, “ಮಾನವನ ಜೀವನದ ಪ್ರತಿಯೊಂದು, ಭೌತಿಕ ಅಥವಾ ಅಭೌತಿಕ – ಭಾವನಾತ್ಮಕ ಕಿಯಾಚಟುವಟಿಕೆಗಳ ಮೊತ್ತ ಸಂಸ್ಕೃತಿ” (ರೂಡಿಯ ಸಾಹಿತ್ಯದ ವೈಚಾರಿಕ ನುಡಿ) ಎಂದಾಗುತ್ತದೆ. ಎಂಬ ವಿವರಣೆಯಲ್ಲಿ ಮನುಷ್ಯನ ಭೂತ, ವರ್ತಮಾನ ಮತ್ತು ಭವಿಷತ್ತಿನ ಎಲ್ಲಾ ಬಗೆಯ ಚಟುವಟಿಕೆಗಳು ಸಂಸ್ಕೃತಿಯಾಗುತ್ತದೆ. ಇದು ಮಾನವಶಾಸ್ತ್ರ, ಸಮಾಜಶಾಸ್ತ್ರಗಳ ವಿವರಣೆಗಳ ಮುಂದುವರೆದ ವ್ಯಾಖ್ಯಾನವಾದರೂ ಮನುಷ್ಯನ

ಸಮಷ್ಟಿಯ ಕಾರ್ಯಚಟವಟಿಕೆಗಳು ಎನ್ನುವಲ್ಲಿ ಸಮಗ್ರತೆ ಇದೆ. ಅಷ್ಟಲ್ಲದೆ, ನಾಗರಿಕತೆ ಮತ್ತು ಸಂಸ್ಕೃತಿಗಳ ವ್ಯತಾಸವೂ ಅಷ್ಟಾಗಿ ಕಾಣಿಸುವುದಿಲ್ಲ. ಇವೆಲ್ಲವುಗಳಿಂದ ಸಂಸ್ಕೃತಿಗೆ ಪೂರ್ಣ ವ್ಯಾಖ್ಯಾನ ದೊರೆಯಿತು ಎಂದು ಖುಷಿ ಪಡುವಂತೆಯೂ ಇಲ್ಲ. ಏಕೆಂದರೆ ಸಂಸ್ಕೃತಿ ಬಗೆಗೆ ಇದುವರೆಗೂ ಚರ್ಚಿತವಾಗಿರುವ ಎಲ್ಲವು ಸಂಸ್ಕೃತಿಯ ವಿವಿಧ ಸಂಕೀರ್ಣ ಮುಖಗಳಷ್ಟೇ. ಹಾಗಾದರೆ ಇನ್ಯಾವುದು ಸಂಸ್ಕೃತಿ. ಸಂಸ್ಕೃತಿಯನ್ನು ಹೇಗೆ ಅರ್ಥ ಮಾಡಿಕೊಳ್ಳುವುದು.

ಇಷ್ಟೆಲ್ಲಾ ವಿವರಣೆಗಳನ್ನು ಚರ್ಚಿಸಿದ ನಂತರ, ಪ್ರಾರಂಭದಲ್ಲಿ ಗುರುತಿಸಿದಂತೆ, ಪ್ರಕೃತಿ, ವಿಕೃತಿ ಮತ್ತು ಸಂಸ್ಕೃತಿ ಪದಗಳನ್ನು ಮತ್ತೊಮ್ಮೆ ಪರಾಮರ್ಶಿಸಿದಾಗ ಸಂಸ್ಕೃತಿಯ ಹೊಳಹು ಸಿಗಬಹುದೇನೋ? ನಿಸರ್ಗದ ಸೃಷ್ಟಿ ಪ್ರಕೃತಿ. ಪ್ರಕೃತಿ ತನ್ನನ್ನು ತಾನೇ ಸೃಷ್ಟಿಸಿಕೊಳ್ಳುತ್ತದೆ. ಸುಂದರಗೊಳಿಸಿಕೊಳ್ಳುತ್ತದೆ. ಬೆಳೆಯುತ್ತದೆ. ಕೊನೆಗೆ ಸಾಯುತ್ತದೆ. ಸಾವಿನಲ್ಲೂ ಮರುಹುಟ್ಟಿಗೆ ಸಿದ್ದತೆ ನಡೆಸಿರುತ್ತದೆ. ಅದು ಅದರ ಸ್ವಭಾವ. ಮನುಷ್ಯ, ಸೇರಿದಂತೆ ಪ್ರಾಣಿ–ಪಕ್ಷಿಗಳು, ನದಿ, ಬೆಟ್ಟ–ಗುಡ್ಡ, ಮರ–ಗಿಡಗಳು ಎಲ್ಲವುಗಳ ಸೃಷ್ಟಿ, ಪಾಲನೆ–ಪೋಷಣೆ ಮತ್ತು ಲಯವನ್ನು ಪ್ರಕೃತಿಯ ಸ್ವರೂಪದಲ್ಲಿ ಕಾಣುತ್ತೇವೆ.

ಮಾನವ ಪ್ರಕೃತಿಯನ್ನು ಅನುಕರಣೆ ಮಾಡಿ ತನಗೆ ಬೇಕಾದ ರೀತಿಯಲ್ಲಿ ಪ್ರಕೃತಿಯ ವಸ್ತು, ವಿಷಯಗಳನ್ನೇ ಬಳಸಿಕೊಂಡು ಸಂಸ್ಕೃತಿಯನ್ನು ನಿರ್ಮಿಸಿಕೊಂಡಿದ್ದಾನೆ, ಈಗಲೂ ನಿರ್ಮಿಸಿಕೊಳ್ಳುತ್ತಿದ್ದಾನೆ. ಅದು ಅವನ ಜ್ಞಾನದ ಕಲೆ. ಅದರಿಂದ ಸಂಸ್ಕೃತಿ ಸಂಪೂರ್ಣವಾಗಿ ಮಾನವ ಸೃಷ್ಟಿ. ಸಂಸ್ಕೃತಿ ಎಂದರೆ, ಸೃಷ್ಟಿಸು, ನಿರ್ಮಿಸು ಎಂದಾಗುತ್ತದೆ. ಬೆಂಗಳೂರು ವಿಶ್ವವಿದ್ಯಾಲಯದ ಮಾನವ ಸಂಪನ್ಮೂಲ ಇಲಾಖೆಯ ಪುನರ್ಮನನ ತರಗತಿಯಲ್ಲಿ (05–03–2016) ಪ್ರೊ.ಜಿ.ಕೆ.ಗೋವಿಂದರಾವ್ ಅವರು ಮಾತನಾಡುತ್ತ ಇದೇ ಹೇಳಿಕೆಯನ್ನು ನೀಡಿದರು. ಅದರಿಂದ ಸರಿಯಾಗಿ ನಿರ್ಮಿಸು, ಪರಿಶ್ರಮದಿಂದ ರಚಿಸು, ಕಟ್ಟು ಎಂಬ ಅರ್ಥಗಳಲ್ಲಿ ಸಂಸ್ಕೃತಿಯ ಸ್ವರೂಪ ಕಾಣಿಸಿಕೊಳ್ಳುತ್ತದೆ. ಇಲ್ಲಿ ಮಾನವ ಜೀವನವನ್ನು ಪರಿಶ್ರಮದಿಂದ, ಕಲಾತ್ಮಕವಾಗಿ ನಿರ್ಮಿಸುವ ಕೌಶಲ್ಯವೇ ಸಂಸ್ಕೃತಿ. ಸಂಸ್ಕೃತಿ ನಿರ್ಮಾಣದಲ್ಲಿ ಮಾನವನಿಗೆ ಸಹಾಯಕವಾಗಿರುವ ಅಂಶಗಳೆಂದರೆ, ಅವನ ಜೈವಿಕ ಶಕ್ತಿಯಿಂದ ಚಿಗುರೊಡೆದ ಭಾಷೆ. ಇದು ಅವನ ಯಾದೃಚ್ಛಿಕ ರಚನೆ. ಅವನ ಶ್ರಮದ ಪ್ರತಿಫಲ. ಇದರಿಂದಲೇ ಅವನು ತನ್ನ ಸಮುದಾಯದ ಜೊತೆ ವ್ಯವಹರಿಸಲು ಸಾಧ್ಯವಾಗಿದೆ. ಅವನ ಪರಂಪರೆಯ ಅನುಭವ ಜ್ಞಾನವನ್ನು ಪೀಳಿಗೆಯಿಂದ ಪೀಳಿಗೆಗೆ ಸಾಗಿಸಲು ಅನುಕೂಲವಾಗಿದೆ. ಇದಕ್ಕೆ ಕಾರಣವಾದದು ಅವನ ಗ್ರಹಣ ಶಕ್ತಿ, ಸ್ಮರಣೆ, ಸೂಕ್ಷ್ಮಬುದ್ಧಿ ಮೊದಲಾದವು. ಇದರಿಂದ ತನ್ನ ಮತ್ತು ತನ್ನ ಸಮುದಾಯಕ್ಕೆ ಬೇಕಾಗುವ ಜ್ಞಾನವನ್ನು ನಿರ್ಮಿಸಲು ಸಾಧ್ಯವಾಯಿತು. ಮಾನವನಿಗೆ ಅವನೇ, ಅವನ ಶಾರೀರಿಕ ಶಕ್ತಿಯಿಂದ ರೂಪಿಸಿಕೊಂಡ ಈ ಭಾಷೆ ಮತ್ತು ಜ್ಞಾನಗಳ ಕಾರಣವಾಗಿ ಪ್ರಾಣಿ ಸಮಾಜದಿಂದ ಅವನು ಭಿನ್ನ, ಶ್ರೇಷ್ಠ, ಮತ್ತು ಅವುಗಳ ಮೇಲೆ ಪ್ರಾಬಲ್ಯ ಸಾಧಿಸಲು ಅನುಕೂಲವಾಯಿತು. ಅಷ್ಟಲ್ಲದೆ, ತನ್ನ ಸಮಾಜದ ಸುಖಕ್ಕಾಗಿ, ತಮಗೆ ಬೇಕಾದ ವ್ಯವಸ್ಥಿತ ಸಾಮುದಾಯಿಕ ಜೀವನಕ್ಕಾಗಿ, ತನ್ನಲ್ಲಿ ಪ್ರಕೃತಿ ಸಹಜವಾಗಿ ಬಂದ ಕ್ರೂರತನವನ್ನು ನಿಗ್ರಹಿಸಿ, ಮಾನವ ವಿಶೇಷತೆಯ ಮಾನವೀಯ ಗುಣಗಳನ್ನು ಅಭಿವೃದ್ಧಿ ಪಡಿಸಿಕೊಂಡು, ಸಂಸ್ಕೃತಿ ನಿರ್ಮಾಣ ಮಾಡಲು ಭಾಷೆ ಮತ್ತು ಜ್ಞಾನಗಳನ್ನು ಸಂವಹನ ಮಾಧ್ಯಮವಾಗಿ ಬಳಸಿಕೊಂಡ.

ಸಂಸ್ಕೃತಿ ನಿರ್ಮಾಣದಲ್ಲಿ ಮಾನವ, ತನ್ನ ಅಗತ್ಯಕ್ಕೆ ಅನುಗುಣವಾಗಿ ಬೆಳೆಯಿಸಿದ ಪ್ರಮುಖ ಅಂಶಗಳಾಗಿ ಮತ್ತು ಅಧ್ಯಯನದ ದೃಷ್ಟಿಯಿಂದ ಅವುಗಳನ್ನು ನಾಲ್ಕು ಭಾಗಗಳಾಗಿ ಹೆಸರಿಸಬಹುದು.

1. ಭಾವ ಸಂಬಂಧಿ ನಿಸರ್ಗಸಹಜ ತನ್ನ ಕ್ರೂರ ಗುಣಗಳನ್ನುನಿಯಂತ್ರಿಸಿ, ಮಾನವೀಯತೆಯನ್ನು

ನಿರ್ಮಿಸುವುದು. ಪ್ರೀತಿ, ಪ್ರೇಮ, ಕರುಣೆ, ಸಹಕಾರ, ಭಾವೈಕ್ಯತೆ, ದಯೆ, ತ್ಯಾಗ, ದಾನ ಮೊದಲಾದ ಸಾತ್ವಿಕ ಸ್ವಭಾವಗಳನ್ನು ಬೆಳೆಸಿಕೊಂಡು ಅವುಗಳನ್ನು ಸಂಘ ಜೀವನಕ್ಕೆ ಅನುಕೂಲವಾಗುವಂತೆ ಬಳಸಿಕೊಳ್ಳುವುದು. ಆ ಮೂಲಕ ನ್ಯಾಯ, ನೀತಿ ಧರ್ಮ, ವಿಢಂಬನೆಗಳ ಸಾಂಘಿಕ ಜೀವನವನ್ನು ಗಟ್ಟಿಗೊಳಿಸುವುದು.

2. ಉತ್ತಮ ಕೌಟುಂಬಿಕ ಜೀವನ ಮತ್ತು ಅದಕ್ಕೆ ಸಂಬಂಧಿಸಿದಂತೆ ಭೌತಿಕ ವಸ್ತುಗಳನ್ನು ನಿರ್ಮಿಸುವುದು. ವಿಜ್ಞಾನ–ತಂತ್ರಜ್ಞಾನಗಳ ಮೂಲಕ ನಾಗರಿಕತೆಯನ್ನು ರೂಢಿಸಿಕೊಳ್ಳುವುದು. ಕಷ್ಟದ ಬದುಕಿಗೆ ಸುಲಭ ಮಾರ್ಗಗಳನ್ನು ಹುಡುಕುವ ಅನ್ವೇಷನತನಗಳು, ಆ ಮೂಲಕ ಬದುಕಿನಲ್ಲಿ ಹೊಸತನಗಳನ್ನು ಕಂಡುಕೊಳ್ಳುವ ಸಾಹಸ ಸ್ವರೂಪಗಳ ಶೋಧ ಕಾರ್ಯದ ನಿರ್ಮಾಣಗಳು
3. ಸಮಾಜದ ವ್ಯವಸ್ಥಿತ ಬಂಧವನ್ನು ಕಟ್ಟಲು, ಸಮಾನ ಸುಖದ ಬದುಕಿಗೆ ಅನುಕೂಲವಾಗಲು, ರಕ್ಷನಾತ್ಮಕವಾಗಿ ಬೆಳೆಯಲು ಅವುಗಳ ಭಾಗವಾಗಿ ಸಮಾಜ ವಿಜ್ಞಾನಗಳನ್ನು ವೈಚಾರಿಕವಾಗಿ ನಿರ್ಮಿಸುವುದು. ಇದರಲ್ಲಿ ವ್ಯವಸ್ಥಿತ ಸಮಾಜ, ರಾಜಕಾರಣ, ಆರ್ಥಿಕನೆಲೆಗಳನ್ನು ಕಟ್ಟುವ ಆಲೋಚನಾ ಕ್ರಮಗಳು ರಚನಾತ್ಮಕವಾಗಿ ಕಾಣುವಂತೆ ಮಾಡುವುದು. ಇಂತಹ ಹಲವು ಪ್ರಕ್ರಿಯೆಗಳಲ್ಲಿ ಸಾಮೂಹಿಕ ಸುಖಜೀವನಕ್ಕೆ ಬೇಕಾದ ಜೀವನ ಕೌಶಲ್ಯಗಳನ್ನು ನಿರ್ಮಿಸುವುದು ಸಂಸ್ಕೃತಿ ಎನಿಸಿಕೊಳ್ಳುತ್ತದೆ.
4. ಮನುಷ್ಯ ಸಂತೋಷವಾದಾಗ ರಾಗಾ ಭಾವನೆಗಳಲ್ಲಿ ತಲ್ಲೀನನಾಗುತ್ತಾನೆ. ಪ್ರೀತಿ, ಹರ್ಷ, ಭಯಗಳಲ್ಲಿ ಕ್ರಿಯಾತ್ಮಕವಾಗುತ್ತಾನೆ. ಬದುಕನ್ನು ಸುಂದರಗೊಳಿಸಲು ಕಲಾರೂಪಿಯಾಗುತ್ತಾನೆ. ಈ ರೀತಿ ಮಾನವ ಭಾವನೆಗಳ ಕಲಾ ಕೌಶಲ್ಯ ಭಾವ, ಪರಿಕರ, ವಸ್ತು ವಿಶ್ಲೇಷಣಗಳೇ ಕಲಾ ಸಂಸ್ಕೃತಿ. ಸಾಹಿತ್ಯ, ಸಂಗೀತ, ನೃತ್ಯ, ಅಪೂರ್ವ ವಸ್ತು ನಿರ್ಮಾಣ ಮೊದಲಾದವು ಸಂಸ್ಕೃತಿಯ ನಿರ್ಮಾಣಗಳೇ ಆಗಿವೆ.

ಆದರೆ ದುರಾದೃಷ್ಟವಶಾತ್ ಪ್ರಕೃತಿಯ ಎದುರು ವಿಕೃತಿಯು ವಿನಾಶ ರೂಪವಾಗಿ ಕಾಣಿಸಿಕೊಳ್ಳುವಂತೆ ಮಾನವ ಸಂಸ್ಕೃತಿ ನಿರ್ಮಾಣದ ಸಂದರ್ಭದಲ್ಲಿಯೂ ವಿಕೃತಿ, ವಿನಾಶದ ರೂಪದಲ್ಲಿ ಬೆಳೆದಿದೆ. ವಿವಿಧ ಸಮುದಾಯಗಳು ಮುಖಾಮುಖಿಯಾದಾಗ ಅವರ ನಡುವೆ ಸಂಘರ್ಷಗಳು, ಹೆಣ್ಣುಗಂಡುಗಳಲ್ಲಿ ತಾರತಮ್ಯ, ಶೋಷಣೆ ನೋವುಗಳ ರೂಪದಲ್ಲಿ ಮನುಷ್ಯ ನಿರ್ಮಿತ ವಿಕೃತಿ ಕಾಣಿಸಿಕೊಳ್ಳುತ್ತಾ ಬರುತ್ತಿದೆ. ಇದಕ್ಕೆ ಕಾರಣವಾದವು ವಿಭಿನ್ನ ಸಮುದಾಯಗಳ ಹಿತಾಸಕ್ತಿಗಳು. ಭಾರತದಲ್ಲಿ ಪ್ರಪಂಚದಲ್ಲಿರುವಂತೆ ಪುರುಷ ಮತ್ತು ಸ್ತ್ರೀ ಸಮುದಾಯಗಳ ಹಿತಾಸಕ್ತಿಗಳಿಂದ ಸಂಘರ್ಷಗಳು ಬೆಳೆದು ಪುರುಷ ಪ್ರಾಬಲ್ಯ ಪ್ರಧಾನತೆಯನ್ನು ಸಾಧಿಸಿದೆ. ಸ್ತ್ರೀ ಶೋಷಣೆಯ ಮೂಲಕ ವಿಕೃತಿಯನ್ನು ಬೆಳೆಸಿದೆ. ಹಾಗೆಯೇ ಭಾರತದ ವಿವಿಧ ಜನ ಸಮುದಾಯಗಳ ಮುಖಾಮುಖಿ–ಸಂಘರ್ಷಗಳ ನಡುವೆ ಸಂಕರ ಕ್ರಿಯೆಗಳು, ಸಾಮರಸ್ಯಗಳು ಸಹ ನಡೆದರೂ, ಅಖಿಲಭಾರತ ಆರ್ಯ ಅಥವಾ ಪುರೋಹಿತಶಾಹಿ–ರಾಜ್ಯಶಾಹಿ ವ್ಯವಸ್ಥೆಗಳ ಶ್ರೇಣೀಕೃತ ಚಾತುರ್ವರ್ಣಗಳ ಬೀಜ, ಅದರಿಂದ ಬೆಳೆದ ವಿವಿಧ ವಿಷ ಬೀಜಗಳ ಕಾರಣ ಜಾತಿ ವ್ಯವಸ್ಥೆ, ಇಡೀ ಭಾರತವನ್ನು ಹರಡಿಕೊಂಡಿದೆ, ರಾಜಕೀಯದ ತೆವಲಿನಲ್ಲಿ ಬಲಿಷ್ಠ ಸಮುದಾಯಗಳ ಹಿತಾಸಕ್ತಿಯ ಆರ್ಥಿಕ –ಸಾಮಾಜಿಕ ಲಾಭವೆಂಬ ಬಿಸಿತುಪ್ಪ ದಟ್ಟವಾಗಿ ಹರಡಿ, ಅಖಿಲ ಭಾರತ ವಿಭಿನ್ನ ಜನಸಮುದಾಯಗಳ ಕಾರ್ಯನಿರ್ವಹಣಾ ಶ್ರೇಣಿಗಳು ಪೈಪೋಟಿಯಾಗಿ, ಮುಖಾಮುಖಿಯಾಗಿ, ಪೂರ್ವ ಪುರೋಹಿತಶಾಹಿ ವ್ಯವಸ್ಥೆಯಲ್ಲಿ ಪುರುಸ್ಥಾಪಿತವಾಗಿ ಮೂಲ ಶ್ರಮಿಕ ವರ್ಗಗಳಾಗಿದ್ದ ಶೂದ್ರ–

ದಲಿತರಲ್ಲಿಯೂ ಶ್ರೇಣೀಕರಣವನ್ನು ತಲೆಯೆತ್ತುವಂತೆ ಮಾಡಿದೆ.

ಪ್ರಾರಂಭದ ಉತ್ಪಾದಕ ವರ್ಗದ ಉತ್ಪಾದನೆಗಳೆಲ್ಲ ರಾಜ್ಯಶಾಹಿ ವ್ಯವಸ್ಥೆಯಲ್ಲಿ ರಾಜನ ಅಧೀನವಾಗಿತ್ತು. ಜೊತೆಗೆ ಆತನ ಸಾಮಂತ ರಾಜರು ಪಾಳೇಗಾರರ ಸಂಪತ್ತಾಗಿತ್ತು. ಪುರೋಹಿತರು ರಾಜಗುರುಗಳಾಗಿ, ಮಾರ್ಗದರ್ಶಕರಾಗಿರು. ಜೊತೆಗೆ ಶ್ರಮಜೀವಿ ಸ್ತ್ರೀಯರೂ ಸಹ ಪುರೋಹಿತ, ಕ್ಷತ್ರಿಯ, ವೈಶ್ಯ ವರ್ಗಗಳ ಸುಖದ ಯಂತ್ರ, ಭೋಗ ವಸ್ತುಗಳಾಗಿ ಮಾರ್ಪಟ್ಟರು. ಇದರಿಂದ ಇಡೀ ಭಾರತ ಜನಸಮುದಾಯಗಳಲ್ಲಿ ಸಂಘರ್ಷ, ಅಸಮಾನತೆ ಶೋಷಣೆಗಳಿಗೆ ಇದು ದಾರಿಮಾಡಿಕೊಟ್ಟಿತು. ಸಂಸ್ಕೃತಿಯ ಪದ ಇಂದು ಜಾಗತಿಕ ರೂಡಿ ಪದವಾದರೂ ಭಾರತದ ಚರ್ಚೆಯಲ್ಲಿ ಇಂತಹ ಮೂಲ ಭಾರತೀಯ ಚರಿತ್ರೆಯ ತಳುಕಿನೊಂದಿಗೆ ನೆಂಟಸ್ತಿಕೆಯನ್ನು ಪಡೆದಿದೆ. 18ನೆಯ ಶತಮಾನದ ನಂತರ, ವಸಾಹತುಶಾಹಿಯ ಫಲದಿಂದ ಪ್ರಜಾಪ್ರಭುತ್ವದ ವ್ಯವಸ್ಥೆ ನಿರ್ಮಾಣವಾದರೂ ಭಾರತದಲ್ಲಿ ಮನುವಾದಿ ಪ್ರೇರಿತ ಪುರೋಹಿತಶಾಹಿ ವ್ಯವಸ್ಥೆ ನೆಟ್ಟ ವಿಷಬೀಜಗಳು ನಾಶವಾಗಲಿಲ್ಲ. 21ನೆಯ ಶತಮಾನದಲ್ಲಿಯೂ ಅದು ನವನವೋತ್ತರ ರೂಪಗಳನ್ನು ಪಡೆಯುತ್ತಿದೆ. ಜಾಗತಿಕ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಗೋಸುಂಬೆಯಂತೆ ರೂಪಾಂತರ ಹೊಂದಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳುತ್ತಿದೆ. ಪುರೋಹಿತ, ಕ್ಷತ್ರಿಯ, ವೈಶ್ಯ ಸಮುದಾಯಗಳೆಂಬ ವಿಭಿನ್ನ ನೂರಾರು ಜಾತಿಗಳು ಕ್ರಮವಾಗಿ ಬಂಡವಾಳಶಾಹಿ ರೂಪದಲ್ಲಿ ಅದೇ ಪ್ರಾಚೀನ ಭಾರತದ ವೈದಿಕ ರೂಪಗಳಾಗಿ ಗುರುತಿಸಿಕೊಂಡಿವೆ. ಪೂರ್ವ ಪುರೋಹಿತಶಾಹಿ ಬದಲಿಗೆ ಮಠಮಾನ್ಯ, ದೇಗುಲಗಳು, ರಾಜರ ಬದಲಿಗೆ ಕ್ಷತ್ರಿಯ ಬಲಿಷ್ಠ ರಾಜಕಾರಣಿಗಳು, ವೈಶ್ಯರ ರೂಪದಲ್ಲಿ ಕಾರ್ಪೋರೇಟ್ ವಲಯ, ಮಾರುಕಟ್ಟೆ ಮಾಫಿಯಾಗಳು ಭದ್ರಕೋಟೆಗಳಾಗಿ ತಲೆಯೆತ್ತಿವೆ. ಇನ್ನೂ ಶ್ರಮಿಕ; ಉತ್ಪಾದಕ, ಕಾರ್ಮಿಕರ ಹೆಸರಿನಲ್ಲಿ ಅದೇ ಶೂದ್ರ–ದಲಿತರು ನೆಲೆನಿಂತಿದ್ದಾರೆ.

ಸಾಹಿತ್ಯದಲ್ಲಿ ಸಂಸ್ಕೃತಿ ಎನ್ನುವಾಗ ಪಂಪನ 'ಮಾನವಕುಲ ಒಂದೇ' ಎಂಬ ತಾತ್ವಿಕತೆ, ಬಸವಣ್ಣನ ಸಾಮಾಜಿಕ ಸುಧಾರಣಾ ಕ್ರಾಂತಿ ಮತ್ತು ಮಾನವೀಯತೆಗಳು, ಹರಿಹರನ ಕಾರ್ಮಿಕ ವರ್ಗಗಳ ಪ್ರೀತಿ, ಅಷ್ಟೇ ಅಲ್ಲದೆ ಸಮತಾ ಸಮಾಜವನ್ನು ಕಟ್ಟುವಲ್ಲಿ ಕವಿಯ ಧೋರಣೆ ಯಾವುದು ಎಂಬುದನ್ನು ಹುಡುಕಬೇಕೇ ಹೊರತು ಸಾಹಿತ್ಯ ಕೃತಿಗಳನ್ನು ಜಾತೀಯತೆಯ ನೆಲೆಯಲ್ಲಿ, ಸ್ವ–ಹಿತಾಸಕ್ತಿಗಳಿಗೆ ಬಳಸಿಕೊಂಡು ಭಾವುಕರಾಗುವುದು ವಿವೇಕದ ಚಿಂತನೆಯಾಗುವುದಿಲ್ಲ. ಯಾವುದೇ ಕವಿ ತನ್ನ ಕಾವ್ಯದಲ್ಲಿ ಸಂಸ್ಕೃತಿಯನ್ನು ನಿರ್ಮಿಸುವ ಧೋರಣೆಯ ಜೊತೆ ವಿಕೃತಿಯನ್ನು ಹೇಳುವುದು ಸಹಜ. ಅದು ಆತನ ಮಿತಿಯೂ ಹೌದು. ಅದರಿಂದ ಅವುಗಳನ್ನು ಗುರುತಿಸುವುದು ಮುಖ್ಯ. ಅದೇ ರೀತಿ ಕಾವ್ಯದಲ್ಲಿ ಸಂಸ್ಕೃತಿ ನಿರ್ಮಿಸುವಾಗ ಹೇಗೆ ದೋಷಗಳನ್ನು ಮಾಡಿರಬಹುದೆಂಬುದನ್ನು ವೈಚಾರಿಕವಾಗಿ ವಿಮರ್ಶಿಸುವುದು, ಆ ಮೂಲಕ ಅದರ ಮಹತ್ವವನ್ನು ಚರ್ಚಿಸುವುದು ಮಹತ್ವವಾಗುತ್ತದೆ.

ಒಟ್ಟಾರೆ ಸಕಲ ಜೀವಿಗಳಿಗೆ ಲೇಸು ಬಯಸುವ ಜೀವನವನ್ನು ನಿರ್ಮಾಣಮಾಡುವುದು ಸಂಸ್ಕೃತಿ ಎನಿಸಿಕೊಳ್ಳುತ್ತದೆ. ಅದಕ್ಕೆ ವಿರುದ್ಧವಾಗಿ ಅಸಮಾನತೆ, ಶೋಷಣೆಗೆ ಅಸ್ತ್ರಗಳಾದ ವರ್ಗ, ವರ್ಣ, ಜಾತಿ ಲಿಂಗ ತಾರತಮ್ಯ, ಅತೀ ನಾಗರಿಕತೆ, ಪ್ರಕೃತಿ ವಿನಾಶ ಮೊದಲಾದವು ವಿಕೃತಿಗಳಾಗುತ್ತವೆ. ಕಾವ್ಯದಲ್ಲಾಗಲಿ, ವಾಸ್ತವದಲ್ಲಾಗಲಿ ಪ್ರಕೃತಿ ಮತ್ತು ವಿಕೃತಿಗಳ ಸಂಘರ್ಷ ಸಾಮರಸ್ಯ ಸದಾ ನಡೆಯುತ್ತಿರುತ್ತದೆ. ಇದರಲ್ಲಿ ಜೀವ ಪರವಾದದ್ದು ಸಂಸ್ಕೃತಿ ಎನಿಸಿಕೊಳ್ಳುತ್ತದೆ.

**ಪರಾಮರ್ಶನ ಗ್ರಂಥಗಳು**


- ಚಂದ್ರಬಾಬು, ವೈ. (2021). *ಜನಪದ ಕಾವಡಿ ಹಬ್ಬಗಳ ಸಾಂಸ್ಕೃತಿಕ ಅಧ್ಯಯನ.* ಅಂಜಲಿ ಪ್ರಕಾಶನ.
- ಚಂದ್ರಬಾಬು, ವೈ. (2016). *ಜನಡುಗನ್ನಡ ಕಾವ್ಯ ಸಂಚಯ.* ಅಂಜಲಿ ಪ್ರಕಾಶನ.
- *ಕುಮಾರವ್ಯಾಸ ಪ್ರಶಸ್ತಿ.* (1999). ಕನ್ನಡ ಸಾಹಿತ್ಯ ಪರಷತ್ತು.
- ಮುಗಳಿ. ರಂ.ಶ್ರೀ. (2014). *ಕನ್ನಡ ಸಾಹಿತ್ಯ ಚರಿತ್ರೆ.* ಗೀತಾ ಬುಕ್‌ಹೌಸ್
- ರಾಜಪ್ಪ ದಳವಾಯಿ. (2023). *ಕನ್ನಡ ಸಾಹಿತ್ಯಕೋಶ.* ಎಚ್‌ಬಿಟಿ ಪಬ್ಲಿಕೇಷನ್.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 114-120
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಹಸಿರು ಸಾಹಿತ್ಯದಲ್ಲಿ ಭೂಮಿತತ್ತ್ವ

**ಸುಕನ್ಯ ಟಿ. ಎಲ್**
ಕನ್ನಡ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಿರಾ, ತುಮಕೂರು ಜಿಲ್ಲೆ

**Abstract:**
*ಈ ಜೀವ ಸಂಕುಲವೇ ಅತ್ಯದ್ಭುತವಾದದ್ದು, ಪ್ರತಿಯೊಂದು ಜೀವಿಗೂ ಬದುಕುವ ಹಕ್ಕಿದೆ. ಇಂತ ಪ್ರಕೃತಿದತ್ತವಾದ ಜಗತ್ತಿನಲ್ಲಿ ನಾವು ಮತ್ತು ನಮ್ಮ ಒಡನಾಡಿಗಳಿರುವುದು. ಇದು ದೈವದತ್ತ ಕೊಡುಗೆ, ಸಕಲಜೀವರಾಶಿಗಳಿಗೂ ಜೀವ ತುಂಬುವುದೇ ಹಸಿರು. "ಹಸಿರೇ ಉಸಿರು, ಹಸಿರೇ ಹೆಸರು". ಇದು ಕಾಮನಬಿಲ್ಲಿನಲ್ಲಿರುವ ಏಳು ಬಣ್ಣಗಳಲ್ಲಿ ಒಂದು ಬಣ್ಣವಾದರೂ, ಬೇರೆ ಬಣ್ಣಗಳಿಗೆ ಹೋಲಿಸಿದರೆ ಹಸಿರು ಅತ್ಯಂತ ಪ್ರಮುಖವಾದ ಸ್ಥಾನದಲ್ಲಿ ನಿಲ್ಲುತ್ತದೆ. ಕಣ್ಣಿಗೆ ತಂಪು ನೀಡುವುದು ಹಸಿರು, ಮನಸ್ಸಿಗೆ ಶಾಂತಿ ನೀಡುವುದು ಹಸಿರು. ಶುಭ ಸೂಚಕ ಹಸಿರು, ಸಮೃದ್ಧಿ ಮತ್ತು ಸಂಪತ್ತಿನ ಸಂಕೇತ ಹಸಿರು. ಇಂತ ಹಸಿರನ್ನು ಕುರಿತು ರಚನೆಯಾಗಿರುವ ಸಾಹಿತ್ಯವೇ "ಹಸಿರು ಸಾಹಿತ್ಯ".*

**Keywords:** *ಕನ್ನಡ ಸಾಹಿತ್ಯ, ಹಸಿರು ಸಾಹಿತ್ಯ, ಭೂಮಿತತ್ತ್ವ, ಪ್ರಕೃತಿತತ್ತ್ವ.*

## ಪೀಠಿಕೆ

ನಮ್ಮ ಕನ್ನಡ ಸಾಹಿತ್ಯದಲ್ಲಿ ಸಮೃದ್ಧವಾದ ಹಸಿರು ಸಾಹಿತ್ಯವನ್ನು ಕಾಣಬಹುದು. ಪ್ರಾಚೀನ ಕನ್ನಡ ಸಾಹಿತ್ಯದಿಂದ ಇಂದಿನ ಆಧುನಿಕ ಸಾಹಿತ್ಯದವರೆಗೂ ಹಸಿರು ಸಾಹಿತ್ಯವು ಕನ್ನಡದಲ್ಲಿ ಹಚ್ಚ ಹಸುರಾಗಿ ಹಾಸು ಹೊಕ್ಕಾಗಿ ಹರಡಿಕೊಂಡು ಬೆಳೆದು ಬಂದಿದೆ. "ಹಸಿರು ಸಾಹಿತ್ಯ"ವು ಭೂಮಿ, ಮಳೆ, ಮಣ್ಣು, ಬೀಜ, ಕಸ, ಗೊಬ್ಬರ, ಕೃಷಿ, ಬೆಳೆ, ಫಸಲು ಎಲ್ಲವನ್ನೂ ಒಳಗೊಂಡಿದೆ. ಇದು ಜೀವವೈವಿಧ್ಯತೆಯಿಂದ ಕೂಡಿರುವಂತದ್ದು, ಸಹಜ ಜೀವನಯಾನವಿದ್ದಂತೆ. ನಭೋ ಮಂಡಲದಲ್ಲಿರುವ ಭೂಮಿ ಎಂಬ ಗ್ರಹದಲ್ಲಿರುವ ನಾವುಗಳು ನಮ್ಮ ಸ್ವಾರ್ಥದಿಂದಷ್ಟೇ ಯೋಚಿಸದೆ, ಸಕಲ ಜೀವಕೋಟಿಗಳ ಕುರಿತು ಯೋಚಿಸಬೇಕಾಗಿರುವುದು ನಮ್ಮ ಆದ್ಯ ಕರ್ತವ್ಯವಾಗಬೇಕು.

ಕನ್ನಡ ಸಾಹಿತ್ಯದಲ್ಲಿ "ಹಸಿರು ಸಾಹಿತ್ಯ"ದ ಅಧ್ಯಯನವು ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಭೂಮಿ, ಮಣ್ಣು, ಬೀಜ, ಬೆಳೆ, ಫಸಲು, ಪ್ರಕೃತಿ, ಪರಿಸರ ಕುರಿತಂತೆ ಹಲವಾರು ಕಥೆ, ಕಾದಂಬರಿ, ಸಣ್ಣಕಥೆಗಳು, ವೈಜ್ಞಾನಿಕ ಬರವಣಿಗೆಗಳು ಸಾಕಷ್ಟು ರಚನೆಗೊಂಡಿವೆ. ಇವೆಲ್ಲಾ ಮನುಷ್ಯ ಸಂಕುಲದ ಉಳಿವಿಗಾಗಿ ಮೂಲವಾದ ಹಸಿರನ್ನೇ ಕುರಿತು ಪ್ರತಿಪಾದಿಸುತ್ತವೆ. ಈ ಕುರಿತು ಹಲವಾರು ವೈಜ್ಞಾನಿಕ ಅಧ್ಯಯನಗಳೂ ಕೂಡ ನಡೆದಿವೆ. ಕಾಲ ಬದಲಾದಂತೆ ಹಸಿರು ಸಾಹಿತ್ಯದ ಬರವಣಿಗೆಯಲ್ಲೂ ಕೆಲವೊಂದು ಬದಲಾವಣೆಯನ್ನು ಕಾಣುತ್ತೇವೆ. ಭೂ ಹಿಡುವಳಿ ಪದ್ಧತಿ, ಗೇಣಿ ಪದ್ಧತಿ, ಉಳುವವನೇ ಭೂಒಡೆಯ ಹೀಗೆ ಹಲವಾರು ಪರಿಕಲ್ಪನೆಗಳಲ್ಲಿ ಹಸಿರು ಸಾಹಿತ್ಯವು ತನ್ನದೇ ಆದ ಸ್ಥಾನವನ್ನು

***Please cite this article as:*** ಸುಕನ್ಯ. ಟಿ.ಎಲ್. (2024). ಹಸಿರು ಸಾಹಿತ್ಯದಲ್ಲಿ ಭೂಮಿತತ್ತ್ವ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 3(3), 114–120

ಉಳಿಸಿಕೊಂಡಿದೆ. ಶ್ರೀಮಂತರ ಸ್ವತ್ತಾಗಿದ್ದರೂ ಬಡವರ ಪಾಲಿನ ಭಾಗ್ಯದಂತೆ ಕೃಷಿಭೂಮಿಯನ್ನು ಉಳುವ ರೈತರು ತಮ್ಮ ನೈತಿಕತೆಯನ್ನು ಇಂದಿಗೂ ಉಳಿಸಿಕೊಂಡಿದ್ದಾರೆ.

**ವೈಜ್ಞಾನಿಕವಾಗಿ ಭೂಮಿಯ ಪರಿಕಲ್ಪನೆ**

ಭೂಮಿಯನ್ನು ದೇವರು ಎಂದು ಪೂಜಿಸುತ್ತೇವೆ. ಸೌರಮಂಡಲದ 5ನೇ ಅತ್ಯಂತ ದೊಡ್ಡ ಗ್ರಹ ಭೂಮಿ. ಜೀವ ಸಂಕುಲವನ್ನು ಜೀವ ವೈವಿಧ್ಯತೆಯನ್ನು ಈ ಭೂ ತಾಯಿ ಜತನದಿಂದ ಸಲಹುತ್ತಿದ್ದಾಳೆ. ನೀರು, ಗಿಡ, ಮರ ಹೀಗೆ ಎಲ್ಲಾ ಜೀವ ಸಂಕುಲ ಬದುಕಬೇಕಾದರೆ ಭೂಮಿ ಅಗತ್ಯ ಮತ್ತು ಅನಿವಾರ್ಯವಾಗಿದೆ. ಈ ಭೂಮಿಯನ್ನು ಸಂರಕ್ಷಿಸುವ ಮಾತುಗಳು ಬಂದಾಗ "ಇರುವುದೊಂದೇ ಭೂಮಿ" ಎಂದು ಸಂಭೋಧಿಸುವುದು ಸಾಮಾನ್ಯ. ಭೂಮಿಯ ಕಲ್ಪನೆ, ಭೂಮಿತತ್ತ್ವದ ಕುರಿತು ಹಲವಾರು ಸಾಹಿತಿಗಳು ತಮ್ಮ ಸಾಹಿತ್ಯ ರಚನೆಯಲ್ಲಿ ಮೂಡಿಸಿರುವ ಚಿಂತನೆಗಳನ್ನು ಅಧ್ಯಯನ ಮಾಡಿ, ಈ ಸಂಶೋಧನಾ ಲೇಖನದಲ್ಲಿ ದಾಖಲಿಸುತ್ತಿದ್ದೇನೆ.

ಭೂಮಿ ಅಸ್ತಿತ್ವಕ್ಕೆ ಬಂದಂದಿನಿಂದ ಅದರ ಪರಿಸರದಲ್ಲಿ ಸತತವಾಗಿ ಸ್ಥಿತ್ಯಂತರಗಳು ಆಗುತ್ತಲೇ ಬಂದಿವೆ. ಈ 460 ಕೋಟಿ ವರ್ಷಗಳಲ್ಲಿ ಮೊದಲು ನೂರಾರು ಕೋಟಿ ವರ್ಷಗಳವರೆಗೆ ಭೂಗ್ರಹಕ್ಕೆ ಉಲ್ಕಾ ಬಂಡೆಗಳು, ಕ್ಷುದ್ರ ಗ್ರಹಗಳು ಪದೇ ಪದೇ ಅಪ್ಪಳಿಸುತ್ತಿದ್ದುದರಿಂದ ಜೀವಸೃಷ್ಟಿಯ ಅವಕಾಶವೂ ಇರಲಿಲ್ಲ. ಆ ಅವಧಿಯಲ್ಲಿ ಬಾಹ್ಯ ಕಾಯಗಳೇ ಭೂಮಿಯ ಭವಿಷ್ಯವನ್ನು ನಿರ್ಧರಿಸುವಷ್ಟು ಬಲಾಢ್ಯವಾಗಿದ್ದವು. ಆಗಿನ ಆ ಪ್ರಳಯಾಂತಕ ಹೊಡೆತಗಳನ್ನು ಸಹಿಸಿಕೊಂಡ ಪೃಥ್ವಿ ಕ್ರಮೇಣ ತನ್ನನ್ನು ತಾನೇ ಸೀಮಿತಗೊಳಿಸಿಕೊಂಡು ಜೀವಾಂಕುರಕ್ಕೆ ಅವಕಾಶ ಮಾಡಿಕೊಟ್ಟಿತು.ಕಳೆದ 460 ಕೋಟಿ ವರ್ಷಗಳಿಂದ ಭೂಲಕ್ಷಣಗಳನ್ನು ಬದಲಾಯಿಸಬಲ್ಲ ತಾಕತ್ತಿದ್ದ ಶಕ್ತಿಗಳೆಂದರೆ, ಸೂರ್ಯನ ಶಾಖ, ಉಲ್ಕೆ ಮತ್ತು ಧೂಮಕೇತುಗಳು. ಅನಂತರ ಭೂಮಿಯದೇ ಆದ ಗುರುತ್ವಾಕರ್ಷಣೆ, ಜ್ವಾಲಾಮುಖಿ, ನೀರು, ಗಾಳಿ ಆಗಿದ್ದವು. ಇವುಗಳ ಜೊತೆಗೆ ಸೀಮಿತ ಶಕ್ತಿಯ ಜೀವಿಗಳೂ ಸೇರಿ, ನೂರಾರು ಕೋಟಿ ವರ್ಷಗಳ ಸತತ ಕಾರ್ಯಾಚರಣೆಯಿಂದ ಭೂಮಿಯನ್ನು ಈಗಿನ ರೂಪಕ್ಕೆ ತಂದಿವೆ. ಮಾನವನ ಉಗಮಕ್ಕೆ ದಾರಿ ಮಾಡಿಕೊಟ್ಟಿವೆ.

ಭೂಮಿಯ ವಾತಾವರಣವೂ ಗಾಜಿನ ಮನೆಯಂತೆಯೇ ಶಾಖವನ್ನು ಹಿಡಿದಿಟ್ಟುಕೊಳ್ಳುತ್ತದೆ. ಭೂಮಿಗೆ ವಾಯುವಿನ ಕವಚ ಇರದೇ ಇದ್ದಿದ್ದರೆ ಸೂರ್ಯನಿಂದ ಬಂದ ಶಾಖವೆಲ್ಲ ಮತ್ತೆ ಬಾಹ್ಯಾಕಾಶಕ್ಕೆ ಹಾರಿ ಹೋಗುತ್ತಿತ್ತು. ವಾತಾವರಣ ಇರದೇ ಇದ್ದಿದ್ದರೆ ಭೂಮಿಯ ಸರಾಸರಿ ತಾಪಮಾನ ಈಗ ಇರುವುದಕ್ಕಿಂತ ಸುಮಾರು 33 ಡಿಗ್ರಿ ಸೆಲ್ಸಿಯಸ್‌ನಷ್ಟು ಕಡಿಮೆ ಇರುತ್ತಿತ್ತು. ಮಂಗಳಗ್ರಹದಲ್ಲಿ ಇದ್ದ ಹಾಗೆ ಭೂಮಿಯ ಮೇಲೂ ಬರೀ ಬರಡು ನೆಲವೇ ಕಾಣಬರುತ್ತಿತ್ತು. ವಾತಾವರಣದಲ್ಲಿ ಶಾಖವನ್ನು ತಕ್ಕಮಟ್ಟಿಗೆ ಹೀರಿಕೊಳ್ಳಬಲ್ಲ ಮುಖ್ಯ ಘಟಕಗಳೆಂದರೆ ಇಂಗಾಲದ ಡೈಆಕ್ಸೈಡ್, ಮೀಥೇನ್, ನೈಟ್ರೋಜನ್ ಆಕ್ಸೈಡ್‌ಗಳು, ಓಝೋನ್ ಮತ್ತು ನೀರಿನ ಆವಿ. ಇವುಗಳನ್ನು "ಶಾಕವರ್ಧಕ ಅನಿಲಗಳು" ಅಥವಾ "ಹಸುರುಮನೆ ಅನಿಲಗಳು" ಎಂತಲೂ ಹೇಳುತ್ತಾರೆ. ಭೂಮಿಯಿಂದ ಪ್ರತಿಫಲಿಸಿ ಬಂದ ಶಾಖವನ್ನು ಈ ಅನಿಲಗಳು ಅಲ್ಲೇ ಹಿಡಿದಿಡುತ್ತವೆ, ಭೂಮಿ ಬೆಚ್ಚಗಿರುತ್ತದೆ.

ಈ ಭೂಮಿ ಮಾನವನ ಪಿತ್ರಾರ್ಜಿತ ಆಸ್ತಿಯಲ್ಲ, ಇತರ ಅಸಂಖ್ಯ ಜೀವಿಗಳಂತೆ ಮಾನವ ಕೂಡ ಒಂದು ಜೀವಿ ಅಷ್ಟೆ. ಜೀವಿಗಳ ಈ ಸಂಕೀರ್ಣ ಜಾಲವನ್ನು ಮಾನವ ನೇಯ್ದುದ್ದಲ್ಲ. ಆತ ಈ ಜಾಲದ ಒಂದು ಎಳೆ ಅಷ್ಟೆ. ಈ ಜಾಲಕ್ಕೆ ಮಾನವ ಏನೇ ವಿಪತ್ತು ತಂದರೂ ಆತ ತನಗೆ ತಾನೇ ವಿಪತ್ತು ತಂದುಕೊಂಡಂತೆ. ಈ ಭೂಮಿಗೆ ದುರ್ಗತಿ ಬಂತೆಂದರೆ ಮಾನವನಿಗೂ ಅದೇ ಗತಿ ಬಂತೆಂದೇ ಅರ್ಥ. ಇಲ್ಲಿ ಎಲ್ಲವೂ ಒಂದಕ್ಕೊಂದು ತುಳುಕು

ಹಾಕಿಕೊಂಡಿವೆ. ಇನ್ನೊಂದು ದೃಷ್ಟಿಯಲ್ಲಿ ನಮಗೆಲ್ಲ ನೆಮ್ಮದಿ, ಹೆಮ್ಮೆ ಮೂಡಿಸಿದ ಕಲ್ಪನೆ ಇದು. ಇಡೀ ವಿಶ್ವದಲ್ಲೇ ಜೀವಂತ ಸೃಷ್ಟಿಯೊಂದನ್ನು ಸೃಷ್ಟಿಸಿದ ಪುಟ್ಟ, ಸುಂದರ ಭೂಮಿ. ನಮ್ಮೆಲ್ಲರ ಪ್ರೀತಿಯ ಮಾತೃಭೂಮಿ. ಹಸಿರು ನೀಲಾಂಬರ ಭೂಷಿತೆ.

ಭೂಮಿ ಒಂದು ಗಗನನೌಕೆ ಎಂಬ ಕಲ್ಪನೆ ಬಂದ ಮೇಲೆ ಈ ನೌಕೆಯಲ್ಲಿ ಎಲ್ಲೆಲ್ಲಿ ಎಂತೆಂಥ ಸ್ವಿಚ್ಚುಗಳು, ಲಿವರ್, ಗಿಯರ್, ಆಕ್ಸಿಜನ್ ಸಿಲಿಂಡರ್ ಇವೆಯೆಂಬುದು ನಮಗೆ ಗೊತ್ತಾಗಬೇಕು. ಅವನ್ನೆಲ್ಲ ಅರ್ಥ ಮಾಡಿಕೊಳ್ಳುವ ಮೊದಲೇ ಕಿತ್ತಾಡುತ್ತಿದ್ದೇವೆ, ಕಿತ್ತು ಬಿಸಾಡುತ್ತಿದ್ದೇವೆ. ನೌಕೆ ಬಿಸಿಯಾಯಿತೆಂದೋ, ಇಂಗಾಲದ ಡೈಯಾಕ್ಸೈಡ್ ಹೆಚ್ಚಿತೆಂದೋ, ಓಜೋನ್ ಕವಚ ಛಿದ್ರವಾಯಿತೆಂದೋ ಹೊಯ್ದಾಡುತ್ತಿದ್ದೇವೆ. ಮುಂದಿನ ಪೀಳಿಗೆಯವರಿಂದ ಈ ನೌಕೆಯನ್ನು ಎರವಲು ಪಡೆದದ್ದು ಎಂಬುದರ ಪರಿವೆ ಇಲ್ಲದೇ, ಮುತ್ತಜ್ಜನ ಆಸ್ತಿಯೆಂಬಂತೆ ಇಲ್ಲಿನ ಪರಿಕರಗಳನ್ನು ಧ್ವಂಸ ಮಾಡುತ್ತಿದ್ದೇವೆ. ಮುಂದಿನ ಜೀವಿಗಳಿಗೆಂದು ಈ ನಿಸರ್ಗ ನಿರ್ಮಿತ ನೌಕೆಯ ಸರಂಜಾಮುಗಳನ್ನು ರಕ್ಷಿಸುವ ಬದಲು ನಾವೇ ಮಹಾಮಹಿಮರೆಂದು ಭಾವಿಸಿ ನಮ್ಮದೇ ಚರಿತ್ರೆಯನ್ನೋ ಶಿಥಿಲವಾದ ಕೋಟೆ ಕೊತ್ತಲಗಳನ್ನೋ ಕಾಪಾಡಲು ಹೆಚ್ಚಿನ ಆಸಕ್ತಿ ವಹಿಸುತ್ತಿದ್ದೇವೆ.

ಮಾನವನ ಅಜ್ಞಾನ, ಆಸೆಬುರುಕುತನ ಹಾಗೂ ಜೀವಿಗಳ ಬಗೆಗಿನ ಅಸಡ್ಡೆಯಿಂದಾಗಿಯೇ ನಿಸರ್ಗ ಧ್ವಂಸವಾಗುತ್ತಿದೆ. ಅಜ್ಞಾನವೊಂದರಿಂದಾಗಿಯೇ ಈ ಹಿಂದೆ ಮನುಷ್ಯ ಹಾಳುಗೆಡವಿದ್ದನ್ನೆಲ್ಲ ಕ್ಷಮಿಸಿಬಿಡಬಹುದು. ಆದರೆ ಇಂದು ನಮಗೆ ನಿಸರ್ಗ ಕುರಿತು ಹೇರಳ ಮಾಹಿತಿ ಸಿಗುತ್ತಿದೆ. ಪೂರ್ವಜರಿಂದ ಪಡೆದಿದ್ದೇನು, ನಮ್ಮಿಂದಾಗುತ್ತಿರುವ ತಪ್ಪುಗಳೇನೇನು, ಮುಂದಿನವರಿಗೆ ಉಳಿಸಬೇಕಾದುದು ಏನೇನು ಎಂಬ ಪ್ರಶ್ನೆಗಳಿಗೆ ನೈತಿಕವಾದ ಉತ್ತರ ಸಿಗಬೇಕಾಗಿದೆ. ಖಂಡಿತವಾಗಿಯೂ ನಮ್ಮದು ಪರ್ವಕಾಲದ ಪೀಳಿಗೆ. ವಿಜ್ಞಾನ, ತಂತ್ರಜ್ಞಾನದಲ್ಲಿ ನಮ್ಮ ಸಾಧನೆ ಎಷ್ಟೇ ಇದ್ದರೂ ಅದಕ್ಕೆ ಸರಿಸಾಟಿಯಾಗಿ ನಮ್ಮ ವೈಫಲ್ಯಗಳೂ ಗುಡ್ಡದಷ್ಟಿವೆ. ಇತರ ಜೀವರಾಶಿಯನ್ನು ಹೊಸಕಿ ಹಾಕಿದ್ದೂ, ನಮ್ಮವರೇ ಹಸಿವಿನಿಂದ ಸಾವನ್ನಪ್ಪುತ್ತಿರುವುದೂ ಈ ವೈಫಲ್ಯಗಳ ದ್ಯೋತಕವಾಗಿವೆ. ನಮ್ಮ ಮೇಲೆ ಅಪಾರ ಹೊಣೆ ಇದೆ. ಅದನ್ನು ನಿಭಾಯಿಸುವ ಸಾಮರ್ಥ್ಯವೂ ನಮಗಿದೆ.

**ದೈವ ಸ್ವರೂಪವಾಗಿ ಭೂಮಿ**

ಭೂಮಿಯೊಡನೆ ಮಾನವ ಜನಾಂಗದ ಸಂಬಂಧ ಅನಾದಿಕಾಲದಿಂದಲೂ ಬೆಳೆದು ಬಂದಿದೆ. ಭೂಮಿಯು ಮಾನವನ ಬೆರಗಿಗೆ, ಭಯಕ್ಕೆ, ಪ್ರೀತಿಗೆ, ಗೌರವಕ್ಕೆ ಕಾರಣವಾಗಿದ್ದ ಕಾಲ ಒಂದಿತ್ತು. ನಿಸರ್ಗವನ್ನು ದೈವಿರೂಪದಲ್ಲಿ ಮುಖ್ಯವಾಗಿ ತಾಯಿಯಂತೆ ಕಂಡು ಪೂಜಿಸುವ ಆದಿಮಾನವ ಜನಾಂಗಗಳು ಪ್ರಪಂಚದಲ್ಲಿ ಹಲವೆಡೆ ಇದ್ದವು. ವೇದಕಾಲದ ಭೂಮಿಗೀತ ನಮಗೆಲ್ಲ ಪರಿಚಿತವೇ. ಆದರೆ ಬರಬರುತ್ತ ಮಾನವನು, ನಾಗರಿಕತೆಯ ವಿಕೃತರೂಪಗಳನ್ನು ಒಂದೊಂದಾಗಿ ತನ್ನದಾಗಿಸಿಕೊಳ್ಳುತ್ತ ಬಂದಂತೆ, ಪ್ರಕೃತಿಯ ಅನಂತವಾಗಿದ್ದ ಧಾರಾಳತೆಯನ್ನು ಎಗ್ಗಿಲ್ಲದೇ ಸೂರೆಗೊಳ್ಳತೊಡಗಿದ. ಮನುಷ್ಯರ ಎಣೆಯಿಲ್ಲದ ಸ್ವಾರ್ಥ ಕಂಡು ಭೂಮಿತಾಯಿ ಮರುಗಿದಳು, ನೊಂದಳು, ಬೆಂದಳು.

ಭಾರತೀಯ ಮನಸ್ಸನ್ನು ಮೊದಲಿನಿಂದಲೂ ಅತ್ಯಂತ ಆಳವಾಗಿ ಆಕರ್ಷಿಸಿರುವ, ಕಾಡಿರುವ ತತ್ವಪ್ರತೀಕವಾದ ಭೂಮಿಯ ಬಗ್ಗೆ ಮೊದಲ ಚಿಂತನೆ ಪ್ರಾರಂಭವಾದದ್ದು ಋಗ್ವೇದದಲ್ಲಿ. ಸರ್ವಭೂತ ಜಾತಗಳ ಹಿತಕ್ಕಾಗಿ ದ್ಯಾವಾ–ಪೃಥ್ವಿಗಳನ್ನು ಸೃಷ್ಟಿಸಲಾಯಿತು ಎಂಬುದು ಅಲ್ಲಿಯ ದೃಷ್ಟಿಕೋನ. ಭಾರತೀಯ ಸಂಸ್ಕೃತಿಯ ಮತ್ತು ಪುರಾಣಗಳ ನೆಲೆಗಳನ್ನು ಅರ್ಥಮಾಡಿಕೊಳ್ಳಲು ಯತ್ನಿಸಿದ್ದಾರೆ. ಖ್ಯಾತ ಭಾರತೀಯ ಶಾಸ್ತ್ರಜ್ಞ ಜಾನ್ಸೆನ್ ಮಿಲ್ಲರನ ಪ್ರಕಾರ ಈ ದ್ಯಾವಾ–ಪೃಥ್ವಿಯ ಸಂಯೋಗದಲ್ಲಿ ಭಾರತೀಯ ಮನಸ್ಸು ಕಂಡದ್ದು, ಕಂಡರಿಸಿದ್ದು, ಎಲ್ಲ ಸೃಷ್ಟಿಯ ವಿಕಾಸದ ಮೂಲ ಅಗತ್ಯತೆಯಾದ ದ್ರವ್ಯ

ಮತ್ತು ಚೈತನ್ಯದ ಮಿಲನವನ್ನು. ಭೂಮಿಯ ಬಗೆಗಿನ ಮೊದಲ ಭಾರತೀಯ ಚಿಂತನೆಯನ್ನು ಮೇಲುನೋಟಕ್ಕೆ ಅರ್ಥೈಸುವುದಾದರೆ ಅದು ಸಮೃದ್ಧತೆಗೆ, ಸೃಷ್ಟಿಗೆ ಸಂಕೇತ. ಆಕೆ ಪ್ರೀತಿಯಿಂದ, ವಾತ್ಸಲ್ಯದಿಂದ ಇಡೀ ಲೋಕವನ್ನು ಪೋಷಿಸುತ್ತಾಳೆ. ಈಕೆ ಜಗತ್ತಿಗೆ ತಾಯಿಯಾದ್ದರಿಂದ ಈ ಭೂಮಿಯ ಸಕಲ ಜೀವಿಗಳ ರಕ್ಷಣೆ ಆಕೆಯ ಮೇಲಿದೆ. ಕ್ಷಮೆ, ಸಹನೆ ಎಂಬೆರಡು ಮಹತ್ವದ ಮಾನವೀಯ ಗುಣಗಳನ್ನು ಆಕೆಯ ಹೆಸರಿಗೇ ಸೇರಿಸಲಾಗಿದೆ. ಭೂಮಿಗೆ ಕೊಲ್ಲುವ ಶಕ್ತಿಯೂ ಇದೆ ಎಂಬ ಮಾತು ಅಸ್ಪಷ್ಟವಾಗಿ ವೈದಿಕ ಸಾಹಿತ್ಯದಲ್ಲಿಯೇ ಪ್ರಕಟವಾಗುತ್ತದೆ.

ಋಕ್ಕುಗಳಲ್ಲಿ ಅಸ್ಪಷ್ಟವಾಗಿ ಕಾಣಿಸಿಕೊಂಡ ಈ ಅಂಶ ಇನ್ನುಳಿದ ಧಾರ್ಮಿಕ ಸಾಹಿತ್ಯಗಳಲ್ಲಿ ಆಳವಾದ ಚಿಂತನೆಗೊಳಗಾಗಿದೆ. ಭೂಮಿಗೆ ಇರುವ ಈ ಇನ್ನೊಂದು ವ್ಯಕ್ತಿತ್ವ ಸಾಕಷ್ಟು ಭಯಾನಕವಾಗಿಯೇ ಪ್ರಕಟವಾಗುತ್ತದೆ. ಇಲ್ಲೆಲ್ಲಾ ಆಕೆಯ ರೂಪಕ್ಕೆ, ಪ್ರೀತಿಯ ವಾತ್ಸಲ್ಯದ ಬೆಡಗು, ಸೌಂದರ್ಯ ಇಲ್ಲ. ಭಾರತೀಯ ಚಿಂತನೆಯ ಅತ್ಯಂತ ಮಹತ್ವದ ಪರಿಕಲ್ಪನೆಗಳಲ್ಲೊಂದಾದ 'ಋತ'ವೇ ಭೂಮಿಯ ಹಿಂಸೆಯ ಕಾರಣವನ್ನೂ ವಿವರಿಸುತ್ತದೆ ಎಂದಾಯಿತು. 'ಋತ'ವನ್ನು ಉಲ್ಲಂಘಿಸುವ, ಅದರ ವಿಕಾಸಕ್ಕೆ ಅಡ್ಡಿ ಮಾಡುವ ಶಕ್ತಿಗಳನ್ನು ಭೂಮಿ ನಿರ್ದಯವಾಗಿ ಕೊಲ್ಲುತ್ತದೆ. ಆದ್ದರಿಂದ ಇದು ಮೂಲತಃ ಭೂಮಿಯ ಧಾರಣತತ್ವಕ್ಕೆ ಪೋಷಿಸುವ ತತ್ವಕ್ಕೆ ಅನುಗುಣವಾಗಿಯೇ ಇದೆ. ಈ ಭೂಮಿ ತತ್ವಪ್ರತೀಕವನ್ನು ಪ್ರಾಚೀನ ನಾಗರಿಕತೆಗಳ ಬೌದ್ಧಿಕ ಸೃಷ್ಟಿ ಎಂದು ಸರಳೀಕರಿಸಲು ಸಾಧ್ಯವಿಲ್ಲ.

ಆಧುನಿಕ ಜ್ಞಾನದಲ್ಲಂತೂ ಫ್ರಾಯ್ಡ್, ಫ್ರೇಸರ್, ಯೂಂಗ್ ಮೊದಲಾದವರ ಚಿಂತನೆಗಳು ಭೂಮಿತತ್ವಕ್ಕೆ ಮತ್ತೆ ಹೊಸ ಆಯಾಮವನ್ನು ತಂದವು. ಮನುಷ್ಯನ ಬದುಕು ಮತ್ತು ಸಾಂಸ್ಕೃತಿಕ ವಿಕಾಸದ ನಡುವೆ ಈ "ಭೂಮಿ ತಾಯಿ" ವಹಿಸಿರುವ ಪಾತ್ರವನ್ನು ಅನೇಕ ಹಂತಗಳಲ್ಲಿ ವಿಶ್ಲೇಷಿಸಲಾಯಿತು. ಆದಿಭೌತಿಕ ತತ್ವಜ್ಞಾನದ ಆಧಾರದ ಮೇಲೆ ಸೃಷ್ಟಿಯಾಗಿರುವ ಅನೇಕ ತತ್ವಪ್ರತೀಕಗಳಿಗಿಂತ ಈ ಭೂಮಿ ತತ್ತ್ವ ಪ್ರತೀಕ ಭಿನ್ನ ಎಂಬ ಅಂಶವನ್ನು ಕೂಡಾ ನಾವಿಲ್ಲಿ ಗಮನಿಸಬೇಕಾಗಿದೆ. ಬಹುಪಾಲು ಆದಿಭೌತಿಕ ಪುರಾಣಗಳು ಈ ಲೋಕದ ವಾಸ್ತವವನ್ನು ಮರೆಮಾಡುವ, ತಿರುಚುವ, ಪರದೆಯನ್ನೆಳೆಯುವ ಕೆಲಸವನ್ನು ಮಾಡಿದರೆ ಭಾರತೀಯ ಪ್ರತೀಕ ಅತ್ಯಂತ ಪರಿಣಾಮಕಾರಿಯಾಗಿಯೇ ಈ ವಿಶ್ವದಲ್ಲಿ ಘರ್ಷಣೆಯನ್ನು ಸೂಚಿಸುತ್ತದೆ. ಚರಿತ್ರೆಯ ಹಿಂಸೆ ಮತ್ತು ದುಷ್ಟ ಶಕ್ತಿಯ ಸಮಸ್ಯೆಯನ್ನು ಮಂಡಿಸಿ, ಅದನ್ನು ದಾಟಿಸುವ ಶಕ್ತಿ ಇದೆ ಎಂದು ಹೇಳುವುದೇ ಭಾರತೀಯ ಭೂಮಿತತ್ತ್ವ ಪ್ರತೀಕದ ಆಶಯ. ಪ್ರಕೃತಿ ದರ್ಶನದ ಒಂದು ಭಾಗವೆಂಬಂತೆ ಈ **"ಭೂಮಿ"** ಕಂಡರೂ ಇನ್ನೂ ವಿಸ್ತಾರವಾದ ಅರ್ಥಗಳನ್ನು ಅದು ಒಳಗೊಳ್ಳುತ್ತದೆ.

**ಕುವೆಂಪು ಅವರ ಕಾವ್ಯದಲ್ಲಿ ಪ್ರಕೃತಿ ದರ್ಶನ**

ಇಪ್ಪತ್ತನೆಯ ಶತಮಾನದಲ್ಲಿ ಕರ್ನಾಟಕದ ಚರಿತ್ರೆ ಹೊಸ ಯುಗಕ್ಕೆ ಕಾಲಿಟ್ಟ ಹಾಗೆಯೇ ಕನ್ನಡ ಕಾವ್ಯ ಕೂಡಾ ಹೊಸ ದಿಕ್ಕಿಗೆ ಹರಿಯಿತು. ನಿಸರ್ಗವು ಬರೀ ತೆರೆ ಎನ್ನುವ ಭಾವನೆ ಹಿಂದೆ ಸರಿಯಿತು. ಮಾನವನ ಮನಸ್ಸು ಮತ್ತು ನಿಸರ್ಗ ಮೊದಲ ಬಾರಿಗೆ ಕನ್ನಡದಲ್ಲಿ ಮುಖಾಮುಖಿಯಾದವು. ಪ್ರಕೃತಿ ಎನ್ನುವುದು ಶುದ್ಧ ಐಂದ್ರಿಕ ಅನುಭವ ಹಾಗೂ ತಾತ್ವಿಕ ಶೋಧನೆ ಎರಡಕ್ಕೂ ಅದ್ಭುತವಾದ ಮಾಧ್ಯಮವಾಯಿತು. ಪರಿಸರದ ಕರಾಳತೆಯ ವಿರುದ್ಧ ಹತಾಶೆ, ದಣಿವು, ಸಿಟ್ಟು, ಪಲಾಯನದ ಆಸೆ ಎಲ್ಲವೂ ಬೆರೆತು ರೊಮ್ಯಾಂಟಿಕ್ ಕಾವ್ಯದ ಚೌಕಟ್ಟು ಸಿದ್ಧವಾಯಿತು. ಕನ್ನಡ ನವೋದಯದಲ್ಲಿ ಅತ್ಯಂತ ಮುಖ್ಯವಾಗಿ ಗಮನಿಸಬೇಕಾಗಿರುವ ಅಂಶವೆಂದರೆ, ಪ್ರಕೃತಿಯ ದೈವೀಕರಣ. ಪ್ರಕೃತಿಯ ಪ್ರತಿಯೊಂದು ವಿಲಾಸವೂ, ವಿದ್ಯಮಾನವೂ, ಮತ್ತಾವುದೋ ಶಕ್ತಿಯ, ದೈವೀ ಶಕ್ತಿಯ ಸಾಕ್ಷಾತ್ಕಾರದಂತೆ ಕಾಣುತ್ತದೆ. ಒಂದಲ್ಲ ಒಂದು ರೀತಿಯ ಪರಿವರ್ತನೆ ಪ್ರಕೃತಿ

ದರ್ಶನದ ಅಂತಿಮ ಹಂತ. ಕುವೆಂಪು ಅವರ 'ಆನಂದಮಯ ಈ ಜಗ ಹೃದಯ' ಕವನ ಈ ವಿಚಾರವನ್ನು ತತ್ವೀಕರಿಸಿ ಹೇಳುತ್ತದೆ.

*ಆನಂದಮಯ ಈ ಜಗ ಹೃದಯ*
*ಏತಕೆ ಭಯ? ಮಾಣೊ*
*ಸೂರ್ಯೋದಯ ಚಂದ್ರೋದಯ*
*ದೇವರ ದಯ ಕಾಣೊ*
*ಬಿಸಿಲಿದು ಬರಿ ಬಿಸಿಲಲ್ಲವೊ*
*ಸೂರ್ಯನ ಕೃಪೆ ಕಾಣೊ*
*ಸೂರ್ಯನು ಬರಿ ರವಿಯಲ್ಲವೊ*
*ಆ ಭ್ರಾಂತಿಯ ಮಾಣೊ.*
*ರವಿವದನವೆ ಶಿವಸದನವೊ*
*ಬರಿ ಕಣ್ಣದು ಮಣ್ಣೊ*
*ಶಿವನಿಲ್ಲದೆ ಸೌಂದರ್ಯವು*
*ಶಿವಮುಖದ ಕಣ್ಣೊ*

(ಆನಂದಮಯ ಈ ಜಗ ಹೃದಯ)

ಈ ಸಾಲುಗಳ ಪ್ರಾತಿನಿಧಿಕವೆಂದರೆ ನವೋದಯದ ಪ್ರಕೃತಿ ದರ್ಶನದ ಒಂದು ಮುಖವನ್ನು ಸೂತ್ರೀಕರಿಸಿ ಹೇಳುತ್ತವೆ. ಪ್ರಕೃತಿಯನ್ನು ದೈವೀಕರಿಸುವ ಈ ದೃಷ್ಟಿಕೋನ ಹತ್ತೊಂಬತ್ತನೆಯ ಶತಮಾನದ ಇಂಗ್ಲೀಷ್ ರೊಮ್ಯಾಂಟಿಕ್ ಕವಿಗಳ ದೃಷ್ಟಿಕೋನಕ್ಕೆ ಅನೇಕ ದೃಷ್ಟಿಗಳಿಂದ ಹತ್ತಿರವಾದದ್ದು ಎಂಬುದರ ಬಗ್ಗೆ ಯಾವ ಅನುಮಾನವೂ ಇಲ್ಲ. ಅಲ್ಲಿ ಕೂಡಾ ಪ್ರಕೃತಿಯ ವಿವರಗಳಲ್ಲಿ ದೈವವನ್ನು ಕಾಣುವ ಪ್ರಯತ್ನ ಮುಖ್ಯ. ಆಧುನಿಕ ಕನ್ನಡ ನವೋದಯ ಕಾವ್ಯದ ಪ್ರಕೃತಿದರ್ಶನ ರೂಪುಗೊಂಡದ್ದು ಬೇರೆ ರೀತಿಯ ಪ್ರೇರಣೆಗಳಿಂದ. ನವೋದಯ ಕಾವ್ಯದಲ್ಲಿ ಧರ್ಮ ಮತ್ತು ವಿಜ್ಞಾನಗಳ ನಡುವೆ ಘರ್ಷಣೆ ಇಲ್ಲ. ಬುದ್ಧಿ ಮತ್ತು ಭಾವಗಳ ನಡುವೆಯೂ ಘರ್ಷಣೆ ಇಲ್ಲ. ಇವೆಲ್ಲ ಅಪೂರ್ವವಾದ ಸಾಮರಸ್ಯವನ್ನು ಪ್ರಕಟಿಸುತ್ತವೆ. ನವೋದಯ ಕಾವ್ಯದ ಪ್ರಕೃತಿ ಆರಾಧನೆ, ಆಶಾವಾದ, ದುರಂತ ಪ್ರಜ್ಞೆಯ ಅಪ್ರಾಮುಖ್ಯತೆ, ಸ್ವಾತಂತ್ರ್ಯ ಮತ್ತು ಅಭಿವೃದ್ಧಿಯ ಜೊತೆ ಜೊತೆಯಲ್ಲಿಯೇ ಹೋಗುತ್ತದೆ. ಕನ್ನಡ ನವೋದಯದಲ್ಲೂ ಈ ನಿಲುವು ಅಂತರ್ಗತವಾಗಿರುವುದರಿಂದಲೇ ಅಲ್ಲಿ ಧರ್ಮ–ವಿಜ್ಞಾನಗಳ ನಡುವಣ ಘರ್ಷಣೆ ಇಲ್ಲ. ವಿಜ್ಞಾನದ ಸ್ವಾಯತ್ತತೆ, ಧರ್ಮ, ಸಂಸ್ಕೃತಿಗಳ ಕಡಿವಾಣ ಇರದ ಸ್ವಾಯತ್ತತೆ ಅತ್ಯಂತ ಅಪಾಯಕಾರಿ ಎಂದು ಇಪ್ಪತ್ತನೇ ಶತಮಾನದ ಚರಿತ್ರೆ ಸಾಕ್ಷಿ ಹೇಳುತ್ತದೆ.

**ಬೇಂದ್ರೆಯವರ ಕಾವ್ಯದಲ್ಲಿ ಭೂಮಿದರ್ಶನ**

ಬೇಂದ್ರೆಯವರ ಕಾವ್ಯಜಗತ್ತಿನ ಬೇರನ್ನು ಕಾಣಬೇಕಾದರೆ 'ಭಾವಗಿತ' ಕವನಕ್ಕೆ ಹೋಗಬೇಕು. ಈ ಬೇರಿನಿಂದ ಹೊರಟ ಸಮೃದ್ಧ ಕೊಂಬೆ ರೆಂಬೆಗಳು ಶ್ರಾವಣದ ಪದ್ಯಗಳು. ಬೇಂದ್ರೆಯವರ ಕಾವ್ಯದಲ್ಲಿ ಒಂದು ಇನ್ನೊಂದರಲ್ಲಿ ಬೆರೆತು, ಇನ್ನೆಲ್ಲೂ ಅದೇ ದರ್ಶನ, ಅದೇ ತಾತ್ವಿಕ ರೂಪಕ ಥಟಕ್ಕನೆ ಕಾಣಿಸಿಕೊಳ್ಳುವುದು ನಿಜಕ್ಕೂ ಅನುಭಾವವೇ. ಸ್ವಾತಂತ್ರ್ಯ, ಸೃಷ್ಟಿ, ಪ್ರೇಮ ಈ ಮೂರು ಪದ್ಯದ ಆಶಯಗಳು. ಸೃಷ್ಟಿ ಯಾವಾಗ ಸಾಧ್ಯ ಎಂಬ ಪ್ರಶ್ನೆಯ ಶೋಧನೆಯೇ ಕವನದ ಒಟ್ಟು ವಾತಾವರಣವನ್ನು ಸೂಚಿತವಾಗುವ ಆಶಯಗಳು ಸೂಚಿಸುವ ಉತ್ತರ ಸ್ವಾತಂತ್ರ್ಯದ ಸ್ಥಿತಿಯಲ್ಲಿ ಮಾತ್ರ ಸೃಷ್ಟಿಸಾಧ್ಯ. ಸ್ವಾತಂತ್ರ್ಯದ ಆಶಯ ಈ ಪದ್ಯದಲ್ಲಿ ಸ್ಪಷ್ಟವಾಗಿ ಹೊರ ಚಿಮ್ಮುತ್ತದೆ.

*ತಿರುಗುತ್ತಿತ್ತು ತನ್ನ ಸುತ್ತ ಮೂಕ ಭಾವಯಂತ್ರಾ*
*ಗರ್ಭಗುಡಿಯ ಗರ್ಭದಲ್ಲಿ ಪರಿನುಡಿಯುವ ಮಂತ್ರಾ*
*ಮೂಡಿ ಮೂಡಿ ಮುಳುಗಿ ಮುಳುಗಿ*
*ಮೊಳಗುವೊಲು ಸ್ವತಂತ್ರಾ*

(ಭಾವಗೀತ)

ಸೃಷ್ಟಿಶೀಲತೆಯ ಗರ್ಭದಲ್ಲಿ ಇರಲೇಬೇಕಾದ ಸ್ಥಿತಿ ಸ್ವಾತಂತ್ರ್ಯ ಅಥವಾ ಸೃಷ್ಟಿಶೀಲತೆ ಯಾರೂ ದಮನ ಮಾಡಲಾಗದ ಸ್ವಾತಂತ್ರ್ಯವನ್ನು ಮೊಳಗುತ್ತದೆ. 'ಲಹರಿ ಲಹರಿ ಕಂಪಬಳ್ಳಿ'ಯ ಸನ್ನಿವೇಶ, 'ದಾಂಗುಡಿಗಳ ಬಿಡುತಲಿತ್ತು, ಅರಳಲಿತ್ತು, ಪ್ರೇಮಾ'. ಈ

ಮುಕ್ಕೂಟದ ಐಕ್ಯತೆಯ ಸ್ಥಿತಿಯನ್ನು ನಿರ್ನಾಮ ಮಾಡಲೋ ಎಂಬಂತೆ ಪ್ರಸ್ತಾಪ ಬರುತ್ತದೆ. 'ಭಾವ–ಜೀವ' ಎಂಬ ಎರಡೂ ಅರ್ಥಗಳಲ್ಲಿ ತನ್ನ ಹುಟ್ಟಿನ, ಆಗುವಿಕೆಯ ಪ್ರಕ್ರಿಯೆಯಲ್ಲೇ ನೋವನ್ನು, ಕೇಡನ್ನು, ಅನಿವಾರ್ಯವಾಗಿ ಮುಖಾಮುಖಿಯಾಗಲೇಬೇಕಾಗುತ್ತದೆ. ಸ್ವಾತಂತ್ರ್ಯ, ಸೃಷ್ಟಿ, ಪ್ರೇಮಗಳ ಮುಕ್ಕೂಟ ನೋವನ್ನು, ಸಾವನ್ನು ಎದುರಾಗಲೇಬೇಕು ಎಂಬ ಅನುಭವವೇ ಈ ಪದ್ಯದ ತಿರುಳು. ಭೂಮಿ ತತ್ವಕ್ಕೆ ಸಂಬಂಧಿಸಿದ ಹಾಗೆ ಬೇಂದ್ರೆಯವರ ಶ್ರಾವಣ ತತ್ವದ ಚರ್ಚೆ ಬರುವುದು ಇಲ್ಲಿಯೇ. ಈ ಭೂಮಿ ರೂಪಕದೊಳಗೆ ಇನ್ನೊಂದು ರೂಪಕವಾಗಿ ಶ್ರಾವಣ ಕೆಲಸ ಮಾಡುತ್ತದೆ. ಅಂದರೆ ಭೂಮಿಯ ಮೇಲೆ ನಡೆಯುತ್ತಿರುವ ಘರ್ಷಣೆಗಳು, ಶ್ರಾವಣದಲ್ಲಿ ಪರಿವರ್ತಿತವಾಗಿ ತುಂಬು ಸಮೃದ್ಧತೆಯ, ಸಾಮರಸ್ಯದ ಸ್ಥಿತಿಯ ಸಂಕೇತವಾಗುತ್ತದೆ ಶ್ರಾವಣ. ಭೂಮಿತಾಯಿಯ ಚೊಚ್ಚಲ ಸಂಭ್ರಮದ ಕಾಲ ಅದು. ಆಗ ಆಕೆ ಹಸುರುಡುಗೆ ಉಡುವಳು, ಹೂ ಮುಡಿದುಕೊಳ್ಳುವಳು.

**ಕೆ.ಎಸ್.ನರಸಿಂಹಸ್ವಾಮಿಯವ ಕಾವ್ಯದಲ್ಲಿ ಭೂಮಿ**

ಆಧುನಿಕ ಕನ್ನಡ ಕಾವ್ಯದಲ್ಲಿ ಮಾನವತಾ ಉದಾರವಾದದ ಅತ್ಯುತ್ತಮ ಪ್ರತಿನಿಧಿ ಎಂದರೆ ಕೆ.ಎಸ್.ನರಸಿಂಹಸ್ವಾಮಿ. ಈ ಅಂಶ ಅವರ ತಾತ್ವಿಕತೆಯ ರೂಪಗಳನ್ನು ನಿರ್ಧರಿಸುವ ಜತೆಗೆ ಕಾವ್ಯಾಕೃತಿಗಳ ವಿನ್ಯಾಸವನ್ನೂ ನಿರ್ಧರಿಸಿದೆ. ಈ ತಾತ್ವಿಕತೆಯ ಮೂಲಭೂತ ಲಕ್ಷಣಗಳಾದ ತಾಳ್ಮೆ ಮತ್ತು ಪ್ರಗತಿಯ ಬಗೆಗಿನ ಶ್ರದ್ಧೆ ಸಾಮಾನ್ಯವಾಗಿ ಸೆಕ್ಯುಲರ್ ಆದ ಪರಿಭಾಷೆಯಲ್ಲಿ ವ್ಯಕ್ತವಾಗುತ್ತವೆ. ಭೂಮಿತಾಯಿ ಮೊದಲಿನಿಂದಲೂ ತನ್ನ ಜವಾಬ್ದಾರಿಯನ್ನು ನಿಷ್ಠೆಯಿಂದ ನಿರ್ವಹಿಸುತ್ತಿದ್ದಾಳೆ. ವಿಕಾಸವೆನ್ನುವುದು ಯಾರೋ ದಾನವಾಗಿ ಕೊಡುವಂತಹುದಲ್ಲ. ಅದನ್ನು ಮನುಷ್ಯನೇ ತನ್ನ ಶಕ್ತಿ ಸಾಮರ್ಥ್ಯಗಳಿಂದ ಪಡೆಯಬೇಕು. ಅದಕ್ಕೆ ತಕ್ಕ ಸಿದ್ಧತೆ, ಪರಿಣತಿ ತಯಾರಿ ಬೇಕು. ಅದನ್ನು ಕಲಿಸಿಕೊಡುವುದೇ ಭೂಮಿಯ ಜವಾಬ್ದಾರಿ. ತನ್ನ ಮಕ್ಕಳನ್ನು ಕಟುತರವಾದ ರೀತಿಯಲ್ಲಿ ಆಕೆ ತಯಾರು ಮಾಡುತ್ತಿದ್ದಾಳೆ. ಮನುಕುಲದ ಈ ಸಿದ್ಧತೆ ಉದ್ದೇಶ ಎಲ್ಲವೂ ಸುಗಮವಾಗಿರುವ ಹಾಗೇ ಕಾಣುತ್ತದೆ. ಭೂಮಿತಾಯಿಯ ಶಕ್ತಿಶಾಲೀ ವ್ಯಕ್ತಿತ್ವ ಹಬ್ಬಿ ನಿಂತಿದೆ. ಆದ್ದರಿಂದ ಮನುಕುಲದ ಇತಿಹಾಸದ ರಹಸ್ಯ ಬಿಡಿಸುವುದೆಂದರೆ ಭೂಮಿತಾಯಿಯ ವ್ಯಕ್ತಿತ್ವದ ರಹಸ್ಯವನ್ನು ಬಿಡಿಸಿದ ಹಾಗೆ. ಅಂಥ ವಿಶಾಲ ದೃಷ್ಟಿಕೋನದ ಹಿನ್ನೆಲೆಯಿಂದಲೇ ಕವನ ಪ್ರಾರಂಭವಾಗುತ್ತದೆ.

***ತಾಯ ಸೆರೆಯ ಬಿಡಿಸಿಕೊಂಡು***
***ಕಣ್ ತೆರೆಯುವ ಬದುಕಿಗೆಲ್ಲ***
***ಆದಿಶೇಷ ಹೊತ್ತ ಭೂಮಿ***
***ಆದಿಶೇಷದಂತಿದೆ.***
***ತನ್ನ ಸಾಲ ಸಲಿಸಿಕೊಂಡು***
***ಮಣ್ಣಾಗುವ ಬದುಕಿಗೆಲ್ಲ***
***ಆದಿಶೇಷ ಹೊತ್ತ ಭೂಮಿ***
***ಅಂತ್ಯ ಶೇಷದಂತಿದೆ.***

(ಭೂಮಿಗೀತ)

ಇಷ್ಟೊಂದು ವ್ಯಾಪಕ ಪ್ರೀತಿಯ ಹಿನ್ನೆಲೆಯಿಂದ ಮನುಷ್ಯ ಭೂಮಿಯ ಸಂಬಂಧ ಪ್ರಾರಂಭವಾದರೂ, ಅದು ಹಾಗೇ ಬರೀ ಪ್ರೀತಿಯ ಸಂಬಂಧವಾಗಿ ಮಾತ್ರ ಮುಂದುವರಿದಿಲ್ಲ. ಹಾಗೆ ಅದು ನಡೆದಿದ್ದರೆ ಮಾನವ ಇತಿಹಾಸ ಸುಂದರ ವಿಕಾಸದ ಕಥೆ ಮಾತ್ರವಾಗುತ್ತಿತ್ತು. ಆದರೆ ಮಾನವ ವಿಕಾಸಕ್ಕೆ ಕುರೂಪಿಯಾದ, ಉಗ್ರವಾದ, ರಕ್ತಸಿಕ್ತ ಮುಖವೂ ಇನ್ನೊಂದಿದೆ. ಮನುಷ್ಯನ ವಿಕಾಸ ಪಥವನ್ನು ಸಂಕಷ್ಟಮಯವಾಗಿ ಮಾಡಿರುವ ಅಂಶವೂ ಇದೆ.

**ಭೂಮಿಯ ಮಹತ್ವ**

ಜಗತ್ತಿನ ಎಲ್ಲ ದೇಶಗಳಲ್ಲಿ **ಏಪ್ರಿಲ್ 22ನ್ನು** "ಭೂ ದಿನ" (ಅರ್ಥ್–ಡೇ) ಎಂದು ಆಚರಿಸಲಾಗುತ್ತಿದೆ. ಅರ್ಥ್–ಡೇ ಅಂದರೆ ಭೂಮಿಯ ಬರ್ಥ್–ಡೇ. ಅಂದರೆ ಅಂದು ಭೂಮಿಯ ಹುಟ್ಟುಹಬ್ಬ. ಅಮ್ಮನ

ಹುಟ್ಟುಹಬ್ಬದ ದಿನ ಅವಳು ತುಂಬ ಸುಂದರವಾಗಿ, ನಗುನಗುತ್ತ ಓಡಾಡುವ ಹಾಗೆ ಭೂಮಾತೆಯ ಮಡಿಲಲ್ಲೂ ಈ ದಿನಗಳಲ್ಲಿ ಗಿಡಮರ ಹೂಬಳ್ಳಿ ಪಶು–ಪಕ್ಷಿಗಳಿಗೂ ಸಡಗರ–ಸಂಭ್ರಮ. ಅಮೇರಿಕಕ್ಕೆ ಮಾತ್ರ ಸೀಮಿತವಾಗಿದ್ದ ಈ ಹಬ್ಬವನ್ನು ಇಪತ್ತು ವರ್ಷಗಳ ನಂತರ ಜಾಗತಿಕ ಮಟ್ಟಕ್ಕೆ ಏರಿಸಲು ನಿರ್ಧರಿಸಿ 'ಅರ್ಥ್‌ಡೇ ನೆಡ್ ವರ್ಕ್' ಎಂಬ ಸಂಘಟನೆಯೊಂದು ಸಜ್ಜಾಯಿತು. ಉಪಗ್ರಹಗಳ ನೆರವಿನಿಂದ ಅದ್ದೂರಿಯ ಪ್ರಚಾರದೊಂದಿಗೆ 1990ರಲ್ಲಿ ಏಕಕಾಲಕ್ಕೆ 141 ದೇಶಗಳ ಯುವಜನರನ್ನು ಹುರಿದುಂಬಿಸಿ ಪರಿಸರ ರಕ್ಷಣೆಗೆ ಟೊಂಕ ಕಟ್ಟುವಂತೆ ಪ್ರೇರೇಪಣೆ ನೀಡಲಾಯಿತು. ನಾವು ಭಾರತೀಯರಿಗೆ ಭೂಮಿಯ ಪಾವಿತ್ರ್ಯದ ಕಲ್ಪನೆ ಹೊಸದೇನಲ್ಲ. ಪುರಾತನ ಕಾಲದಿಂದಲೂ ಭೂಮಿಯನ್ನು **'ಭೂಮಾತೆ'** ಎಂದು ಕರೆದು ಗೌರವ, ಆದರ ನೀಡುತ್ತ ಬಂದವರು ನಾವು. ನಮ್ಮಜನಪದರೇ ಭೂಮಿ ಕುರಿತು ಜನಪದ ಗೀತೆಯನ್ನು ರಚಿಸಿದ್ದಾರೆ. ಇದು ಎಲ್ಲರಿಗೂ ಸ್ಫೂರ್ತಿ ಮತ್ತು ಪ್ರೇರಣೆ.

***"ಬೆಳಗಾಗ ನಾನೆದ್ದು ಯಾರ್ಯಾರ ನೆನೆಯಲಿ,***
***ಎಳ್ಳು ಜೀರಿಗೆಯಾ ಬೆಳೆಯೋಳ***
***ಎಳ್ಳು ಜೀರಿಗೆ ಬೆಳವಂಥ ಭೂಮ್ತಾಯ್ನ***
***ಎದ್ದೊಂದು ಗಳಿಗೆ ನೆನೆದೇನ...".***

**ಪರಾಮರ್ಶನ ಗ್ರಂಥಗಳು**


- ನಾಗೇಶ ಹೆಗಡೆ. (2022). *ಪ್ರತಿದಿನ ಪರಿಸರ ದಿನ.* ಭೂಮಿ ಬುಕ್ಸ್
- ನಾಗೇಶ ಹೆಗಡೆ. (2022). *ಇರುವುದೊಂದೇ ಭೂಮಿ.* ಭೂಮಿ ಬುಕ್ಸ್.
- ನಾಗೇಶ ಹೆಗಡೆ. (2016). *ಭೂಮಿಯೆಂಬ ಗಗನನೌಕೆ.* ಭೂಮಿ ಬುಕ್ಸ್.
- ನಾಗೇಶ ಹೆಗಡೆ. (2016). *ಮನುಕುಲ ರಕ್ಷಣೆಗೆ ಮಹತ್ವದ ದಿನಗಳು.* ಭೂಮಿ ಬುಕ್ಸ್.
- ನರಸಿಂಹಸ್ವಾಮಿ, ಕೆ.ಎಸ್. (1974). *ಆಯ್ದ ಕವನಗಳು.* ಕಾವ್ಯಾಲಯ ಪ್ರಕಾಶಕರು.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 121-123
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಕುಸುಮಬಾಲೆ ಕಾದಂಬರಿಯಲ್ಲಿ ವೈಧವ್ಯದ ಪರಿಕಲ್ಪನೆ

**ಡಾ. ಪಾರ್ವತಿ ಕನಕಗಿರಿ**

ಉಪನ್ಯಾಸಕರು, ಕನ್ನಡ ಅಧ್ಯಯನ ವಿಭಾಗ, ಕೊಪ್ಪಳ ವಿಶ್ವವಿದ್ಯಾಲಯ, ಕೊಪ್ಪಳ.

***Abstract:***

*ಹೆಣ್ಣು ತಾಯಿಯಾಗಿ, ಪ್ರೇಯಸಿಯಾಗಿ, ಮಡದಿಯಾಗಿ, ಮಗಳಾಗಿ, ವೇಶ್ಯೆಯಾಗಿ ಹಾಗೂ ವಿಧವೆಯಾಗಿ ಹೀಗೆ ಅನೇಕ ಪಾತ್ರಗಳ ಮೂಲಕ ಪುರುಷನ ಅವಶ್ಯಕತೆಗಳನ್ನು ಶತಮಾನಗಳಿಂದಲೂ ಪೂರೈಸುತ್ತಾ ಬಂದಿದ್ದಾಳೆ. ಈ ಎಲ್ಲಾ ಪಾತ್ರಗಳಲ್ಲಿ 'ಅವಳಿಗೆ ಸ್ವತಂತ್ರ ಆಯ್ಕೆ'ಗಳಿರುವುದಿಲ್ಲ. ಅವಳು ಪುರುಷನ ಕೈಗೊಂಬೆಯಾಗಿ ಪ್ರತಿನಿತ್ಯ ಶೋಷಣೆಗೆ ಒಳಗಾಗುತ್ತಾಳೆಂಬುದು ದುರಂತಮಯ ಸಂಗತಿ. ಜೈವಿಕ ಕಾರಣಗಳಿಂದಾಗಿ ಪುರುಷ ಮತ್ತು ಮಹಿಳೆಯು ಸಮಾಜದಲ್ಲಿ ಭಿನ್ನವಾಗಿ ಜೀವನ ನಡೆಸುತ್ತಿದ್ದಾರೆ. ಕೌಟುಂಬಿಕವಾಗಿ ಹಾಗೂ ಸಾರ್ವಜನಿಕವಾಗಿ ಮಹಿಳೆಯ ಕೆಲಸಗಳು ಭಿನ್ನವಾಗಿ ಆರಂಭಗೊಳ್ಳುತ್ತವೆ. ಮಹಿಳೆ ಪುರುಷನಿಗಿಂತ ಜೈವಿಕವಾಗಿ ಭಿನ್ನವಾಗಿರುವುದರಿಂದ ಸಮಾಜದಲ್ಲಿ ಆಕೆಯನ್ನು ಕೀಳಾಗಿ ನೋಡಲಾಗುತ್ತದೆ. ಸಿಮೊನ್‌ದ ಬೊವಾರ ಅಭಿಪ್ರಾಯದಂತೆ 'ಹೆಣ್ಣಾಗಿ ಯಾರೂ ಹುಟ್ಟುವುದಿಲ್ಲ, ನಂತರ ರೂಪಿತವಾಗುತ್ತಾಳೆ' ಎಂಬ ಮಾತು ಸರ್ವಕಾಲಕ್ಕೂ ಸತ್ಯವಾಗಿದೆ. ಸಮಾಜದಲ್ಲಿ ಆರಂಭದಿಂದಲೂ ಮಹಿಳೆಯು ಪುರುಷನಷ್ಟೇ ಸಮಾನವಾಗಿ ಕೆಲಸಗಳನ್ನು ಮಾಡಿದರು ಆಕೆಯನ್ನು ಎರಡನೆ ದರ್ಜೆಯಲ್ಲಿ ನೋಡಲಾಗುತ್ತದೆ. ಕನ್ನಡ ದಲಿತ–ಬಂಡಾಯ ಕಾದಂಬರಿಗಳಲ್ಲಿ ದೇವನೂರು ಮಹಾದೇವ ಅವರ ಕುಸುಮಬಾಲೆ ಕಾದಂಬರಿಯು ಪ್ರಮುಖವಾಗಿ ಕಾಣಿಸುತ್ತದೆ. ಈ ಕಾದಂಬರಿಯಲ್ಲಿ ಬರುವ 'ವೈಧವ್ಯದ ಪರಿಕಲ್ಪನೆ'ಯನ್ನು ಈ ಲೇಖನದಲ್ಲಿ ಅನಾವರಣ ಗೊಳಿಸಲಾಗಿದೆ. ಮಹಿಳೆಯು ಸಮಾಜದಲ್ಲಿ 'ದ್ವಿತೀಯ ದರ್ಜೆಯ ಪ್ರಜೆ'ಯಾಗಿ ಸದಾ ಪುರುಷನ ಹಿತಾಸಕ್ತಿಗೆ ಅನುಗುಣವಾಗಿ ಜೀವಿಸುತ್ತಿರುವಳು. ಅವಳನ್ನು ಪುರುಷ ಪ್ರಧಾನ ವ್ಯವಸ್ಥೆಯು ತನ್ನ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುವುದರಿಂದ ಅವಳು ಸ್ಥಿರಮಾದರಿ ಪಾತ್ರಗಳಲ್ಲಿ ಚಿತ್ರಣಗೊಳ್ಳುತ್ತಾಳೆ.*

***Keywords:*** *ಕನ್ನಡ ಸಾಹಿತ್ಯ, ದಲಿತ–ಬಂಡಾಯ ಸಾಹಿತ್ಯ, ದೇವನೂರ ಮಹಾದೇವ, ಕುಸುಮಬಾಲೆ, ಮಹಿಳೆ, ವೈಧವ್ಯ.*

**ಪೀಠಿಕೆ**

ಸಮಾಜವು ಹೆಣ್ಣಿನ ದೈಹಿಕ ರಚನೆಯಿಂದಾಗಿ ಆಕೆಯ ಸ್ವಭಾವವನ್ನು ಅಳೆಯುವುದು ಲಿಂಗ ತಾರತಮ್ಯವಾಗಿದೆ. "ಪುರುಷನ ಮೆದುಳಿಗಿಂತ ಹೆಣ್ಣಿನ ಮೆದುಳಿನ ಗಾತ್ರ ಚಿಕ್ಕದೆಂದು ಫ್ರೆಂಚ್ ಮನಃಶಾಸ್ತ್ರಜ್ಞ ಪಾಲ್ ಬ್ರೋಕಾ 1861ರಲ್ಲಿ ತಿಳಿಸಿದನು. " ಪುರುಷನ ಜ್ಞಾನ, ತಿಳುವಳಿಕೆಗಿಂತ ಮಹಿಳೆಯ ಜ್ಞಾನ ತಿಳುವಳಿಕೆಯು ಕಡಿಮೆಯಿದೆ ಎಂಬ ಆಲೋಚನೆಗೆ ಪುರುಷ ಪ್ರಧಾನ ವ್ಯವಸ್ಥೆಯು ದಾರಿ ಮಾಡಿಕೊಟ್ಟಿದೆ. ಸಮಾಜದಲ್ಲಿ ಗಂಡು–ಹೆಣ್ಣು ಒಂದೇ ನಾಣ್ಯದ

***Please cite this article as:*** ಪಾರ್ವತಿ ಕನಕಗಿರಿ. (2024). ಕುಸುಮಬಾಲೆ ಕಾದಂಬರಿಯಲ್ಲಿ ವೈಧವ್ಯದ ಪರಿಕಲ್ಪನೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 121–123

ಎರಡು ಮುಖಗಳಂತೆ ಚಿತ್ರಣಗೊಂಡರೂ 'ಲಿಂಗದ' ಕಾರಣದಿಂದಾಗಿ ಮಹಿಳೆಯು ಕೆಳಸ್ತರದಲ್ಲಿ ಬಿಂಬಿತಳಾಗುತ್ತಿದ್ದಾಳೆ. "ಮಹಾ ಮೇಧಾವಿ ಅಗಸ್ಟ ಬೆಬೆಲ್ 'ಮಹಿಳೆ : ಭೂತ, ವರ್ತಮಾನ ಮತ್ತು ಭವಿಷ್ಯ' ಎಂಬ ತನ್ನ ಕೃತಿಯಲ್ಲಿ ಹೇಳಿರುವಂತೆ ಮಹಿಳೆ ಬಂಧನಕ್ಕೊಳಗಾದ ಪ್ರಪಂಚದ ಮೊದಲ ಮಾನವ ಜೀವಿ. ಪುರುಷ ಗುಲಾಮ ಅಸ್ತಿತ್ವಕ್ಕೆ ಬರುವುದಕ್ಕಿಂತ ಮುಂಚೆಯೇ ಅವಳು ಗುಲಾಮಗಿರಿಗೆ ಬಲಿಯಾಗಿದ್ದಳು"[1] ಎಂಬ ಮಾತು ಇಂದಿಗೂ ಸತ್ಯವಾಗಿದೆ. ನಿತ್ಯ ಬದುಕಿನಲ್ಲಿ ಮಹಿಳೆಯು ಗಂಡಸಿನ ಗುಲಾಮಳಾಗಿ ಜೀವಿಸುತ್ತಿದ್ದಾಳೆ. ಕೆಲವು ಸಂದರ್ಭಗಳಲ್ಲಿ ಪ್ರಜ್ಞಾಪೂರ್ವಕವಾಗಿ ಹಾಗೂ ಅಪ್ರಜ್ಞಾಪೂರ್ವಕವಾಗಿ ಮಹಿಳೆಯು ಗಂಡಸಿನ ಕಾಲಾಳಾಗಿ ದುಡಿಯುತ್ತಿದ್ದಾಳೆ. ಆದ್ದರಿಂದ ಸಮಾಜದಲ್ಲಿ ಗಂಡು–ಹೆಣ್ಣಿನ ನಡುವೆ ಸಮಾನತೆಯು ಚಿಗುರೊಡೆಯಬೇಕಾಗಿದೆ. ಗಂಡು ಹೆಣ್ಣನ್ನು ಒಂದು ಭೋಗದ ವಸ್ತುವಾಗಿ ನೋಡುವ ಬದಲು ಆಕೆಯನ್ನು ಒಂದು ಜೀವಿಯಾಗಿ ನೋಡಬೇಕಾದ ಅಗತ್ಯತೆ ಪ್ರಸ್ತುತ ದಿನಗಳಿಗೂ ಬೇಕಾಗಿದೆ. 'ಶೀಲ'ದ ಪರಿಕಲ್ಪನೆಯಲ್ಲಿ ಹೆಣ್ಣನ್ನು ಬಂಧಿಸಲಾಗುತ್ತಿದೆ. ಗಂಡಸಿಗಿಲ್ಲದ ಶೀಲ ಹೆಣ್ಣಿಗೆ ಮಾತ್ರ ಸಿಮೀತವಾಗಿದೆ. ಈ ಅಸಮಾನತೆಗಳ ನಡುವೆಯು ಮಹಿಳೆಯು ತನ್ನ ಬದುಕನ್ನು ನಿತ್ಯ ಸಾಗಿಸುತ್ತಿದ್ದಾಳೆ. ತಾಯಿ, ಹೆಂಡತಿ, ಮಗಳು ಮತ್ತು ವಿಧವೆ ಹೀಗೆ ಹಲವು ಮಾದರಿಗಳಲ್ಲಿ ಹೆಣ್ಣು ತನ್ನನ್ನು ತೆರೆದುಕೊಳ್ಳುತ್ತಾ ಪುರುಷನೊಡನೆ ಪ್ರತಿನಿತ್ಯ ಕುಟುಂಬದಲ್ಲಿ ಬದುಕುತ್ತಿರುವಳು.

ದೇವನೂರ ಮಹಾದೇವರವರ 'ಕುಸುಮಬಾಲೆ' ಕಾದಂಬರಿಯಲ್ಲಿ ಬರುವ 'ವಿಧವೆ'ಯ ಪಾತ್ರವೆಂದರೆ ಅಕ್ಕಮಹಾದೇವಮ್ಮ. ಈಕೆ ಗಂಡ ಸತ್ತ ಮೇಲೆ ತವರು ಮನೆಗೆ ಸೇರಿದವಳು. ಆರುವರ್ಷದ ನಚಿತರ ಅಪ್ಪ ಸತ್ತ ಹನ್ನೆರಡು ತಿಂಗಳಿಗೆ ಹುಟ್ಟಿದ ಯಾಡನನ್ನು ಎತ್ತಿಕೊಂಡು ಗಂಡನ ಮನೆಗೆ ಬರುತ್ತಾಳೆ. "ಉರುಬಿಸುಲಲ್ಲಿ ಬಿಳಿಸೀರ್ವ ಉಟ್ಗಂಡೂ, ಕುಂಕುಮ ಇಲ್ದ ಹಣಾಲೀ, ಬಳ ಇಲ್ದ ಕಯ್ಯಲೀ, ಕಂಕುಳದಲ್ಲಿ ಕಂದನ ತತ್ಗಂಡು ಊರ್ಗ ಬರುವಂತವಳಾದವಳು"[2] ಅಕ್ಕಮಹಾದೇವಮ್ಮ. ಇಲ್ಲಿ ವಿಧವೆ ಎಂದರೆ ಹೇಗೆ ಇರುತ್ತಾರೆಂಬ ಸ್ವರೂಪ ಕಾಣಿಸುತ್ತದೆ. ಶತಮಾನಗಳಿಂದಲೂ ಪುರುಷ ಪ್ರಧಾನ ವ್ಯವಸ್ಥೆಯು ಗಂಡ ಸತ್ತ ಹೆಂಡತಿ ಹೀಗೆ ಇರಬೇಕೆಂಬ ನಿಯಮಗಳನ್ನು ಲೋಕರೂಢಿಗೊಳಿಸಲಾಗಿದೆ. ಅಂತಹ ಲೋಕರೂಢಿಗೆ ಅಕ್ಕಮಹಾದೇವಮ್ಮ ಅನಿವಾರ್ಯವಾಗಿ ಬಲಿಯಾಗಿದ್ದು ಕಾಣಿಸುತ್ತದೆ. ಮೇಲ್ಜಾತಿಯವಳಾದ ಅಕ್ಕಮಹಾದೇವಮ್ಮ ಗಂಡ ಸತ್ತ ಮೇಲೆ ಕೆಳಜಾತಿಯ ಹಟ್ಟಿ ಜೀತಗಾರನೊಂದಿಗೆ ಸಂಬಂಧ ಬೆಳೆಸಿರುವುದರ ಸಾಕ್ಷಿಯಾಗಿ ಯಾಡನನ್ನು ಪಡೆದುಕೊಂಡಿರುತ್ತಾಳೆ. ಗಂಡ ಸತ್ತ ಮೇಲೆ ಹೆಂಡತಿಯಾದವಳು ಬಿಳಿಸೀರೆ ಉಟ್ಟು, ಕುಂಕುಮ, ಬಳೆಯಿಲ್ಲದೆ ಸತ್ತ ಗಂಡನ ಜಪದಲ್ಲಿರಬೇಕಾದ ಕಟ್ಟಳೆಯನ್ನು ಹಿಂದೂ ಧರ್ಮವೂ ಕೂಡ ರೂಢಿಸಿದೆ. ಅಂತಹ ನಿಯಮವನ್ನು ಅಕ್ಕಮಹಾದೇವಮ್ಮ ಮೀರಿದ್ದು ಕ್ರಾಂತಿಕಾರಕ ಸಂಗತಿಯಾಗಿದೆ. ಆದರೆ ವಿಧವೆಯ ವೇಷಭೂಷಣಗಳನ್ನು ಮಾತ್ರ ಅಕ್ಕಮಹಾದೇವಮ್ಮ ಮೀರದೆ ಇರುವುದನ್ನು ಇಲ್ಲಿ ಕಾಣುತ್ತೇವೆ. ಅಕ್ಕಮಹಾದೇವಮ್ಮ ಆರು ವರ್ಷದ ನಂತರ ಆಸ್ತಿಯ ಸಲುವಾಗಿ ಗಂಡನ ಮನೆಗೆ ಬರುವ ಪ್ರಜ್ಞಾವಂತೆಯಂತೆ ಚಿತ್ರಗೊಂಡಿದ್ದಾಳೆ.

ಇವಳ ಭಾವನಾದ ಬಸಪ್ಪ ಸೋಮಿಯು ಯಾರಮ್ಮ ನೀನು ಎಂದು ಪ್ರಶ್ನೆ ಮಾಡಿದಾಗ "ನಾನು ಕನ್ನೀ ಬಾವಯ್ಯನೋರೋ ನಿಮ್ಮ ಪಾದದ ಧೂಳು"[3] ಎಂದು ಅಸಹಾಯಕ ಧ್ವನಿಯಲ್ಲಿ ಉತ್ತರಿಸುವ ಅಕ್ಕಮಹಾದೇವಮ್ಮ ವಿಧವೆಯರ ಸಂಕೇತವಾಗಿ ಕಾಣಿಸುತ್ತಾಳೆ. 'ಪಾದದ ಧೂಳು' ಎನ್ನುವ ಮಾತು ಶತಮಾನದಿಂದ ಹೆಣ್ಣು ಮಕ್ಕಳನ್ನು ಪುರುಷರು ತಮ್ಮ ಕಾಲಿನ ಧೂಳಾಗಿ ಕಂಡಿರುವ ಪರಿಕಲ್ಪನೆಯನ್ನು ಪ್ರತಿನಿಧಿಸುತ್ತದೆ. ಸೊಸೆಯ ಮಾತನ್ನು ಗಮನಿಸಿದ ಬಸಪ್ಪ ಸೋಮಿಯು ಆಕೆಯನ್ನು ನಿಂದಿಸಿ ತನ್ನ ಕಣ್ಣು ಮುಂದೆ ಇರದಂತೆ

ಆದೇಶ ಹೊರಡಿಸಿದನು. ಆದರೂ ಧೈರ್ಯವಂತೆಯಾದ ಅಕ್ಕಮಹಾದೇವಮ್ಮ ತನ್ನ ತಪ್ಪಿಲ್ಲ, ಇದ್ದರೆ ಹೇಳಿ ಕೆರೆಬಾವಿ ನೋಡಿಕೊಳ್ಳುವೆನೆಂದು ಹೇಳುತ್ತಾಳೆ. ಆಗ ಬಸಪ್ಪ ಸೋಮಿ "ನಮ್ಮ ಬಾಯಿಂದ ಕೆಟ್ಟ ಮಾತುಗಳನ್ನು ನೀನು ಆಡಿಸಬಾರದಮ್ಮ. ಗಂಡ ಸತ್ತ ಹನ್ನೆರಡನೆ ತಿಂಗಳಿಗೆ ಯಾರಿಗಾದರೂ ಎಲ್ಲಾದರೂ ಈ ನರಲೋಕದ ರೂಢಾವಳಿಯಲ್ಲಿ ಮಕ್ಕಳಾಗಿರುವಂಥ ಪ್ರಸಂಗ ಏನಾರು ಇದ್ದಲ್ಲಿ ಅದನ್ನು ನಮಗೆ ತೋರಿಸಿ ನೀನು ಬರುವಂತವಳಾಗು. ಈಗ ನಡೆಯಾಚೆ"[4] ಎಂದನು. ಅಂದರೆ ಗಂಡಸತ್ತ ಹೆಣ್ಣು ಬೇರೊಂದು ಗಂಡಸಿನೊಡನೆ ಸಂಬಂಧ ಬೆಳೆಸಬಾರದು, ಬೆಳಸಿದರೆ ಆಕೆ ಹಾಗೂ ಆ ಮಗು ಗಂಡನ ಮನೆಯವರಿಗೆ ಸಂಬಂಧವಿಲ್ಲವೆಂಬ ಆಶಯ ಇಲ್ಲಿ ಕಾಣಿಸುತ್ತದೆ. ಮಾವನ ಮಾತಿಗೆ ಅಂಜದೆ ಅಕ್ಕಮಹಾದೇವಮ್ಮ ತನ್ನ ತಪ್ಪಿಲ್ಲವೆಂಬಂತೆ ವಾದವನ್ನು ಮಾಡುತ್ತಾಳೆ.

ಮಾವ ಮತ್ತು ಮೈದುನನ ನಡುವೆ ಮಾತಿಗಿಳಿದ ಅಕ್ಕಮಹಾದೇವಮ್ಮಳನ್ನು ಮೈದುನನಾದ ಸಿದ್ದೂರನು ಕಾಲಿನಿಂದ ಜಾಡ್ಸಿ ವದ್ದನು. ಅವರೇನೆ ಹಿಂಸೆ ನೀಡಿ, ಬೈದರು ಅಕ್ಕಮಹಾದೇವಮ್ಮ ಕೂಸಾದ ಯಾಡನೊಂದಿಗೆ ಅಲ್ಲಿಯೇ ಉಳಿದುಕೊಂಡಳು. ಗಂಡನ ಮನೆಯಲ್ಲಿಯೇ ಬದುಕುಬೇಕೆಂಬ ಗಟ್ಟಿ ನಿರ್ಧಾರವನು ತೆಗೆದುಕೊಂಡ ಅಕ್ಕಮಹಾದೇವಮ್ಮ ಗೋಮಾಳದಲ್ಲಿಯೇ ನೆಲೆಯೂರಿದಳು. ನಂತರ ಅಲ್ಲಿ ಒಂದು ಜೋಪಡಿಯು ಎದ್ದು ಅದು ಯಾಡ ಬೆಳೆದಂತೆ ದೊಡ್ಡ ಮನೆಯಾಯಿತು. ಕಾಲಕ್ರಮೇಣವಾಗಿ ಬಸಪ್ಪಸೋಮಿ ಹಾಗೂ ಸಿದ್ದೂರರ ಹಟ್ಟಿಯೇ ದನದ ಕೊಟ್ಟಿಗೆಯಾಯಿತು.

ಒಟ್ಟಾರೆಯಾಗಿ ಕುಸುಮಬಾಲೆ ಕಾದಂಬರಿಯನ್ನು ಗಮನಿಸಿದಾಗ ವಿಧವೆಯ ಪಾತ್ರದಲ್ಲಿ ಕಾಣಿಸುವ ಅಕ್ಕಮಹಾದೇವಮ್ಮ ವಿಧವೆಯ ಸ್ವರೂಪದಲ್ಲಿ ಕಾಣಿಸಿದರು ಕೂಡ ಆಕೆ ವ್ಯವಸ್ಥೆಯು ರೂಢಿಸಿರುವ ನಿಯಮಗಳನ್ನು ನಿರಾಕರಿಸಿ ಬದುಕುವುದು ಕಾಣಿಸುತ್ತದೆ. ಹಾಗಾಗಿಯೇ ಅಕ್ಕಮಹಾದೇವಮ್ಮ ಬದುಕನ್ನು ಪ್ರೀತಿಸುವ ಗಟ್ಟಿತನದಿಂದ ಬಾಳ್ವೆ ನಡೆಸುವ ವಿಧವೆಯಂತೆ ಚಿತ್ರಣಗೊಂಡಿದ್ದಾಳೆ. ಅಕ್ಕಮಹಾದೇವಮ್ಮ ಬದುಕಿನ ಸಲುವಾಗಿ ಹೋಟೇಲಿನ ವ್ಯಾಪಾರವನ್ನು ನಡೆಸಿ ಮಗ ಯಾಡನೊಂದಿಗೆ ಜೀವನ ರೂಪಿಸಿಕೊಂಡ ಧೈರ್ಯವಚಿತೆ ವಿಧವೆಚುಾಗಿ ಕಾಣಿಸುತ್ತಾಳೆ. ಅಕ್ಕಮಹಾದೇವಮ್ಮ ಸಾಂಪ್ರದಾಯಿಕ ವಿಧವೆಚುರ ಪಾತ್ರದಂತೆ ಪ್ರತಿನಿಧಿಗೊಳ್ಳದೆ ಸ್ವಾವಲಂಬಿಯ ಮಾದರಿಯಲ್ಲಿ ಚಿತ್ರಣಗೊಂಡಿದ್ದು ಕಾಣಿಸುತ್ತದೆ. ಪುರುಷ ಪ್ರಧಾನ ಸಮಾಜವು ಗಂಡಿಗೊಂದು, ಹೆಣ್ಣಿಗೊಂದು ಸಂಪ್ರದಾಯವನ್ನು ನಿರ್ಮಿಸಿದೆ. ಗಂಡ ಸತ್ತರೆ ಹೆಂಡತಿ ಮಾತ್ರ ವಿಧವೆಯಾಗಿ ಜೀವನ ಮಾಡಬೇಕು ಆದರೆ ಹೆಂಡತಿ ಸತ್ತ ಯಾವ ಗಂಡನಿಗೂ ಇಂತಹ ನಿಯಮಗಳು ಇಲ್ಲದೆ ಇರುವುದು ಲಿಂಗ ತಾರತಮ್ಯವಾಗಿದೆ. ಇಂತಹ ನಿಯಮಗಳು ಇರುವುದಕ್ಕೆ ಅಕ್ಕಮಹಾದೇವಮ್ಮನನ್ನು ಗಂಡನ ಮನೆಯವರು ಪ್ರಶ್ನೆ ಮಾಡಿದರು. ಇವರ ಮಿತಿಗಳನ್ನು ದಾಟಿ ಅಕ್ಕಮಹಾದೇವಮ್ಮ ಅಸಹಾಯಕಳಾಗದೆ ಸ್ವತಂತ್ರ ಬದುಕನ್ನು ಕಟ್ಟಿಕೊಳ್ಳುತ್ತಾಳೆ. ಆದ ಕಾರಣ ಸ್ಥಿರ ಮಾದರಿಯಾಗದ ಅಕ್ಕಮಹಾದೇವಮ್ಮ ಚಲನಶೀಲತೆಗೆ ಸಾಕ್ಷಿಯಾಗುವುದು ಗಮನಾರ್ಹವಾಗಿದೆ.

**ಕೊನೆಟಿಪ್ಪಣಿಗಳು**

1. ನೇಮಿ ಚಂದ್ರ (ಸಂ.). (2005). *ಮಹಿಳಾ ಲೋಕ.* ನವ ಕರ್ನಾಟಕ ಪ್ರಕಾಶನ. ಪುಟ. 31
2. ದೇವನೂರು ಮಹಾದೇವ. (2018). *ಕುಸುಮಬಾಲೆ.* ಪುಸ್ತಕ ಪ್ರಕಾಶನ. ಪುಟ. 13
3. *ಅದೇ.* ಪುಟ. 13
4. *ಅದೇ.* ಪುಟ. 15

**ಆಕರ ಗ್ರಂಥ**


- ದೇವನೂರು ಮಹಾದೇವ. (2018). *ಕುಸುಮಬಾಲೆ.* ಪುಸ್ತಕ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 124-128
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ನೆಲೆಬೆಲೆ : ಮಹಿಳಾ ಪ್ರತಿನಿಧೀಕರಣ

**ಡಾ. ಪ್ರವೀಣ ಪೋಲಿಸ ಪಾಟೀಲ**
ಉಪನ್ಯಾಸಕರು, ಕನ್ನಡ ಅಧ್ಯಯನ ವಿಭಾಗ, ಕೊಪ್ಪಳ ವಿಶ್ವವಿದ್ಯಾಲಯ, ಕೊಪ್ಪಳ.

**Abstract:**
*ಮಹಿಳೆಯು ಪುರುಷ ನಿರ್ಮಿತ ಪಾತ್ರಗಳನ್ನು ಕೌಟುಂಬಿಕ ವಲಯದಲ್ಲಿ ಶತಮಾನಗಳಿಂದಲೂ ನಿರ್ವಹಿಸುತ್ತಾ ಬಂದಿದ್ದಾಳೆ. ಗಂಡು ಮತ್ತು ಹೆಣ್ಣು ಕುಟುಂಬದ ಬುನಾದಿಯಾಗಿದ್ದರೂ ಅದರಲ್ಲಿ ಅತೀ ಹೆಚ್ಚು ಶ್ರಮಿಸುವ ಜೀವಿಯೆಂದರೆ ಅದು ಮಹಿಳೆ ಮಾತ್ರ. ಅವಳ ದೈನಂದಿನ ದುಡಿಮೆಗೆ ಯಾವುದೇ ರೀತಿಯ ಸಂಬಳವಿಲ್ಲದೆ ಒಟ್ಟು ಕುಟುಂಬದ ಏಳಿಗೆಗಾಗಿ ಪ್ರಾಮಾಣಿಕವಾಗಿ ಕಾರ್ಯನಿರ್ವಹಿಸುತ್ತಾಳೆ. ಇಷ್ಟಾದರೂ ಸಹಿತ ಮಹಿಳೆ ನಿತ್ಯ ಬದುಕಿನಲ್ಲಿ ದ್ವಿತೀಯ ದರ್ಜೆಯ ಪ್ರಜೆಯಾಗಿ ಬದುಕುತ್ತಿರುವುದು ಸಾಮಾನ್ಯ ಸಂಗತಿಯಾಗಿರುವುದನ್ನು ಕಾಣಬಹುದಾಗಿದೆ. ಅನೇಕ ಸಾಹಿತಿಗಳು ಬರೆಹಗಾರರು ಮಹಿಳೆಯರನ್ನು ಪ್ರಧಾನವಾಗಿಟ್ಟು ಅನೇಕ ಕೃತಿಗಳನ್ನು ರಚಿಸಿದ್ದಾರೆ. ಅಂತಹ ಲೇಖಕರಲ್ಲಿ ಬಿ.ಟಿ ಲಲಿತಾನಾಯಕರವರು ಕೂಡ ಒಬ್ಬರು. ಪ್ರಸ್ತುತ ಲೇಖನದಲ್ಲಿ ಅವರ ಮೊದಲ ಕಾದಂಬರಿಯಾದ 'ನೆಲೆಬೆಲೆ'ಯಲ್ಲಿ ಕಂಡುಬರುವ ಮಹಿಳಾ ಪ್ರತಿನಿಧೀಕರಣದ ಬಗ್ಗೆ ಚರ್ಚಿಸಲಾಗಿದೆ.*

**Keywords:** *ಕನ್ನಡ ಸಾಹಿತ್ಯ, ಮಹಿಳಾ ಸಾಹಿತ್ಯ, ಬಂಡಾಯ ಸಾಹಿತ್ಯ, ನೆಲೆಬೆಲೆ, ಮಹಿಳಾ ಪ್ರತಿನಿಧೀಕರಣ.*

**ಪೀಠಿಕೆ**

ಪ್ರಾರಂಭದಲ್ಲಿ ಸಾಹಿತ್ಯಕ್ಕೆ ವಸ್ತುವಾಗಿದ್ದ ಮಹಿಳೆ ನಂತರದಲ್ಲಿ ಬರವಣಿಗೆಗೆ ತೊಡಗಿಕೊಂಡಾಗ ಅವಳ ಸಾಹಿತ್ಯವನ್ನು ಕುರಿತಾಗಿ, ಮಹಿಳೆ ಕೇವಲ ಅಡುಗೆ ಮನೆಗೆ ಸೀಮಿತ ಹೀಗಾಗಿ ಆಕೆಯ ಸಾಹಿತ್ಯ ಅಡುಗೆಮನೆ ಸಾಹಿತ್ಯ ಎಂದು ವ್ಯಂಗ್ಯವಾಡಿದ್ದನ್ನು ನೋಡಿದ್ದೇವೆ. ಆದರೆ ಕಾಲಾನಂತರದಲ್ಲಿ ಮಹಿಳಾ ಸಾಹಿತ್ಯವನ್ನು ಗಂಭೀರವಾಗಿ ತೆಗೆದುಕೊಳ್ಳಬೇಕಾದ ಅನಿವಾರ್ಯತೆ ಪುರುಷ ಸಾಹಿತ್ಯ ಲೋಕಕ್ಕೆ ಒದಗಿ ಬಂದಿತು. ಕನ್ನಡ ಸಾಹಿತ್ಯದಲ್ಲಿ ಮುಖ್ಯವಾಗಿ ಚರ್ಚೆಗೊಳಪಟ್ಟ ಕಾಲಘಟ್ಟವೆಂದರೆ ಅದು ದಲಿತ–ಬಂಡಾಯ ಸಾಹಿತ್ಯವಾಗಿದೆ. ಅದರಲ್ಲಿ ಮಹಿಳೆಯು ಪುರುಷನಷ್ಟೆ ಸಮರ್ಥವಾಗಿ ಬರವಣಿಗೆಗೆ ತೊಡಗಿಕೊಂಡಿದ್ದು ಸಾಹಸದ ಕೆಲಸ.

ಇಂತವರ ಸಾಲಿನಲ್ಲಿ ಮುಖ್ಯವಾಗಿ ಬಿ.ಟಿ ಲಲಿತಾನಾಯಕರವರು ನಿಲ್ಲುತ್ತಾರೆ. 'ನೆಲೆಬೆಲೆ' ಇದು ಅವರ ಮೊದಲ ಕಾದಂಬರಿಯಾಗಿದೆ. ಕಾದಂಬರಿಯಲ್ಲಿ ಪ್ರಮುಖವಾಗಿ ಕಾಣಿಸುವ ಮಹಿಳಾ ಪಾತ್ರಗಳೆಂದರೆ ಜಯ, ರೇಖಾ, ಶಾಂತಮ್ಮ ಹಾಗೂ ಕನಕ, ತಾಯಕ್ಕ ಮತ್ತು ಸಾವಂತ್ರಿ. ಈ ಕಾದಂಬರಿಯು ನಗರ ಹಾಗೂ ಗ್ರಾಮೀಣ ಬದುಕಿನ ಚಿತ್ರಣದೊಂದಿಗೆ ಮಹಿಳಾ ಪಾತ್ರಗಳ ವಿಭಿನ್ನತೆಯನ್ನು ಅನಾವರಣಗೊಳಿಸುತ್ತದೆ. ಕಾದಂಬರಿ

***Please cite this article as:*** ಪ್ರವೀಣ ಪೋಲಿಸ ಪಾಟೀಲ. (2024). ನೆಲೆಬೆಲೆ: ಮಹಿಳಾ ಪ್ರತಿನಿಧೀಕರಣ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 124–128

ಆರಂಭವಾಗುವುದೆ ಕಾಂತಯ್ಯ ಎಂಬ ವ್ಯಕ್ತಿ ಸೈಕಲ್‌ಸವಾರಿಯಿಂದ ರಾಂಪುರಕ್ಕೆ ಬರುವ ಪ್ರಸಂಗದಿಂದ. ವಿದ್ಯಾಭ್ಯಾಸದ ಸಂದರ್ಭದಲ್ಲಿ ಸ್ನೇಹಿತರಾದ ಕಾಂತಯ್ಯ ಹಾಗೂ ಶಿವಮಲ್ಲೂ ನಂತರದಲ್ಲಿ ಸಂಬಂಧಿಕರಾಗಿ ಅವರ ಕುಟುಂಬದ ಸುತ್ತಲೂಕತೆ ವಿಸ್ತಾರಗೊಳ್ಳುತ್ತ ಹೋಗುತ್ತದೆ. ಕಾಂತಯ್ಯನ ಹೆಂಡತಿ ಕನಕವ್ವ ಗರ್ಭಿಣಿಯಾಗಿರುತ್ತಾಳೆ. ಅವಳ ಬಾಣಂತನವನ್ನು ಮಾಡಲು ಆಕೆಯ ಅನಾರೋಗ್ಯದ ತಾಯಿಗೆ ಅಸಾಧ್ಯವೆನಿಸಿದಾಗ ಅನಾಥನಾದ ಕಾಂತಯ್ಯ ಶಿವಮಲ್ಲೂವಿನ ಕುಟುಂಬದ ನೆರವಿಗಾಗಿ ಬರುತ್ತಾನೆ. ಕತೆಯು ಇಲ್ಲಿಂದ ಹೊಸ ಆಯಾಮವನ್ನು ಪಡೆದುಕೊಳ್ಳುತ್ತದೆ. ಕಾಂತಯ್ಯನ ಹೆಂಡತಿ ಬಾಣಂತನಕ್ಕೆ ಶಿವ ಮಲ್ಲೂವಿನ ಮನೆಯಲ್ಲಿ ಚರ್ಚೆ ಮಾಡಿ ನಂತರ ತಾಯಿ ತಾಯಕ್ಕನನ್ನು ಕಾಂತಯ್ಯನ ಮನೆಗೆ ಕಳಿಸುತ್ತಾರೆ. ಗ್ರಾಮೀಣ ಪ್ರದೇಶದಲ್ಲಿರುವ ತಾಯಕ್ಕಳಿಗೆ ನಗರ ಜೀವನವು ತೊಂದರೆದಾಯಕವೆನಿಸತೊಡಗಿತು. ತಾಯಕ್ಕಳಿಗೆ ಒಂದೆ ದಿನಕ್ಕೆ ನಗರಜೀವನ ಸಾಕೆನಿಸಿ ಒಂದು ರಾತ್ರಿಯನ್ನು ಕಳೆಯಲು ಅಸಾಧ್ಯವಾದಾಗ ಕಾಂತಯ್ಯನೊಂದಿಗೆ 'ಸತ್ಯಹರಿಶ್ಚಂದ್ರ' ಸಿನಿಮಾಕ್ಕೆ ಹೋಗುತ್ತಾಳೆ. ಸಿನಿಮಾ ಮುಗಿದ ಮೇಲೆ ಇಬ್ಬರ ನಡುವೆ ಸಂಭಾಷಣೆಯು ನಡೆಯುತ್ತದೆ. "ಏನಿಲ್ಲ ಕಣಪ್ಪ ಇಲ್ಲಿ ನನ್ನಕೆರ ಬಿಟ್ಟಿದ್ದೆ ಕಾಣ್ತೋವಲ್ದು" ಎಂದಳು. "ಇಲ್‌ಯಾಕ್ ಬಿಡೋಕ್ತೋದೆ? ಎಲ್ರೂಚಪ್ಲಿ ಹಾಕ್ಕೊಂಡೇ ಸಿನಿಮಾ ಟಾಕೀಸ್‌ನಲ್ಲಿ ಕೂರೋದು!" ಎಂದು ಅವನು ಹೇಳಿದಾಗ "ಅದ್ಹೆಂಗ್‌ಆದಾತ್ಮಗ? ಸಿನೀಮಾದಾಗೇನು ದೇವರ್‌ದಿಂಡ್ರಿಲ್ಲಾ?"[1] ಎಂದಳು. ಇದು ಕೇವಲ ತಾಯಕ್ಕನ ಮಾತಲ್ಲ ಒಟ್ಟು ಗ್ರಾಮೀಣ ಸಮುದಾಯದ ಹೆಣ್ಣು ಮಕ್ಕಳ ಮುಗ್ಧತೆಯನ್ನು ಪ್ರತಿನಿಧಿಸುತ್ತದೆ. ಹಳ್ಳಿಗಾಡಿನ ಮಹಿಳೆಯು ಒಂದು ದಿನವೂ ನಗರಜೀವನವನ್ನು ಅನುಭವಿಸದೆ ಬೇಸತ್ತು ಮರಳಿ ಹೋಗುವುದನ್ನ ಇಲಿ ಕಾಣುತ್ತೇವೆ. ನಗರಜೀವನವು ಒಂದೆ ದಿನಕ್ಕೆ ಸಾಕಾಗಿ ತಾಯಕ್ಕಳು ಊರಿಗೆ ಹೋಗಿ ನಂತರ ಶಿವಮಲ್ಲುವಿನ ಹೆಂಡತಿಯಾದ ಜಯಳನ್ನು ಕಳಿಸುತ್ತಾಳೆ. ತಾಯಕ್ಕಳ ವರ್ತನೆಗೆ ಕನಕಳಿಗೆ ಅನಾಥ ಪ್ರಜ್ಞೆಕಾಡುತ್ತದೆ. ತನ್ನ ತಾಯಿಯಾಗಿದ್ದರೆ ಈ ರೀತಿ ಮಾಡುತ್ತಿರಲಿಲ್ಲವೆಂದು ನೋವು ಪಡುವಳು. ಜಯಳು ಶಾಲೆ ಕಲಿಯುತ್ತಿರುವುದರಿಂದ ನಗರಜೀವನಕ್ಕೆ ಹೊಂದಿಕೊಳ್ಳುತ್ತಾಳೆಂಬ ನಂಬಿಕೆಯ ಮೇಲೆ ಕಾಂತಯ್ಯನ ಜೊತೆಗೆ ಜಯಾಳನ್ನು ಕಳುಹಿಸಿಕೊಟ್ಟರು. ಕತೆಯು ಇಲ್ಲಿಂದ ಮತ್ತೊಂದು ಆಯಾಮದೊಂದಿಗೆ ರೂಪಗೊಳ್ಳುತ್ತದೆ.

ಜಯಳಿಗೆ ತಾನು ಪ್ರೀತಿಸಿದ ಹುಡುಗನನ್ನು ಮದುವೆಯಾಗುವ ಅವಕಾಶ ದೊರೆಯುವುದಿಲ್ಲ. ತನ್ನ ಪ್ರೀತಿಯನ್ನು ತಂದೆಯ ಮುಂದೆ ಹೇಳಿಕೊಂಡಾಗ ಅದಕ್ಕೆ ತಂದೆಯು ಅನುಮತಿಯನ್ನು ನೀಡದೆಯಜಮಾನ್ಯದ ಗುಣವನ್ನು ಅನಾವರಣಗೊಳಿಸುತ್ತಾನೆ. ಅಂದರೆ ಹೆಣ್ಣುಮಕ್ಕಳಿಗೆ ಇಷ್ಟಪಟ್ಟ ಹುಡುಗನೊಂದಿಗೆ ಮದುವೆ ಆಗುವ ಸಣ್ಣ ಸ್ವತಂತ್ರ್ಯವು ಪುರುಷಪ್ರಧಾನ ವ್ಯವಸ್ಥೆಯಲ್ಲಿಲ್ಲ ಎಂಬುದು ಸ್ಪಷ್ಟವಾದ ಸಂಗತಿ. ಇಂತಹ ಅನಿವಾರ್ಯತೆಗೆ ಜಯಳು ಬಲಿಯಾಗಿ ತಂದೆಯ ಇಷ್ಟದಂತೆ ಶಿವಮಲ್ಲೂವಿನೊಂದಿಗೆ ಮದುವೆಯಾದಳು. ಇವಳಿಗೆ ಮಕ್ಕಳು ಆಗಲಿಲ್ಲ ಎಂಬ ಕಾರಣಕ್ಕೆ ಕುಟುಂಬದವರು ಶಿವಮಲ್ಲೂವಿಗೆ ಸಾವಂತ್ರಿ ಎಂಬ ಹೆಣ್ಣಿನೊಂದಿಗೆ ಎರಡನೆ ಮದುವೆ ಮಾಡುತ್ತಾರೆ. ಇಲ್ಲಿ ಜಯಳ ಯಾವ ನಿರ್ಧಾರಗಳನ್ನು ಕೇಳದೆ ತಮ್ಮ ಅನುಕೂಲಕ್ಕೆ ಹೆಣ್ಣುಮಕ್ಕಳನ್ನು ಬಳಸಿಕೊಳ್ಳುವುದು ಕಾಣಿಸುತ್ತದೆ. ಮಕ್ಕಳು ಆಗದೆ ಇರುವುದಕ್ಕೆ ಹೆಣ್ಣೆಕಾರಣವೆಂದುದೂಷಿಸುವ ಸಂಗತಿಯಲ್ಲಿ ಹೆಣ್ಣಿನ ಶೋಷಣೆಯನ್ನು ಕಾಣುತ್ತೇವೆ. ಹೆಣ್ಣು ತಾಯ್ತನವನ್ನು ಅನುಭವಿಸದೆ ಬಂಜೆಯಾದರೆ ಅದೊಂದು ರೀತಿಯ ಅಪರಾಧವಾಗಿ ಬಿಂಬಿತವಾಗುತ್ತದೆ. ಹಾಗಾಗಿಯೇ ಇಲ್ಲಿ ಬಂಜೆಯೊಬ್ಬಳ ಅತಂತ್ರ ಸ್ಥಿತಿಯನ್ನು ಜಯಳ

ಬದುಕಿನ ಮೂಲಕ ಕಾಣಲಾಗುತ್ತದೆ. ಇವಳು ಅಪ್ರಜ್ಞಾಪೂರ್ವಕವಾಗಿ ಯಾರಿಂದಲೊ ಮನೆಯಲ್ಲಿ ಅತ್ಯಾಚಾರಕ್ಕೊಳಗಾಗಿ ಗರ್ಭಿಣಿಯಾದಾಗ ನಿಜಾಂಶ ತಿಳಿಯದೆ ಕುಟುಂಬದವರು ಅವಳನ್ನು ಬಹಳ ಕಾಳಜಿ ಪ್ರೀತಿಯಿಂದ ನೋಡಿಕೊಳ್ಳುವ ಸಂದರ್ಭ ವ್ಯವಸ್ಥೆಯ ವಿಡಂಬನೆಯಾಗಿದೆ. ಜಯಳ ಮೇಲೆ ನಡೆಯುವ ಈ ಲೈಂಗಿಕ ದೌರ್ಜನ್ಯವನ್ನು ಲೇಖಕಿಯು ವಿಭಿನ್ನ ನೆಲೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ವರದ ಹಾಗೂ ಮಾವ ಕಾಂತಯ್ಯನಿಂದ ಬಿಡುಗಡೆಗೊಂಡ ಜಯಳು ತಮ್ಮ ಮನೆಯಲ್ಲಿಯೇ ರಾತ್ರಿಗೊತ್ತಾಗದಂತೆ ಲೈಂಗಿಕ ದೌರ್ಜನ್ಯಕ್ಕೆ ಬಲಿಯಾಗುತ್ತಾಳೆ. ಆದರೆ ಈ ವಿಷಯವನ್ನು ಗಂಭೀರವಾಗಿ ಚಿಂತಿಸದೆ ಮೌನವಾಗುತ್ತಾಳೆ. ಕಾಂತಯ್ಯನೇ ಜಯಾಳನ್ನು ಪ್ರೀತಿಸಿದ ಹುಡುಗ ಎಂಬ ಸಂಗತಿಯು ಕತೆಯ ತಂತ್ರಗಾರಿಕೆಯಾಗಿದೆ. ಇವರ ಪ್ರೇಮ ಪ್ರಕರಣ ಯಾರಿಗೂ ತಿಳಿಯದೆ ಇರುವುದರಿಂದ ಗೆಳೆಯನ ಹೆಂಡತಿಯಾದ ಜಯಾಳನ್ನು ತನ್ನ ಹೆಂಡತಿಯ ಬಾಣಂತನಕ್ಕೆ ಆಕಸ್ಮಿಕವಾಗಿ ಕರೆದುಕೊಂಡು ಬರುವುದರಿಂದ ಕತೆಯುಹೊಸ ತಿರುವು ಪಡೆದುಕೊಳ್ಳುತ್ತದೆ.

ಜಯಳು ಕನಕವ್ವಳ ದೂರದ ಸಂಬಂಧಿಯಾಗಿರುವುದರಿಂದ ಬಾಣಂತಿ ಕನಕ ಹಾಗೂ ಜಯ ಆತ್ಮೀಯವಾಗಿದ್ದರು. ಜಯಳು ಕಾಲಕ್ರಮೇಣ ಸ್ತ್ರೀ ಸ್ವಾತಂತ್ರ್ಯದ ಬಗ್ಗೆ, ಪುಸ್ತಕಗಳ ಬಗೆಗೆ ಆಸಕ್ತಿ ತೋರುತ್ತಾಳೆ. ರೇಖಾಳ ಸಹವಾಸದಿಂದ ವೈಚಾರಿಕವಾಗಿ ಜಯ ರೂಪಗೊಳ್ಳುವಳು. ಇದನ್ನು ಕಂಡಕನಕವ್ವ ಮತ್ತು ಅವರ ಮನೆಯ ಪಕ್ಕದವಳಾದ ಶಾಂತಮ್ಮ ಜಯಳನ್ನು ಸೇರುವುದಿಲ್ಲ. ಇವರು ಸಾಂಪ್ರದಾಯಿಕವಾಗಿ ಆಲೋಚಿಸುವ ಮಹಿಳೆಯರಂತೆ ಬಿಂಬಿತಗೊಂಡಿದ್ದಾರೆ. ಇವರ ಮಾತುಗಳನ್ನು ಲೆಕ್ಕಿಸದೆ ಜಯಳು ಮಾವ ಕಾಂತಯ್ಯನಿಂದ ಹೊಸ ಹೊಸ ಪುಸ್ತಕಗಳನ್ನು ಪಡೆದುಕೊಂಡು ವೈಚಾರಿಕ ಆಲೋಚನೆಗಳೊಂದಿಗೆ ತೆರೆದುಕೊಳ್ಳುತ್ತಾಳೆ. ರೇಖಾ ಮತ್ತು ಜಯಳ ನಡುವೆ ಶೀಲದ ಕುರಿತುಚರ್ಚೆ ನಡೆದಾಗ "ಶೀಲ ಹೆಣ್ಣಿಗಷ್ಟೇ ಅಲ್ಲ. ಗಂಡಿಗೂ ತುಂಬ ಮುಖ್ಯ ಅಂತ ನನ್ನ ಭಾವನೆ. ಜನಗಳು ದನಗಳಾಗದಂತೆ ತಮ್ಮನ್ನು ತಾವು ರಕ್ಷಿಸಿಕೊಳ್ಳುವುದಕ್ಕೆ ತಾವಾಗಿಯೇ ಹಾಕಿಕೊಂಡಿರುವಂಥ ಶಿಸ್ತಿನ ಚೌಕಟ್ಟು ಅದು."[2] ಎಂಬ ನಿಲುವು ತಾಳುವುದು ರೇಖಾಳ ಭಿನ್ನ ಚಿಂತನೆಯಾಗಿದೆ. ಶೀಲ ಎನ್ನುವುದು ಕೇವಲ ಹೆಣ್ಣಿಗೆ ಮಾತ್ರ ಸೀಮಿತವಲ್ಲ ಅದು ಗಂಡಿಗೂ ಸಂಬಂಧಿಸಿದ್ದು ಎನ್ನುವ ರೇಖಾಳ ಮಾತು ಲಿಂಗ ಸಮಾನತೆಯ ವಿಚಾರವಾಗಿದೆ. ಶೀಲದ ಬಗೆಗೆ ಇರುವ ಅನೇಕ ಮಿಥ್‌ಗಳನ್ನು ರೇಖಾ ಹಾಗೂ ಜಯ ಇಬ್ಬರೂ ಮಾತನಾಡುವ ಸಂಗತಿಯನ್ನು ಲೇಖಕಿಯು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ.

ಮಾವ ಕಾಂತಯ್ಯನಿಗೆ ಜಯಳ ಮೇಲೆ ಮೊದಲಿನ ಪ್ರೇಮ ಬಂದಾಗ ಅದನ್ನು ಅವಳು ವಿರೋಧಿಸುತ್ತಾಳೆ. ರೇಖಾಳ ಗಂಡ ವರದ ಜಯಾಳನ್ನು ಅತ್ಯಾಚಾರ ಮಾಡಲು ಬಂದಾಗ ಅವನ ಮರ್ಮಾಂಗಕ್ಕೊದ್ದು ತಪ್ಪಿಸಿಕೊಳ್ಳುತ್ತಾಳೆ. ಆ ಸಂದರ್ಭದಲ್ಲಿ ಭಯದಿಂದ ಆಲೋಚಿಸಿದರೂ ಪುರುಷನನ್ನು ಒದೆಯುವ ಪ್ರಕ್ರಿಯೆ ಕೂಡ ಒಂದು ಪ್ರತಿಭಟನೆಯಾಗಿದೆ. ಇದರ ನಿಜಾಂಶ ಅರಿತರು ರೇಖಾ ಜಯಳ ಪರವಾಗಿ ನಿಲ್ಲುತ್ತಾಳೆ ಹೊರತು ಗಂಡನ ಪರವಾಗಿ ವಾದಿಸುವುದಿಲ್ಲ. ಮಹಿಳಾ ಸ್ವಾತಂತ್ರ್ಯಕ್ಕಾಗಿ ಹೋರಾಡುವ ರೇಖಾಳು ಕೂಡ ಗಂಡನೊಂದಿಗೆ ನೆಮ್ಮದಿಯಿಂದ ಇರದೆ ಅಶಾಂತಿಯಿಂದ ಜೀವನ ಸಾಗಿಸುತ್ತಿರುತ್ತಾಳೆ. ತಾನು ಪ್ರೀತಿಸಿದ ಶಂಕರ ಶೀಲದ ಕಾರಣಕ್ಕೆ ನಿರಾಕರಿಸಿದ್ದರಿಂದ ಅನಿವಾರ್ಯವಾಗಿ ರೇಖಾ ವರದನಂತಹ ಕಾಮುಕನಿಗೆ ಹೆಂಡತಿಯಾಗುವಳು. ಕಾದಂಬರಿಯಲ್ಲಿ ಬರುವ ಶಾಂತಮ್ಮಳ ಮಹಿಳಾ ವಿರೋಧ ವಿಚಾರಗಳು ಪುರುಷ ನಿರ್ಮಿತ ಮೌಲ್ಯಗಳಾಗಿವೆ. ಹೆಣ್ಣು ಓದು–ಬರಹ, ಸಂಘ–ಸಂಸ್ಥೆ ಎಂದರೆ ಆಕೆ ನಡತೆಗೆಟ್ಟವಳೆಂಬ ಆಲೋಚನೆ

ಮಾಡುವ ಶಾಂತಮ್ಮಳ ಪಾತ್ರವು ಹೆಣ್ಣಿಗೆ ಹೆಣ್ಣು ಹೇಗೆ ಶತ್ರು ಎಂಬ ಅಂಶಗಳನ್ನು ಗಮನಿಸುತ್ತೇವೆ. ಕಾಂತಯ್ಯನ ಮೇಲಿನ ಅನುಮಾನಕ್ಕೆ ಹೆಂಡತಿಯಾದ ಕನಕಳು ಗಂಡನಿಗೆ ಅಂಜಿಸಲು ಹೋಗಿ ನಿಜವಾಗಿಯೂ ನೇಣುಹಾಕಿಕೊಂಡು ಆಕಸ್ಮಿಕವಾಗಿ ಸಾವನ್ನಪ್ಪುವಳು. ಮನೆ ಪಕ್ಕದ ಶಾಂತಮ್ಮಳಿಂದ ಇದೆಲ್ಲಾ ಅನಾಹುತ ಆಗಿರುವುದೆಂಬ ಕಾರಣಕ್ಕೆ ಕೋಪಗೊಂಡ ಕಾಂತಯ್ಯ ಅವಳ ಜೊತೆ ಜಗಳಕ್ಕೆ ಹೋದಾಗ ಅವಳ ಗಂಡ ನಡುವೆ ಬಂದು ಅವನು ಸಾಯುತ್ತಾನೆ. ಶಾಂತಮ್ಮ ವಿಧವೆಯಾಗುತ್ತಾಳೆ. ರೇಖಾಳ ಸಹಾಯದಿಂದ ಎರಡು ಸಾವುಗಳು ಅನಾರೋಗ್ಯದ ಸಾವುಗಳೆಂದು ಪೋಲಿಸ ಠಾಣೆಗೆ ಹೋಗದೆ ಪ್ರಕರಣಗಳನ್ನು ಮುಚ್ಚಿ ಹಾಕುತ್ತಾರೆ. ಇದರಿಂದ ಜಯಳಿಗೂ ಮಾನಸಿಕವಾಗಿ ಘಾಸಿಯಾಯಿತು. ಕಾಂತಯ್ಯ ತನ್ನ ಹೆಂಡತಿಯನ್ನು ಕಳೆದುಕೊಂಡು ಅನಾಥನಾದನು.

ಹೆಂಡತಿ ಸತ್ತಮೇಲೆ ಕಾಂತಯ್ಯ ಶಿವಮಲ್ಲೂವಿನ ಮನೆಗೆ ಬರುತ್ತಾನೆ. ಆ ಮನೆಯ ಹೆಣ್ಣುಮಕ್ಕಳ ಮಾತುಗಳಿಂದ ನೋವು ಅನುಭವಿಸಿ ಮರಳಿ ತನ್ನ ಊರಿಗೆ ಮಕ್ಕಳೊಂದಿಗೆ ತೆರಳುವನು. ಜಯಳು ತನ್ನಿಂದ ತನ್ನ ಮಾವನ ಕುಟುಂಬ ಹಾಳಾಯಿತೆಂದು ತಾಯಿ ಇಲ್ಲದ ಮಕ್ಕಳನ್ನು ನೆನೆದು ಮನಸ್ಸಿನಲ್ಲಿ ಕೊರಗುತ್ತಾಳೆ. ಜಯಳು ಬಾಣಂತನಕ್ಕೆ ಹೋಗಿ ಇಷ್ಟೆಲ್ಲಾ ಘಟನೆಗಳಾದವೆಂದು ನೋವು ಮಾಡಿಕೊಂಡಳು. ಮನಸ್ಸಿನಲ್ಲಿ ಕಾಂತಯ್ಯನನ್ನು ಒಪ್ಪಿಕೊಳ್ಳಲು ನಿರ್ಧರಿಸಿದರೂ ನಂತರ ಎಲ್ಲಾ ಚಿಂತನೆಗಳು ಬದಲಾದವು. ಮನೆಯಲ್ಲಿ ಸಮಾರಂಭ ಇರುವುದರಿಂದ ಎಲ್ಲರೂ ಒಟ್ಟಿಗೆ ಮಲಗಿದಾಗ ಜಯಾಳು ತನಗೆ ಗೊತ್ತಿಲ್ಲದೆನೆ ಮನೆಯಲ್ಲಿಯೇ ಅತ್ಯಾಚಾರಕ್ಕೊಳಗಾಗಿ ಅದನ್ನು ಹಿಂಸೆಯೆಂದು ಭಾವಿಸದೆ ತನಗೆ ಅರಿವಿಲ್ಲದಂತೆ ಅನುಭವಿಸುವುದು ಪ್ರಕೃತಿಯ ಸಹಜಗುಣವಾಗಿದೆ. ಶಿವಮಲ್ಲೂವಿನ ಎರಡನೆ ಹೆಂಡತಿ ಸಾವಂತ್ರಿಯು ಪ್ರೀತಿಸಿದವನ ಜೊತೆಗೆ ಓಡಿಹೋಗುವ ಧೈರ್ಯವಂತೆಯಾಗಿ ಚಿತ್ರಣಗೊಂಡಿದ್ದಾಳೆ. ಇವಳ ಧೈರ್ಯದ ನಿರ್ಧಾರಕ್ಕೆ ಜಯ ಸಂತೋಷಪಡುವಳು. ಸಾವಂತ್ರಿ ಬಿಡುಗಡೆಯನ್ನು ಹುಡುಕಿಕೊಂಡರೆ ಜಯಳು ತಾಯ್ತನದ ಬಂಧನಕ್ಕೆ ಬೀಳುತ್ತಾಳೆ. ಜಯಾಳು ಬಿಡುಗಡೆಯ ಆಲೋಚನೆಗಳನ್ನು ಮಾಡಿದರೆ ಸಾವಂತ್ರಿ ಬಿಡುಗಡೆಯಾಗಿ ಹೋಗುವ ಚನಲಶೀಲತೆಗೆ ಉದಾಹರಣೆಯಾಗುವಳು. ಕಾದಂಬರಿಯಲ್ಲಿ ನಿರೂಪಣೆಗೊಳ್ಳುವ ಕೆಲವು ಮಹಿಳಾ ಪಾತ್ರಗಳುತಮ್ಮ ಅಸ್ತಿತ್ವವನ್ನು ಹುಡುಕುತ್ತಾ ಅಲ್ಲಲ್ಲಿ ಬಂಧನಕ್ಕೆ ಸಿಲುಕಿಕೊಳ್ಳುತ್ತವೆ. ಇನ್ನು ಕೆಲವು ಬಿಡುಗಡೆಯ ದಾರಿಯನ್ನು ಕಾಯುತ್ತವೆ. ರೇಖಾ ಮಹಿಳಾ ಸಂಘ–ಸಂಸ್ಥೆ ಎಂದು ವೈಚಾರಿಕವಾಗಿ ಕಂಡರೆ, ಜಯಳು ಅವಳನ್ನೆ ಅನುಸರಿಸಿ ಕೊನೆಯಲ್ಲಿ ಬಂಧನಕ್ಕೆ ಒಳಗಾಗುತ್ತಾಳೆ. ಕನಕ ಸ್ವಂತ ಆಲೋಚನೆಯಿಲ್ಲದೆ ಆತ್ಮಹತ್ಯೆ ಮಾಡಿಕೊಂಡರೆ, ಶಾಂತಮ್ಮಳಿಗೆ ಬದುಕಿನ ವಾಸ್ತವತೆ ತನ್ನ ಗಂಡನ ಸಾವಿನಿಂದ ತಿಳಿಯುತ್ತದೆ. ಅತ್ತೆಯ ಸ್ಥಾನದಲ್ಲಿದ್ದ ತಾಯಕ್ಕ ತಾಯ್ತನವನ್ನು ಪೋಷಿಸಿದಂತೆ ಕಾಣಿಸುತ್ತದೆ. “ಕನಕ, ಶಾಂತಮ್ಮ, ಜಯಳ ಅತ್ತೆ, ಓರೆಗಿತ್ತಿಯರು ಮುಂತಾದವರು ಸಾಂಪ್ರದಾಯಿಕ ಚಿಂತನಾಕ್ರಮ. ಪುರುಷ ಪ್ರಧಾನ ಸಮಾಜದ ಮೌಲ್ಯಗಳನ್ನೇ ತಮ್ಮ ಉಸಿರಾಗಿಸಿಕೊಂಡು, ಒಪ್ಪಿತ ಯಾಜಮಾನ್ಯಕ್ಕೆ ತಮ್ಮನ್ನು ಒಡ್ಡಿ ಕೊಂಡವರು ಇವರು. ಸಾವಂತ್ರಿ, ರೇಖಾ, ಜಯ ಅವರಿಗಿಂತ ಭಿನ್ನವಾದ ಮಾದರಿಗಾಗಿ ಹುಡುಕಾಡಿದವರು; ಬದುಕಿದವರು. ಸಾವಂತ್ರಿ ಸವತಿ ಇರುವ ದಾಂಪತ್ಯದ ಬದುಕನು ಕಿತ್ತೊಗೆದು, ಧೈರ್ಯದಿಂದ ಪ್ರೇಮಿಯ ಜೊತೆ ಹೊಸ ಬದುಕಿಗೆ ಮುಖಮಾಡುವುದು ಕಂಡುಬರುತ್ತದೆ. ರೇಖಾಳು ತನ್ನ ವೈಚಾರಿಕತೆಯನ್ನು ಸಂಘಟನಾ ಬಲದಿಂದ ವಿಸ್ತರಿಸಿಕೊಂಡು, ಹೊಸ ಅರ್ಥಕಾಣುವ ಪ್ರಯತ್ನ ಮಾಡುತ್ತಾಳೆ. ಈ ಎರಡು ತುದಿಗಳ ನಡುವಿನ ಸಂಕ್ರಮಣ ಸ್ಥಿತಿ ಜಯಾಳದು. ಗಂಡನ ಎರಡನೆಯ ಮದುವೆಯಿಂದ, ಒಲ್ಲದ ದಾಂಪತ್ಯ ತೊರೆಯುವ ನಿರ್ಧಾರಕ್ಕೆ ಬಂದರೂ,

ಕೊನೆಗೆ ಸವತಿ ಸಾವಂತ್ರಿಯ ನಿರ್ಧಾರದಿಂದ ತನ್ನ ಅದೇ ದಾಂಪತ್ಯಕ್ಕೆ ಕಟ್ಟು ಬೀಳುತ್ತಾಳೆ. ಅಂದರೆ ಮಹಿಳೆಗೆ ತನ್ನ ಬಂಧನದ ಅರಿವು ಆದರೂ ಬಿಡುಗಡೆ ಅಷ್ಟು ಸುಲಭದ್ದು ಆಗಿರುವುದಿಲ್ಲ ಎಂಬ ಸತ್ಯ ಇದರಲ್ಲಿ ಪ್ರಕಟವಾಗಿದೆ."[3] ಆದ್ದರಿಂದ ಕಾದಂಬರಿಯಲ್ಲಿ ಮಹಿಳಾ ಪಾತ್ರಗಳು ವಿಭಿನ್ನನೆಲೆಗಳಲ್ಲಿ ಚಿತ್ರಣಗೊಂಡಿದ್ದನ್ನ ಕಾಣುತ್ತೇವೆ.

ಒಟ್ಟಾರೆಯಾಗಿ ಕಾದಂಬರಿಯು ಭಾಷೆಯಿಂದ ಹಾಗೂ ನಿರೂಪಣೆ ಶೈಲಿಯ ಸರಳತೆಯಿಂದ ಓದುಗರ ಗಮನವನ್ನು ಸೆಳೆಯುತ್ತದೆ. ಒಂದು ಘಟನೆಯ ನಂತರ ಮತ್ತೊಂದು ಘಟನೆ ಪ್ರಾರಂಭವಾಗುವುದು ಗೊತ್ತಾಗದಂತೆ ಲೇಖಕಿಯು ಒಂದರೊಳಗೆ ಒಂದನ್ನು ಸೇರಿಸಿ ಕತೆಯನ್ನು ನಿರೂಪಿಸಿದ್ದಾರೆ. ಹೆಣ್ಣನ್ನು ಹೆಣ್ಣು ವಿರೋಧಿಸುವ, ಪ್ರೀತಿಸುವ ಅನೇಕ ಸಂಗತಿಗಳನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಒಂದು ಕಡೆ ಪ್ರೀತಿ ಸೋತರೆ ಮತ್ತೊಂದು ಕಡೆ ಅದು ಗೆಲ್ಲುತ್ತದೆ. ದಾಂಪತ್ಯವು ಕೂಡ ಹೀಗೆ ಸಾಗುತ್ತದೆ. ದೇವರ ಆಚರಣೆಯನ್ನು ಜಯಾಳು ವಿರೋಧಿಸುತ್ತಾಳೆ ಆದರೆ ಅವಳ ಅತ್ತೆ ಆಚರಣೆಯನ್ನು ಪ್ರೀತಿಸುತ್ತಾಳೆ. ಕಾದಂಬರಿಯಲ್ಲಿ ಬರುವಮಹಿಳಾ ಪಾತ್ರಗಳನ್ನು ಗಮನಿಸಿದಾಗ ಸ್ಥಿರಮಾದರಿ ಪಾತ್ರಗಳಾಗಿರುವ ತಾಯಿ, ಹೆಂಡತಿ, ಅತ್ತೆ, ಮಗಳು, ಪ್ರೇಯಸಿ ಹಾಗೂ ಗೆಳತಿ ಕಂಡುಬರುತ್ತವೆ. ಎಲ್ಲಾ ಮಹಿಳಾ ಪಾತ್ರಗಳಿಗೂ ಪುರುಷ ಪ್ರಧಾನ ವ್ಯವಸ್ಥೆಯ ಚೌಕಟು ಅಡ್ಡಿಯಾಗಿರುವುದು ಕಾಣಿಸುತ್ತದೆ. ಹಾಗಾಗಿ ಕೆಲವು ಮಹಿಳಾ ಪಾತ್ರಗಳು ವ್ಯವಸ್ಥೆಯಿಂದ ಬಿಡುಗಡೆ ಪಡೆದುಕೊಂಡಂತೆ ಕಂಡರು ಆಂತರ್ಯದಲ್ಲಿ ಬಂಧನದಲ್ಲಿ ಉಳಿಯುತ್ತವೆ.

**ಕೊನೆಟಿಪ್ಪಣಿಗಳು**

- ಲಲಿತಾ ನಾಯಕ್, ಬಿ.ಟಿ. (2019). *ಸಮಗ್ರ ಸಾಹಿತ್ಯ ಸಂಪುಟ–1.* ಕನ್ನಡ ಪುಸ್ತಕ ಪ್ರಾಧಿಕಾರ ಪುಟ. 14
- ಅದೇ, ಪುಟ. 69
- ಸರಸ್ವತಿ, ದು. (ಸಂ.). (2014). *ನೀರದಾರಿ ದಲಿತ ಮಹಿಳಾ ಪ್ರಜ್ಞೆ ವಿಭಿನ್ನ ನೆಲೆಗಳಿಂದ.* ಕವಿ ಪ್ರಕಾಶನ. ಪುಟ. 141

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 129-133
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಹಸಿಮಾಂಸ ಮತ್ತು ಹದ್ದುಗಳು ಕಾದಂಬರಿಯಲ್ಲಿ ಸಾಂಸ್ಕೃತಿಕ ನೆಲೆಗಳು

**ಡಾ. ರಶ್ಮಿ ಆರ್. ಚಂದ್ರಗಿರಿ**
ಉಪನ್ಯಾಸಕರು, ಹಾವೇರಿ

***Abstract:***
*ಕನ್ನಡ ಸಾರಸ್ವತ ಲೋಕದಲ್ಲಿ ಬಂಡಾಯದ ಧೋರಣೆಗಳನ್ನು ಕಟ್ಟಿಕೊಡುವ ಪ್ರಮುಖ ಸ್ತ್ರೀವಾದಿ ಲೇಖಕಿಯರಲ್ಲಿ ಗೀತಾ ನಾಗಭೂಷಣ್ ಅವರು ಪ್ರಮುಖರಾಗಿದ್ದಾರೆ. ಗೀತಾ ನಾಗಭೂಷಣ್ ಅವರು ತನ್ನ ಸುತ್ತಮುತ್ತಲಿನ ಸಾಮಾಜಿಕ ಪರಿಸರದಲ್ಲಿ ಜೀವಂತವಾಗಿರುವ ಮದುವೆಯಾಗದ ಹೆಣ್ಣು ಮಕ್ಕಳನ್ನು ದೇವರಿಗೆ ಮೀಸಲಿರಿಸುವ 'ದೇವದಾಸಿ' ಪದ್ಧತಿಯಿಂದ ತಮ್ಮಲ್ಲಿ ಸ್ತ್ರೀತ್ವವನ್ನು ಜಾಗೃತಗೊಳಿಸಿಕೊಂಡವರು. ಗೀತಾ ನಾಗಭೂಷಣ್ ಅವರು ನೇರ ನುಡಿಯ ಬರಹಗಾರ್ತಿ. ಅವರಿಗೆ ಮುಖವಾಡ ಧರಿಸಿ ಸಾಹಿತ್ಯ ರಚಿಸುವುದು ಸಹಿಸದ ಮಾತಾಗಿರಲಿಲ್ಲ. ಪ್ರಸ್ತುತ ಲೇಖನದಲ್ಲಿ ಗೀತಾ ನಾಗಭೂಷಣ ಅವರ ಕಾದಂಬರಿಗಳಲ್ಲಿ ಒಂದಾದ 'ಹಸಿಮಾಂಸ ಮತ್ತು ಹದ್ದುಗಳು' ಕಾದಂಬರಿಯಲ್ಲಿನ ಸಾಂಸ್ಕೃತಿಕ ನೆಲೆಗಳ ಬಗ್ಗೆ ವಿವರಿಸಲಾಗಿದೆ.*

**Keywords:** *ಕನ್ನಡ ಕಾದಂಬರಿ, ಗೀತಾ ನಾಗಭೂಷಣ, ಹಸಿಮಾಂಸ ಮತ್ತು ಹದ್ದುಗಳು, ಸಾಂಸ್ಕೃತಿಕ ನೆಲೆಗಳು.*

**ಪೀಠಿಕೆ**

"ಆರಂಭದಲ್ಲಿ ಗೀತಾ ನಾಗಭೂಷಣ ಬರೆದ ಕಥೆ, ಕಾದಂಬರಿಗಳು ಅವರಿಗೆ ತೃಪ್ತಿ ತಂದಿರಲಿಲ್ಲ. ತಮ್ಮನ್ನು ನಿರಂತರ ಕಾಡುತ್ತಿದ್ದ ಬಡವರ, ನಿರ್ಗತಿಕರ, ಕೂಲಿ ಕಾರ್ಮಿಕರ, ಕೆಳವರ್ಗದ ಜೋಪಡಿಯ ಹೆಣ್ಣುಮಕ್ಕಳ ಬದುಕಿನ ಕಟು ವಾಸ್ತವವನ್ನು ದಾಖಲಿಸುವ, ಉಳ್ಳವರ ಕಾಮಲಾಲಸೆ ಮತ್ತು ಮನೆಯ ಗಂಡರ ದಬ್ಬಾಳಿಕೆಗಳೆಂಬ ಎರಡು ಅಲುಗಿನ ಕತ್ತಿಯ ಮೇಲೆ ಬದುಕು ಸವೆಸುತ್ತಿರುವ ಹೆಣ್ಣುಮಕ್ಕಳ ಯಾತನೆಗೆ ದನಿಯಾಗುವ, ಹೆಜ್ಜೆಹೆಜ್ಜೆಗೂ ನೀನುಂಡ ನೋವು, ಹಿಂಸೆ, ಕ್ರೌರ್ಯಗಳ ಬಗೆಗೆ ಬರೆ ಎನ್ನುವ ಮನಃಸಾಕ್ಷಿಯ ಎಚ್ಚರಿಕೆಯನ್ನು ಹೆಚ್ಚು ಕಾಲ ಧಿಕ್ಕರಿಸಲಾಗಲಿಲ್ಲ. ಪರಿಣಾಮವಾಗಿ ಶೋಷಿತ ಸಮಾಜದ ಹೆಣ್ಣುಮಕ್ಕಳ ನೋವು, ದುಃಖ, ಅಸಹಾಯಕತೆಗಳು ಅವರ ಕೃತಿಗಳಲ್ಲಿ ಸ್ಥಾನಪಡೆದವು. ಮುಂದುವರೆದು ಅವರೊಳಗಿನ ಬಂಡಾಯಗಾರ್ತಿ ಹಲವು ಕೃತಿಗಳಲ್ಲಿ ಸನಾತನವಾದಿಗಳಿಗೆ ಸವಾಲು ಹಾಕಿ ದಂಗೆ ಎದ್ದಳು. ತಮ್ಮ ಬರಹದ ಮೂಲಕ ಕೊಳಗೇರಿಯ ಸಾವಿರಾರು ಹೆಣ್ಣುಮಕ್ಕಳ ಪ್ರತಿಧ್ವನಿಯಾಗಿ ಅವರ ಮೂಕವೇದನೆಗೆ ದನಿಯಾದಳು. ವಿಚಾರವಂತರಿಗೆ ಆತ್ಮಸಾಕ್ಷಿಯಾದರು. ಅಸಮಾನತೆಯ ಅನಿಷ್ಟಗಳ ವಿರುದ್ಧ ಬಂಡೆದ್ದ ಬಸವಣ್ಣ, ಅಂಬೇಡ್ಕರರ ವಿಚಾರಧಾರೆಗಳ ಜೊತೆಗೆ ದಲಿತ ಬಂಡಾಯ ಚಳವಳಿಯ ವಿಚಾರಗಳು ಗೀತಾ ನಾಗಭೂಷಣ್ ಅವರ ಲೇಖನಿಯ ಖಡ್ಗವನ್ನು ಸಾಣೆ ಹಿಡಿದು ಮತ್ತಷ್ಟು ಶಕ್ತಿ ಸತ್ವಗಳನ್ನು ತುಂಬಿದವು. ಇದೆಲ್ಲದರ ಫಲವಾಗಿ ನೀಲಗಂಗಾ, ಹಸಿಮಾಂಸ ಮತ್ತು ಹದ್ದುಗಳು, ಮಾಪುರ ತಾಯಿ

***Please cite this article as:*** ರಶ್ಮಿ. ಆರ್. ಚಂದ್ರಗಿರಿ (2024). ಹಸಿಮಾಂಸ ಮತ್ತು ಹದ್ದುಗಳು ಕಾದಂಬರಿಯಲ್ಲಿ ಸಾಂಸ್ಕೃತಿಕ ನೆಲೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 3(3), 129–133

ಮಕ್ಕಳು, ದಂಗೆ ದುಮ್ಮಸ್ಸು ಆಸರೆಗಳು ಮುಂತಾದ ಪ್ರತಿಭಟನಾತ್ಮಕ ಕಾದಂಬರಿಗಳು ರಚಿತವಾಗಿ ಓದುಗರ ಮೆಚ್ಚುಗೆ ಪಡೆದವು."

'ಹಸಿಮಾಂಸ ಮತ್ತು ಹದ್ದುಗಳು' ಗೀತಾ ನಾಗಭೂಷಣ ಅವರ ಪ್ರಮುಖ ಕಾದಂಬರಿಗಳಲ್ಲಿ ಒಂದಾಗಿದೆ. ಪ್ರಸ್ತುತ ಕಾದಂಬರಿಯು ತೆಳುವಾದ ಕಥೆಯನ್ನು ಹೊಂದಿದ್ದು, ಇದರಲ್ಲಿ ಲೇಖಕಿಯು ದಲಿತ ಸಮುದಾಯದ ಹೆಣ್ಣಿಗೆ ಒದಗಿದ ದುರಂತಗಳ ವಿಷಚಕ್ರ ಹಾಗೂ ದಲಿತರ ಜೀವನ ಕ್ರಮವನ್ನು ಚಿತ್ರಿಸಿದ್ದಾರೆ. ಈ ಕಾದಂಬರಿಯಲ್ಲಿ ಗೌಡ, ಕುಲ್ಕರ್ಣಿಯರ ದೌರ್ಜನ್ಯ, ದಲಿತ ಹೆಣ್ಣು–ಗಂಡುಗಳ ಬವಣೆ ಹಾಗೂ ಹಳ್ಳಿಯ ಪಂಚರ ಬಗ್ಗೆ ವಿವರಣೆಯಿದೆ. ಭೀಮಳ್ಳಿಯ ದಲಿತ ಜನರು ಆಧುನಿಕತೆಯ ಸೋಂಕಿಗೆ ಒಳಗಾಗುತ್ತಿದ್ದರೂ ಇನ್ನೂ ತುಳಿತದಿಂದ ಹೊರಬಂದಿರಲಿಲ್ಲ. ಹಳ್ಳಿಯ ದೊಡ್ಡ ಮಂದಿ ದಲಿತ ಹೆಣ್ಣು ಗಂಡುಗಳನ್ನು ಜೀತದಾಳಾಗಿಸಿಕೊಂಡು ದುಡಿಸಿಕೊಳ್ಳುತ್ತಿದ್ದರಲ್ಲದೆ ಅವರನ್ನು ದೈಹಿಕವಾಗಿಯೂ ಶೋಷಿಸುತ್ತಿರುವ ಕ್ರಮ, ಹೆಣ್ಣುಮಕ್ಕಳ ಶೀಲ ಸದ್ದಿಲ್ಲದೇ ಅಪಹರಣವಾಗುತ್ತಿರುವ ಸ್ವರೂಪ, ದೊಡ್ಡ ಮಂದಿಯನ್ನು ಎದುರಿಸುವ ಧೈರ್ಯವಿಲ್ಲದೆ ಅಸಹಾಯಕರಾಗಿ ನಿಂತ ತಳಸಮುದಾಯದ ಜನರ ಸ್ಥಿತಿಗತಿಗಳು ಇಲ್ಲಿ ಅಭಿವ್ಯಕ್ತವಾಗಿವೆ.

ಬಂಡಾಯದ ತಾತ್ವಿಕಕತೆ ಹಾಗೂ ಸೈದ್ಧಾಂತಿಕತೆಯ ಭಾಗವಾಗಿ ಎಚ್ಚೆತ್ತ ದಲಿತ ಸಮುದಾಯದ ಪ್ರತಿನಿಧಿಯಾಗಿ 'ಪಕೀರಪ್ಪ' ಎಂಬ ಪಾತ್ರ ಮೂಡಿಬಂದಿದೆ. ಈತನು ತನ್ನ ಹಕ್ಕಿಗಾಗಿ ಹೋರಾಡುವುದಲ್ಲದೇ, ತನ್ನ ಸಮುದಾಯದ ಜನರನ್ನು ಜಾಗೃತಗೊಳಿಸಲು ಪ್ರಯತ್ನಿಸುತ್ತಾನೆ. 'ನಮ್ಮ ಹೆಂಡತಿಯರನ್ನು ಬಯಸುವ ಸೊಕ್ಕಿನ ಮಂದಿಗೆ ಪಾಠ ಕಲಿಸಬೇಕೆಂದರೆ ಅವರ ಹೆಂಡತಿಯರನ್ನು ನಾವು ಬಯಸಬೇಕೆಂದು' ಹೇಳುವ ಅವನ ಮಾತುಗಳಲ್ಲಿ ಸೇಡಿಗೆ ಪ್ರತಿ ಸೇಡಿದೆ. ಇವನ ಈ ಸೇಡು ಸಾವಿರಾರು ವರ್ಷಗಳ ಕಾಲ ದಲಿತರು ಅನುಭವಿಸಿಕೊಂಡು ಬಂದ ಶೋಷಣೆ, ದೌರ್ಜನ್ಯ, ಹಲ್ಲೆ ಹಾಗೂ ಅತ್ಯಾಚಾರಕ್ಕೆ ಒಡ್ಡಿದ ಪ್ರತಿರೋಧ ಮಾತ್ರವಲ್ಲ ಪ್ರತಿಕಾರದಂತಿದೆ. ದಲಿತರು ಹಾಗೂ ಶೋಷಿತ ವರ್ಗಗಳ ವಿಮೋಚನೆಯೇ ತನ್ನ ಹೋರಾಟದ ಪರಮಗುರಿ ಎಂದು ನಂಬಿರುವ ಈತ ಮೇಲ್ವರ್ಗದವರ ಹುನ್ನಾರಕ್ಕೆ ಬಲಿಯಾಗದೇ ಸ್ವತಂತ್ರವಾಗಿ ಬದುಕುವ ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದಾನೆ. ದಲಿತ ಮಂದಿಯು ಬಲಿಯಾಗದಂತೆ ಅವರಲ್ಲಿ ಅರಿವು ಮೂಡಿಸಲು ಪ್ರಯತ್ನಿಸಿ ಸಾಧ್ಯವಾಗದಿದ್ದಾಗ ತನ್ನ ಮಂದಿಯನ್ನೇ ಬೈದುಕೊಂಡು ಸುಮ್ಮನಾಗುತ್ತಾನೆ. ಈತನ ಮಗಳು ಲಚ್ಚಿ ತಂದೆಯಂತೆ ವಿವೇಚನಾಶಕ್ತಿ ಮತ್ತು ಪ್ರತಿಭಟನಾ ಸಾಮರ್ಥ್ಯ ಬೆಳೆಸಿಕೊಂಡಿದ್ದರೆ, ದುರಂತದಲ್ಲಿ ಮುಳುಗುವ ಸ್ಥಿತಿ ಬರುತ್ತಿರಲಿಲ್ಲ. ಈಕೆಯು ಮೊದಲು ಕುಲ್ಕರ್ಣಿಯನ್ನು ಪ್ರತಿಭಟಿಸುತ್ತಾಳೆ. ಅನಂತರ ಎದುರಾಗುವ ಎಲ್ಲ ಸ್ಥಿತಿಗಳಲ್ಲಿಯೂ ಮೂಕವಾಗಿ ಪಶುವಿನಂತೆ ಬಲಿಯಾಗುತ್ತಾಳೆ.

**ಜಾತೀಯತೆ**

'ಹಸಿಮಾಂಸ ಮತ್ತು ಹದ್ದುಗಳು' ದಲಿತರ ಬದುಕಿನ ಚಿತ್ರಣವನ್ನು ಹಾಗೂ ಅಲ್ಲಿನ ಅಸ್ಪೃಶ್ಯತೆಯ ಕರಾಳತೆಯನ್ನು ತೆರೆದಿಡುತ್ತದೆ. ಜಾತಿಯತೆಯ ಕಾರಣದಿಂದ ದಲಿತ ಹೆಣ್ಣಿಗೆ ಒದಗಿದ ದುರಂತವನ್ನು ಕಾದಂಬರಿಯು ತೆರೆದಿಡುತ್ತದೆ. ಈ ಕಾದಂಬರಿಯಲ್ಲಿಯೂ ಗೌಡ, ಕುಲಕರ್ಣಿಯರ ದೌರ್ಜನ್ಯ, ದಲಿತ ಹೆಣ್ಣು ಗಂಡುಗಳ ಬವಣೆ ಹಾಗೂ ಹಳ್ಳಿಯ ಪಂಚರ ಬಗ್ಗೆ ವಿವರಣೆ ಮೂಡಿಬಂದಿದೆ. ಭೀಮಳ್ಳಿಯ ದಲಿತ ಜನರು ಆಧುನಿಕತೆಯ ಸೋಂಕಿಗೆ ಒಳಗಾಗುತ್ತಿದ್ದರೂ ಇನ್ನೂ ತುಳಿತದಿಂದ ಹೊರಬಂದಿರಲಿಲ್ಲ. ಹಳ್ಳಿಯ ದೊಡ್ಡ ಮಂದಿ ದಲಿತ ಹೆಣ್ಣು ಗಂಡುಗಳನ್ನು ಜೀತದಾಳಾಗಿಸಿಕೊಂಡು ದುಡಿಸಿಕೊಳ್ಳುತ್ತಿದ್ದರಲ್ಲದೆ ಅವರನ್ನು ದೈಹಿಕವಾಗಿಯೂ ಶೋಷಿಸುತ್ತಿದ್ದರು. ಹೆಣ್ಣುಮಕ್ಕಳ ಶೀಲ ಸದ್ದಿಲ್ಲದೇ ಅಪಹರಣವಾಗುತ್ತಿದ್ದಿತು. ಆದರೂ ಯಾರಿಗೂ

ದೊಡ್ಡ ಮಂದಿಯನ್ನು ಎದುರಿಸುವ ಧೈರ್ಯವಿಲ್ಲದೆ ನರಸತ್ತ ಮಂದಿಯಂತೆ ಬಾಳುತ್ತಿದ್ದರು. ಆದರೆ ಇಲ್ಲಿ ಎಚ್ಚೆತ್ತ ದಲಿತನಂತೆ ಚಿತ್ರಿತವಾಗಿರುವ 'ಪಕೀರಪ್ಪ' ತನ್ನ ಹಕ್ಕಿಗಾಗಿ ಹೋರಾಡುವುದಲ್ಲದೇ, ತನ್ನ ಮಂದಿಯಲ್ಲಿಯೂ ಎಚ್ಚರವನ್ನು ಮೂಡಿಸಲು ಪ್ರಯತ್ನಿಸಿದ್ದಾನೆ. 'ನಮ್ಮ ಹೆಂಡತಿಯರನ್ನು ಬಯಸುವ ಸೊಕ್ಕಿನ ಮಂದಿಗೆ ಪಾಠ ಕಲಿಸಬೇಕೆಂದರೆ ಅವರ ಹೆಂಡತಿಯರನ್ನು ನಾವು ಬಯಸಬೇಕೆಂದು ಹೇಳುತ್ತಾನೆ.' ವಿವೇಚನಾ ಶಕ್ತಿಯನ್ನು ಮೈಗೂಡಿಸಿಕೊಂಡಿರುವ ಈತ ಮೇಲ್ವರ್ಗದವರ ಹುನ್ನಾರಕ್ಕೆ ಬಲಿಯಾಗದೇ ಸ್ವತಂತ್ರವಾಗಿ ಬದುಕುವ ಪ್ರಯತ್ನ ಮಾಡುತ್ತಾನೆ. ದಲಿತ ಮಂದಿಯು ಬಲಿಯಾಗದಂತೆ ಅವರಲ್ಲಿ ಅರಿವು ಮೂಡಿಸಲು ಪ್ರಯತ್ನಿಸಿ ಸಾಧ್ಯವಾಗದಿದ್ದಾಗ ತನ್ನ ಮಂದಿಯನ್ನೇ ಬೈದುಕೊಂಡು ಸುಮ್ಮನಾಗುತ್ತಾನೆ. ಆದರೆ ಈತನ ಮಗಳು ಲಚ್ಚಿ ತನ್ನ ತಂದೆಯಂತೆ ವಿವೇಚನಾಶಕ್ತಿ ಮತ್ತು ಪ್ರತಿಭಟನಾ ಸಾಮರ್ಥ್ಯ ಬೆಳೆಸಿಕೊಂಡಿದ್ದರೆ ಅವಳ ಬದುಕು ದುರಂತದಲ್ಲಿ ಮುಳುಗುತ್ತಿರಲಿಲ್ಲ. ಈಕೆಯು ಮೊದಲು ಕುಲಕರ್ಣಿಯನ್ನು ಪ್ರತಿಭಟಿಸಿ ನಿಲ್ಲುತ್ತಾಳೆ. ಅನಂತರ ಎದುರಾಗುವ ಎಲ್ಲ ಸ್ಥಿತಿಗಳಲ್ಲಿಯೂ ಮೂಕವಾಗಿ ಪಶುವಿನಂತೆ ಬಲಿಯಾಗುವ ಕ್ರಮ ದಲಿತರ ಬದುಕಿನ ಅಸಹಾಯಕತೆಯನ್ನು ಲೇಖಕಿ ಇಲ್ಲಿ ವಾಸ್ತವದ ನೆಲೆಯಲ್ಲಿ ಅನಾವರಣಗೊಳಿಸಿದ್ದಾರೆ.

ಈ ಮೇಲೆ ನೋಡಿದಂತೆ ಗೀತಾ ನಾಗಭೂಷಣರ ಕಾದಂಬರಿಗಳು ಬಂಡಾಯದ ತಾತ್ವಿಕ ನೆಲೆಯಿಂದ ಮೂಡಿಬಂದಿದ್ದು, ಸಾಮಾಜಿಕವಾಗಿ ಅಸಮಾನತೆಗೆ ಕಾರಣವಾದ ಜಾತಿಪದ್ಧತಿಯ ಬಗ್ಗೆ ತೀವ್ರ ಪ್ರತಿರೋಧಗಳು ವ್ಯಕ್ತವಾಗಿವೆ. ಹಾಗೆಯೇ ದಲಿರು, ಹಿಂದುಳಿದವರು ಹಾಗೂ ಅಸ್ಪೃಶ್ಯರನ್ನು ಹಾಗೂ ಅವರ ಹೆಣ್ಣುಗಳನ್ನು ಹೀನಾಯವಾಗಿ ನಡೆಸಿಕೊಳ್ಳುವ ಜಮೀನ್ದಾರರ ವಿಕೃತಿಗಳನ್ನು ಲೇಖಕಿಯು ಎಳೆಎಳೆಯಾಗಿ ತೆರೆದಿಡುವ ಪ್ರಯತ್ನಕ್ಕೆ ಮುಂದಾಗಿರುವುದು ಕಂಡುಬರುತ್ತದೆ. ಲೇಖಕಿಯು ಪ್ರಮುಖವಾಗಿ ಸ್ತ್ರೀ ಕೇಂದ್ರಿತ ನೆಲೆಯಲ್ಲಿಯೇ ಜಾತಿಪದ್ಧತಿಯ ಕರಾಳ ಸ್ವರೂಪವನ್ನು ಅನಾವರಣಗೊಳಿಸಿರುವುದನ್ನು ಕಾಣಬಹುದಾಗಿದೆ.

**ಹಸಿವು**

ಈ ಕಾದಂಬರಿಯಲ್ಲಿ ದಮನಿತ ಸಮುದಾಯಗಳ ಮುಂದಿನ ಹಸಿವಿನ ಸೂಕ್ಷ್ಮತೆಗಳನ್ನು ಅಭಿವ್ಯಕ್ತಿಸಲಾಗಿದೆ. 'ಹಸಿಮಾಂಸ ಮತ್ತು ಹದ್ದುಗಳು' ಎಂಬ ಶೀರ್ಷಿಕೆಯೇ ಉನ್ನತ ವರ್ಗಗಳು ತಳವರ್ಗಗಳ ಮೇಲೆ ನಡೆಸುವ ಕ್ರೌರ್ಯವನ್ನು ಹಾಗೂ ದಮನಿತ ಸಮುದಾಯಗಳನ್ನು ಕಿತ್ತು ತಿನ್ನುವ ಪರಿಕ್ರಮವನ್ನು ಬಂಡಾಯದ ನೆಲೆಯಲ್ಲಿ ಎತ್ತಿಹಿಡಿಯುತ್ತದೆ. ಇಲ್ಲಿ ಪ್ರಮುಖವಾಗಿ ಗೌಡ, ಕುಲಕರ್ಣಿಯಂತಹ ವರ್ಗಗಳ ಕಾಮದ ಹಸಿವಿಗೆ ತಳಸಮುದಾಯಗಳ ಹೆಣ್ಣುಮಕ್ಕಳು ಬಲಿಯಾಗುತ್ತಿರುವ ವಿಕೃತ ಸ್ಥಿತಿಯನ್ನು ಲೇಖಕಿಯು ಪ್ರತಿಭಟನಾತ್ಮಕ ನೆಲೆಯಲ್ಲಿ ಕಟ್ಟಿಕೊಡುವ ಪ್ರಯತ್ನಕ್ಕೆ ಮುಂದಾಗಿದ್ದಾರೆ. ಇಲ್ಲಿನ ಪಕೀರಪ್ಪನವರಂತಹ ಜಾಗೃತ ಮನಸ್ಸಿನ ವ್ಯಕ್ತಿಗಳು ಇಂತಹ ಕ್ರೌರ್ಯಗಳ ವಿರುದ್ಧ ಪ್ರಬಲವಾದ ಹೋರಾಟಕ್ಕೆ ಮುಂದಾಗಿ ತಮ್ಮ ಬದುಕಿನ ಅಸ್ತಿತ್ವವನ್ನು ಕಳೆದುಕೊಳ್ಳುವ ಬಗೆಯನ್ನು ಇಲ್ಲಿ ನಿರೂಪಿಸಲಾಗಿದೆ. ಇಲ್ಲಿನ ಗೌಡ, ಕುಲಕರ್ಣಿಯರದು ಕಾಮದ ಹಸಿವಾದರೆ, ಪಕೀರಪ್ಪನಂತವರದು ಸ್ವಾಭಿಮಾನದ ಹಸಿವಾಗಿ ಮೂಡಿಬಂದಿದೆ.

**ಜಮೀನ್ದಾರಿ ಪದ್ಧತಿ**

'ಹಸಿಮಾಂಸ ಮತ್ತು ಹದ್ದುಗಳು' ಕಾದಂಬರಿಯಲ್ಲಿ ಜಮೀನ್ದಾರಿ ವ್ಯವಸ್ಥೆಯು ದಲಿತರನ್ನು ದುಡಿಮೆಯ ನೆಲೆಯಲ್ಲಿ ಶೋಷಣೆಗೆ ಒಳಪಡಿಸುವುದು ಮಾತ್ರವಲ್ಲದೆ, ದಲಿತ ಹಾಗೂ ದಮನಿತ ವರ್ಗಗಳ ಹೆಣ್ಣುಮಕ್ಕಳನ್ನು ತಮ್ಮ ಭೋಗದ ವಸ್ತುಗಳಂತೆ ಬಳಸಿಕೊಂಡು ನಡೆಸುವ ಹಲ್ಲೆ, ಅತ್ಯಾಚಾರಗಳನ್ನು ಪ್ರತಿರೋಧದ ನೆಲೆಯಲ್ಲಿ ಕಟ್ಟಿಕೊಡುತ್ತದೆ. ಈ ಕಾದಂಬರಿಯಲ್ಲಿ ಗೌಡ,

ಕುಲ್ಕರ್ಣಿಯರ ದೌರ್ಜನ್ಯ, ದಲಿತ ಹೆಣ್ಣು ಗಂಡುಗಳ ಬವಣೆ ಹಾಗೂ ಹಳ್ಳಿಯ ಪಂಚರ ಬಗ್ಗೆ ವಿವರಣೆಯಿದೆ. ಭೀಮಳ್ಳಿಯ ದೊಡ್ಡ ಮಂದಿ ಅಂದರೆ ಜಮೀನ್ದಾರರ ಹೀನ ಕೃತ್ಯಗಳನ್ನು ಲೇಖಕಿ ಬಂಡಾಯದ ನೆಲೆಯಲ್ಲಿ ಬಿತ್ತರಿಸಿದ್ದಾರೆ. ಇಲ್ಲಿನ 'ಪಕೀರಪ್ಪ' ದಲಿತರ ಜಾಗೃತ ಪ್ರಜ್ಞೆಯ ಪ್ರತೀಕವಾಗಿ ನಿಲ್ಲುತ್ತಾನೆ. 'ನಮ್ಮ ಹೆಂಡತಿಯರನ್ನು ಬಯಸುವ ಸೊಕ್ಕಿನ ಮಂದಿಗೆ ಪಾಠ ಕಲಿಸಬೇಕೆಂದರೆ ಅವರ ಹೆಂಡತಿಯರನ್ನು ನಾವು ಬಯಸಬೇಕು' ಎನ್ನುವ ಇವನ ಬಂಡಾಯದ ದನಿಯು ಲೇಖಕಿಯ ಬಂಡಾಯದ ಗುಣವನ್ನು ಪ್ರತಿನಿಧಿಸುತ್ತದೆ.

**ನೋವು**

'ಹಸಿಮಾಂಸ ಮತ್ತು ಹದ್ದುಗಳು' ಕಾದಂಬರಿಯಲ್ಲಿಯೂ ಹೆಣ್ಣಿನ ನೋವನ್ನು ಅನಾವರಣಗೊಳಿಸುವ ಅಂಶಗಳು ವ್ಯಕ್ತವಾಗಿವೆ. ಪ್ರಸ್ತುತ ಕಾದಂಬರಿಯಲ್ಲಿ ಲೇಖಕಿಯು ದಲಿತ ಹೆಣುಮಕ್ಕಳು ಜಮೀನ್ದಾರು ಹಾಗೂ ಪುರೋಹಿತಶಾಹಿ ವರ್ಗಗಳಿಂದ ಅನುಭವಿಸುವ ನೋವು, ಅಪಮಾನಗಳನ್ನು ತೆರೆದಿಟ್ಟಿದ್ದಾರೆ ಭೀಮಳ್ಳಿಯ ದಲಿತ ಜನರು ಆಧುನಿಕತೆಯ ಸೋಂಕಿಗೆ ಒಳಗಾಗುತ್ತಿದ್ದರೂ ಇನ್ನೂ ಉನ್ನತ ವರ್ಗಗಳ ಶೋಷಣೆಯಿಂದ ಹೊರಬಂದಿರಲಿಲ್ಲ. ಹೀಗಾಗಿ ಇಲ್ಲಿನ ದೊಡ್ಡ ಮಂದಿ ದಲಿತ ಹೆಣ್ಣು ಗಂಡುಗಳನ್ನು ಜೀತದಾಳಾಗಿಸಿಕೊಂಡು ದುಡಿಸಿಕೊಳ್ಳುತ್ತಿದ್ದರಲ್ಲದೆ ಅವರನ್ನು ದೈಹಿಕವಾಗಿಯೂ ಶೋಷಿಸುತ್ತಿದ್ದರು ಎಂಬುದನ್ನು ಲೇಖಕಿಯು ಪಾತ್ರಗಳ ಮೂಲಕ ಚಿತ್ರಿಸಿದ್ದಾರೆ. ಹಾಗೆಯೇ ಹೆಣ್ಣುಮಕ್ಕಳ ಶೀಲ ಸದ್ದಿಲ್ಲದೇ ಅಪಹರಣವಾಗುತ್ತಿರುವ ಬಗೆಯನ್ನು ಪ್ರತಿರೋಧದ ನೆಲೆಯಲ್ಲಿ ಅಭಿವ್ಯಕ್ತಿಸಿದ್ದಾರೆ. ಇವರ ಎಲ್ಲಾ ಕೃತಿಗಳು ಸ್ತ್ರೀ ಸಂಕಷ್ಟಗಳನ್ನು ತೆರೆದಿಡುತ್ತವೆ. ಅದರಲ್ಲೂ ವಿಶೇವಾಗಿ ಇವರ ತುಡಿತ ದಲಿತ ವರ್ಗದ ಹೆಣ್ಣಿನ ಸುತ್ತ ಅಭಿವ್ಯಕ್ತವಾಗಿರುವುದು ಇವರ ಬರಹದ ಮತ್ತೊಂದು ವಿಶೇಷವಾಗಿ ಕಂಡುಬರುತ್ತದೆ.

**ಬಡತನ**

ಗೀತಾ ಅವರ ಬಹುತೇಕ ಬರಹಗಳು ದಲಿತರು, ಹಿಂದುಳಿದ ವರ್ಗಗಳು ಬಡವರು ಮತ್ತು ಮಹಿಳೆಯರು ತಮ್ಮ ಬಡತನ ಕಾರಣದಿಂದ ಉನ್ನತ ವರ್ಗಗಳಿಂದ ಶೋಷಣೆಗೆ ಒಳಗಾಗುವ ವಿಧಾನವನ್ನು ಎತ್ತಿಹಿಡಿಯುತ್ತವೆ. ಪ್ರಸ್ತುತ ಕಾದಂಬರಿಯಲ್ಲಿ ತಮ್ಮ ಬಡತನದ ಕಾರಣದಿಂದ ಶ್ರಿಮಂತ ವರ್ಗಗಳಿಂದ ಶೋಷಣೆಗೆ ಒಳಗಾಗುವ ದಮನಿತ ವರ್ಗಗಳ ಸ್ತ್ರೀಯರ ಬಗ್ಗೆ ಲೇಖಕಿಯ ಅಭಿವ್ಯಕ್ತಿ ಹೀಗಿದೆ: 'ಹದಗೋಳ ಕಣ್ಣಿಂದ ಕೋಳಿ ಮರೀಗ ಕಾಯಂಗ' ಎಂಬ ಒಂದು ಮಾತು ಬರುತ್ತದೆ. ಇದು ತಳಸಮುದಾಯದ ಹೆಣ್ಣುಮಕ್ಕಳ ಸ್ಥಿತಿಯನ್ನು ಅನಾವರಣಗೊಳಿಸುತ್ತದೆ. ಇದೇ ರೀತಿಯಾಗಿ ಬಡವರ್ಗಗಳು ನಿರಂತರವಾಗಿ ಜಮೀನ್ದಾರರು, ಬಂಡವಾಳಶಾಹಿಗಳಿಂದ ಶೋಷಣೆಗೆ ಒಳಗಾಗುವ ವಿಧಾನವನ್ನು ಎತ್ತಿಹಿಡಿಯುತ್ತದೆ.ಇಲ್ಲಿ ಸ್ತ್ರೀಯರ ಶೊಷನೆಗೆ ಪುರುಷನಷ್ಟೇ ಕಾರಣವಾಗಿರದೆ ಜಾತಿ, ವರ್ಗ, ಸಮಾಜ, ಒಟ್ಟಾರೆ ವ್ಯವಸ್ಥೆ, ಅದರಲ್ಲಿನ ಆರ್ಥಿಕ ಅಸಮಾನತೆ, ನಿರುದ್ಯೋಗ, ಬಂಡವಾಳಶಾಹಿ ಪದ್ಧತಿಗಳು ಕಾರಣವಾಗಿವೆಯೆಂಬುದನ್ನು ಗೀತಾ ಮತ್ತೆ ಮತ್ತೆ ಎಚ್ಚರಿಸುತ್ತಾರೆ. ಸಮಾನತೆಯುಳ್ಳ ಆದರ್ಶ ರಾಜ್ಯ ನಿಮಾಣವಾದ ಕೂಡಲೇ ತನ್ನಿಂದ ತಾನೇ ದಲಿತ ಮಹಿಳಾ ಶೋಷಣೆ ಕೊನೆಗೊಳ್ಳುತ್ತದೆ ಎಂಬುದು ಅವರ ಆಶಾವಾದ.

**ಸ್ತ್ರೀ ಸಂವೇದನೆ**

ಗೀತಾ ನಾಗಭೂಷಣ ಅವರಲ್ಲಿ ಸ್ತ್ರೀ ಸಂವೇದನೆ ಹೆಚ್ಚುದಂತೆಲ್ಲ ಅವರು ಸಮಾಜವನ್ನು ಕಾಣುವ ದೃಷ್ಟಿಯು ಚುರುಕಾಗುತ್ತದೆ. ಮಹಿಳೆಯನ್ನು ಶೋಷಿಸಲು ಸಮಾಜ ಹೂಡುವ ತಂತ್ರಗಳತ್ತ ಇವರು ಮುಖ್ಯವಾಗಿ ಗಮನ ಹರಿಸುತ್ತಾರೆ. ಮಹಿಳೆಯರು ಸಂಸಾರಕ್ಕೆ ಹೆಚ್ಚು ಭಾದ್ಯರು, ಅವರಿಗೆ ದೈಹಿಕ ದೌರ್ಬಲ್ಯಗಳಿವೆ, ಮಾನಸಿಕ ತೊಡಕುಗಳಿವೆ ಎನ್ನುವುದನ್ನು ಎಷ್ಟೇ ನಿರ್ವಿಕಾರವಾಗಿ

ಒಪ್ಪಿಕೊಂಡರೂ ಕಾದಂಬರಿ ಪಾತ್ರಗಳು ಸಿಡಿದೇಳುವ ರೀತಿ ಆಶಾದಾಯಕವಾದದ್ದು. ನಿಷ್ಠಾವಂತ ಪ್ರೇಮಿಗಳಂತೆ ಸೋಗುಹಾಕುವ ಗಂಡಸರ ದುರ್ಬುದ್ಧಿ ಬಹುತೇಕ ಕಾದಂಬರಿಗಳಲ್ಲಿ ಅಸಯ್ಯ ತರಿಸುವಷ್ಟು ಪರಿಣಾಮಕಾರಿಯಾಗಿ ಮೂಡಿಬಂದಿವೆ. ದುಃಖ, ಸಂಕಟ, ಸಾವು ನೋವು, ಇವೆಲ್ಲ ಹೆಣ್ಣಿನ ಬದುಕಿನ ಅವಿಭಾಜ್ಯ ಅಂಗದಂತೆ ಈ ವ್ಯವಸ್ಥೆ ಬಿಂಬಿಸುತ್ತದೆ. ಶಿಕ್ಷಣ ಮಾತ್ರ ಮಹಿಳೆಯರ ಪಾಲಿಗೆ ಬಿಡುಗಡೆಯ ರಹದಾರಿಯಾಗಿ ತೆರೆದುಕೊಳ್ಳುವುದನ್ನು ಇವರ ಕಾದಂಬರಿಗಳು ಪ್ರತಿನಿಧಿಸುತ್ತವೆ. ಗೀತಾ ಅವರ ಹಸಿಮಾಂಸ ಮತ್ತು ಹದ್ದುಗಳು ಕಾದಂಬರಿಯಲ್ಲಿ ಈ ಮೇಲಿನ ಸಾಂಸ್ಕೃತಿಕ ನೆಲೆಗಳನ್ನು ಗುರುತಿಸಲಾಗಿದೆ.

**ಪರಾಮರ್ಶನ ಗ್ರಂಥಗಳು**


- ಚಂದ್ರಶೇಖರ.ಎ.ಎಚ್. (2004). *ಕನ್ನಡದಲ್ಲಿ ದಲಿತ ಬಂಡಾಯ ಕಾದಂಬರಿಗಳ ಒಂದು ಅಧ್ಯಯನ.* ಮೈಸೂರು ವಿಶ್ವವಿದ್ಯಾಲಯ.
- ಪುರುಷೋತ್ತಮ ಬಿಳಿಮಲೆ. (1990). *ದಲಿತ ಬಂಡಾಯ ಸಾಹಿತ್ಯ.* ಕರ್ನಾಟಕ ಸಾಹಿತ್ಯ ಅಕಾಡೆಮಿ.
- ಸರಜೂ ಕಾಟ್ಕರ್. (ಸಂ.). (2012). *ಬಂಡಾಯ ಸಾಹಿತ್ಯ.* ಕನ್ನಡ ಸಾಹಿತ್ಯ ಅಕಾಡೆಮಿ.
- ಸಿದ್ಧಲಿಂಗಯ್ಯ, ಜಿ.ಎಚ್. ಮತ್ತು ಎಂ.ಎಚ್.ಕೃಷ್ಣಯ್ಯ. *ಸಾಲುದೀಪಗಳು.* ಕರ್ನಾಟಕ ಸಾಹಿತ್ಯ ಅಕಾಡೆಮಿ.
- ಸುರೇಶ ಪಾಟೀಲ. (2008). *ಕನ್ನಡ ಕಾದಂಬರಿಗಳಲ್ಲಿ ರಾಜಕೀಯ ವಸ್ತು ವಿನ್ಯಾಸ.* ಕನ್ನಡ ಸಾಹಿತ್ಯ ಪರಿಷತ್ತು.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 134-139
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಪ್ರಗತಿಶೀಲ ಸಾಹಿತ್ಯ ಸಂಶೋಧನೆ ಹೊಸ ಸಾಧ್ಯತೆಗಳು

**ಡಾ. ಗಿರೀಶ ದೇಸೂರ**
ಕನ್ನಡ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಧಾರವಾಡ ತಾಲೂಕು ಮತ್ತು ಜಿಲ್ಲೆ.

***Abstract:***
*ಒಂಭತ್ತನೆಯ ಶತಮಾನದಿಂದ ಇಂದಿನವರೆಗೂ ಅವ್ಯಾಹತವಾಗಿ ಪ್ರವಹಿಸಿದ ಕನ್ನಡ ಸಾಹಿತ್ಯ ವಾಹಿನಿಯು ಕಾಲಕಾಲಕ್ಕೆ ಹೊಸ ಆಳ, ವಿಸ್ತಾರಗಳನ್ನು ಪಡೆಯುತ್ತಾ ಬಂದಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ 20ನೇ ಶತಮಾನದ ಸಾಹಿತ್ಯ ಕೃತಿಗಳು ತಮ್ಮ ಅಂತಃಸತ್ವ, ಆಧುನಿಕ ಮನೋಧರ್ಮ ಹಾಗೂ ಪ್ರಯೋಗಶೀಲ ಗುಣಗಳಿಂದ ಕ್ರಾಂತಿಯ ಕಹಳೆ ಊದಿವೆ. ಪ್ರಸ್ತುತ ಲೇನದಲ್ಲಿ ಪ್ರಗತಿಶೀಲ ಸಾಹಿತ್ಯ ಸಂಶೋಧನೆ ಹೊಸ ಸಾಧ್ಯತೆಗಳ ಕುರಿತು ಚರ್ಚಿಸಲಾಗಿದೆ.*

***Keywords:*** *ಕನ್ನಡ ಸಾಹಿತ್ಯ ಚರಿತ್ರೆ, ಪ್ರಗತಿಶೀಲ ಸಾಹಿತ್ಯ, ಸಂಶೋಧನಾ ಸಾಧ್ಯತೆಗಳು.*

**ಪೀಠಿಕೆ**

ಪ್ರಗತಿಶೀಲ ಸಾಹಿತ್ಯ ಚಳವಳಿಯ ಕಾಲ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅತ್ಯಂತ ಚಲನಶೀಲವಾದ ಸಂದರ್ಭ. ಸಾಹಿತ್ಯವನ್ನು ಸಾಮಾಜಿಕ ಬದಲಾವಣೆಯ ಉದ್ದೇಶದ ಪ್ರಭಾವಶಾಲಿ ಉಪಕರಣವೆಂದು, ಮಾಧ್ಯಮವೆಂದು ಪ್ರಗತಿಶೀಲ ಲೇಖಕರು ನಂಬಿದ್ದರು. ಸಾಹಿತಿಯು ವ್ಯಕ್ತಿಕೇಂದ್ರಿತ ಆತ್ಮೋಲ್ಲಾಸಪರತೆಯಲ್ಲಿ ಮಗ್ನನಾಗಿ ಸಾಮಾಜಿಕ ಹೊಣೆಗಾರಿಕೆಯನ್ನು ಮರೆತಂಥ ಸಂದರ್ಭದಲ್ಲಿ 'ಪ್ರಗತಿಶೀಲ ಸಾಹಿತ್ಯ' ಎಂಬ ಹೊಸ ಸಾಹಿತ್ಯಿಕ ಚಳುವಳಿಯು ಸಾಹಿತ್ಯ ವಾಸ್ತವಕ್ಕೆ ಸ್ಪಂದಿಸಬೇಕೆಂಬ ಆಶಯದಿಂದ ಪ್ರೇರಿತವಾಗಿ ಸಾಹಿತ್ಯ ರಚನೆಯಲ್ಲಿ ತೊಡಗಿತು. 'ಸಾಹಿತ್ಯ ಪಂಡಿತರ ವಿವಿಧ ಕಳಾಮಂಡಿತರ ಸ್ವತ್ತೆಂಬ ಭಾವನೆ ದೇಶದ ಸರ್ವತೋಮುಖ ಪ್ರಗತಿಗೆ ಹಾನಿಕಾರಕವಾದುದೆಂಬ ಸತ್ಯ ನಿತ್ಯವಾಗುತ್ತಿದೆ. ಸಾಹಿತಿಯ ಧ್ಯೇಯ ಆತ್ಮೋಲ್ಲಾಸಪರತೆಯಲ್ಲ, ಸ್ವಪ್ರತಿಷ್ಠಾ ಪ್ರಸಾರವೂ ಅಲ್ಲ. ಅವನು ದೇಶವನ್ನು ಕಟ್ಟುವ ಶಿಲ್ಪಿಗಳಲ್ಲಿ ಒಬ್ಬ. ಅವನ ಮಹಾಯುಧ ಲೇಖನಿ. ಅದರ ಪ್ರಭಾವದಿಂದ ಅವನು ಸತ್ತವರನ್ನು ಬದುಕಿಸಬಲ್ಲ; ಬದುಕಿದವರನ್ನು ಸಾಯಿಸಬಲ್ಲ, ಲೇಖಕನ ಬಾಳು ಸ್ವಾತಂತ್ರ್ಯ, ನಿರ್ಭೀತಿ ವಿಚಾರಗಳಿಂದ ಹುರಿಗೊಂಡು ನಾಡಿಗೆ ಮಾದರಿಯಾಗಬೇಕು. ಮಾನವ ಕಲ್ಯಾಣ ಸಾಧನೆ ಅವನ ಗುರಿಯಾಗಬೇಕು. ಅಂದಾಗಲೇ ಅವನ ಕೃತಿ ಜೀವಂತವಾದ ಕೃತಿಯಾಗುತ್ತದೆ' ಎಂಬುದು ಪ್ರಗತೀಶೀಲರ ಅಭಿಪ್ರಾಯ.

**ಪ್ರಗತಿಶೀಲ ಸಾಹಿತ್ಯ ಸಂಶೋಧನೆಯ ಹೊಸ ಸಾಧ್ಯತೆಗಳು**

ಸಮಾಜದ ಬಾಹ್ಯ ಆಚಾರ ವಿಚಾರಗಳೆಲ್ಲ ಬೂಟಾಟಿಕೆಯವು. ಹೊರಗೆ ಸೌಜನ್ಯ, ಸಭ್ಯತೆಯ ಹೆಸರಿನಲ್ಲಿ ಕಾಣಿಸಿಕೊಳ್ಳುವ ಮುಖ ಸುಳ್ಳು, ಅವುಗಳನ್ನು ಬಯಲಿಗೆಳೆಯುವುದರಿಂದ ಸಮಾಜದ ಕ್ರೂರ ನಿಜರೂಪದ ದರ್ಶನವಾಗುತ್ತದೆ. ಸಮಾಜದ

***Please cite this article as:*** ಗಿರೀಶ ದೇಸೂರ. (2024). ಪ್ರಗತಿಶೀಲ ಸಾಹಿತ್ಯ ಸಂಶೋಧನೆ ಹೊಸ ಸಾಧ್ಯತೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 3(3), 134–139

ಆರ್ಥಿಕ, ನೈತಿಕ, ಮತ್ತು ಇತರ ವಾಸ್ತವಗಳು ದೀನ, ದಲಿತ ವ್ಯಕ್ತಿಯನ್ನು ಅಥವಾ ಸಮೂಹವನ್ನು ಮಾನವೀಯವಾಗಿ ಕಾಣದೆ ಕ್ರೂರವಾಗಿ ಕಾಣುವಂತೆ ಇವೆ. ಈ ಕ್ರೌರ್ಯದ ಒತ್ತಡ ತಾಳಲಾರದ ದೀನದಲಿತರು, ಅವರ ನಂಬಿಕೆಗಳು, ಆದರ್ಶಗಳು ಅದರಡಿಯಲ್ಲಿ ಸಿಕ್ಕಿ ನುಚ್ಚು ನೂರಾಗುತ್ತವೆ. ಸಾಮಾಜಿಕ ನ್ಯಾಯ ದೊರೆಯಬೇಕಾದರೆ ಸಾಮಾಜಿಕ ವ್ಯವಸ್ಥೆ ಬದಲಾಗಬೇಕು. ಎಂಬುದು ಪ್ರಗತಿಶೀಲರ ಪೂರ್ವಗ್ರಹಿಕೆ.

ಪ್ರಗತಿಶೀಲರ ಬರವಣಿಗೆ ಸಹಜವಾಗಿಯೆ ಇಹದ ಬದುಕಿಗೆ ಅಥವಾ ಸಮಾಜಕ್ಕೆ ಸಂಪೂರ್ಣವಾಗಿ ಬದ್ಧವಾದದ್ದಾಯಿತು. ವಿಚಾರವಾದ ಪ್ರೇರಿತ ಬರವಣಿಗೆ ಕನ್ನಡದಲ್ಲಿ ಪ್ರಗತಿಶೀಲರಿಂದಲೇ ಪ್ರಾರಂಭವಾಯಿತು ಎಂಬುವುದು ಮುಖ್ಯವಾದ ವಿಚಾರ.

ಕನ್ನಡ ಕಾದಂಬರಿಲೋಕ ಸತ್ವದಲ್ಲಿ, ಸಮೃದ್ಧಿಯಲ್ಲಿ ಬೆರಗುಹುಟ್ಟಿಸುವಂತಿದೆ. ಸಾಮಾಜಿಕ ಕಳಕಳಿಯನ್ನು, ಸ್ಪಂದನವನ್ನು ಪ್ರಾರಂಭದಿಂದಲೂ ಅದು ಒಳಗೊಂಡಿದೆ. ಸಮಕಾಲೀನ ಸಮಸ್ಯೆಗಳನ್ನು, ಸಮಷ್ಟಿಯ, ವ್ಯಷ್ಟಿಯ ಬೇಕು ಬೇಡಗಳನ್ನು ಕಾದಂಬರಿಕಾರರು ಗುರುತಿಸಿದ್ದಾರೆ, ಚರ್ಚಿಸಿದ್ದಾರೆ. ಸಮಾಜಶಾಸ್ತ್ರ, ಮಾನವಶಾಸ್ತ್ರಗಳು ಇನ್ನೂ ತಲೆಯೆತ್ತುವ ಹಂತದಲ್ಲಿದ್ದಾಗ ಅವುಗಳ ಜವಾಬ್ದಾರಿಯನ್ನು ಕಾದಂಬರಿಗಳು ನಿರ್ವಹಿಸಿವೆ. ಸಂಸ್ಕೃತಿಯ ಅಧ್ಯಯನದ, ಮಾನವ ಸ್ವಭಾವ–ವರ್ತನೆಗಳ ಅಧ್ಯಯನದ ಮೂಲ ಆಕರಗಳಂತೆ ಅನೇಕ ಕಾದಂಬರಿಗಳು ದಾಖಲೆಗಳಾಗಿವೆ.

ಕನ್ನಡ ಕಾದಂಬರಿ ನವೋದಯ, ಪ್ರಗತಿಶೀಲ, ನವ್ಯ ಹಾಗೂ ನವ್ಯೋತ್ತರ ಕಾಲಖಂಡಗಳಲ್ಲಿ ಹಲವಾರು ವಿಚಾರಧಾರೆಗಳ ಪ್ರಭಾವದಿಂದ ಹಾಗೂ ಹೊಸ ಪ್ರಯೋಗಗಳಿಂದ ಸ್ಥಿತ್ಯಂತರಗಳನ್ನು ಕಂಡರೂ ಅದು ಮುಖ್ಯವಾಗಿ ವಾಸ್ತವವಾದದ ಪರಂಪರೆಯಾಗಿಯೇ ಉಳಿದುಕೊಂಡಿತು ಎನ್ನುವುದು ಮಹತ್ವದ್ದಾಗಿದೆ. ಜಿ.ಎಸ್. ಆಮೂರ ಅವರು ಈ ಪರಂಪರೆಯ ಒಳಗೆ ಎರಡು ಪ್ರವಾಹಗಳನ್ನು ಗುರುತಿಸುತ್ತಾರೆ. ಮೊದಲನೆಯದನ್ನು ಕಾರಂತ ಪರಂಪರೆ ಎಂದು ಕರೆದು ಇದರ ಮುಖ್ಯ ಲಕ್ಷಣ ಅನುಭವ ನಿಷ್ಠತೆ ಹಾಗೂ ಪ್ರಯೋಗಪ್ರಿಯತೆ ಎಂದು ಹೇಳುತ್ತಾರೆ. ಎರಡನೆಯದನ್ನು ಅ.ನ.ಕೃ.ರವರ ಹೆಸರಿಗೆ ಜೋಡಿಸುತ್ತಾರೆ. ಇದರ ಮುಖ್ಯ ಲಕ್ಷಣ ಸಮಸ್ಯಾ ನಿಷ್ಠತೆ ಹಾಗೂ ರೀತಿ ಪ್ರಾಧಾನ್ಯತೆ ಎಂದು ಹೇಳುತ್ತಾರೆ. “ಎರಡೂ ಪ್ರವಾಹಗಳ ಉಗಮವನ್ನು ವಾಸ್ತವವಾದದಲ್ಲಿಯೇ ಕಾಣಬಹುದಾದರೂ ಅವುಗಳ ಸ್ವರೂಪ, ಅವು ಸೃಷ್ಟಿಸುವ ಆಕೃತಿಗಳು, ವಾಸ್ತವವನ್ನು ಅವು ಗ್ರಹಿಸುವ ವಿಧಾನಗಳು ಇವುಗಳಲ್ಲಿ ಭಿನ್ನತೆಯಿದೆ. ಕನ್ನಡದ ಪ್ರಮುಖ ಕಾದಂಬರಿಕಾರರಾದ ರಾವ್ ಬಹದ್ದೂರ್, ಅನಂತಮೂರ್ತಿ, ಚಿತ್ತಾಲ, ತೇಜಸ್ವೀ, ಲಂಕೇಶ್, ದೇವನೂರರು ಒಂದಿಲ್ಲೊಂದು ರೀತಿಯಿಂದ ಕಾರಂತ ಪರಂಪರೆಗೆ ಸಂಬಂಧ ಹೊಂದಿದವರಾದರೆ, ನಿರಂಜನ, ಚದುರಂಗ, ಕಟ್ಟೀಮನಿ, ಬಲ್ಲಾಳ, ಭೈರಪ್ಪ ಮೊದಲಾದವರು ಅ.ನ.ಕೃ ಪರಂಪರೆಯನ್ನೇ ಮುಂದುವರೆಸಿದ್ದಾರೆ ಎಂದು ಹೇಳಬಹುದು.”[1]

ಕನ್ನಡ ಕಾದಂಬರಿಯ ಕ್ಷೇತ್ರದಲ್ಲಿ ಪ್ರಕೃತಿ–ಸಂಸ್ಕೃತಿ ಸಂವಾದ ಸಾಮಾನ್ಯವಾಗಿ ಎಲ್ಲ ಪ್ರಮುಖ ಕಾದಂಬರಿಕಾರರಲ್ಲಿಯೂ ಕಾಣಿಸಿಕೊಂಡಿದೆ. ಕುವೆಂಪು, ಕಾರಂತ, ಅನಂತಮೂರ್ತಿ, ತೇಜಸ್ವೀ, ಲಂಕೇಶ್, ದೇವನೂರು ಮಹಾದೇವ ಮೊದಲಾದವರಲ್ಲಿ ಸಂಸ್ಕೃತಿಯ ಸಂವಾದ ಕಾಣಿಸಿಕೊಂಡಿದೆ ಎಂದು ಹೇಳುತ್ತಾ ಜಿ.ಎಸ್.ಆಮೂರ ಅವರು “ಈ ಚರ್ಚೆಯನ್ನು ಉಳಿದ ಕಾದಂಬರಿಕಾರರ ಕೃತಿಗಳಿಗೂ ಮುದುವರಿಸಬಹುದು”[2] ಎಂದು ಹೇಳುತ್ತಾರೆ.

ಈ ಹಿನ್ನೆಲೆಯಲ್ಲಿ ಈ ‘ಸಂಸ್ಕೃತಿ ಸಂವಾದ’ ಪ್ರಗತಿಶೀಲ ಲೇಖಕರ ಕೃತಿಗಳಲ್ಲಿ ಹೇಗೆ

---

1. ಆಮೂರ, ಜಿ. ಎಸ್. (1994). *ಕನ್ನಡ ಕಥನ ಸಾಹಿತ್ಯ: ಕಾದಂಬರಿ.* ಪುಟ. 464
2. ಅದೇ, ಪುಟ. 469

ಕಾಣಿಸಿಕೊಂಡಿದೆ ಎಂಬುವುದನ್ನು ಅಧ್ಯಯನಕ್ಕೊಳಪಡಿಸಲು ಅವಕಾಶವಿದೆ. ಪ್ರಗತಿಶೀಲ ಚಳವಳಿ ರಾಜಕೀಯ, ಸಾಮಾಜಿಕ, ಆರ್ಥಿಕ ಮೂಲಚಿಂತನೆಯ ನೆಲೆಯಿಂದ ಹುಟ್ಟಿದ್ದಾಗಿತ್ತು. ಸಾಹಿತ್ಯ ತತ್ವದ ಮೂಲದಿಂದ ಹುಟ್ಟಿದ್ದಾಗಿರಲಿಲ್ಲ. ಸಾಹಿತ್ಯವನ್ನು ಸಾಮಾಜಿಕ ಬದಲಾವಣೆಯ ಉದ್ದೇಶದ ಈಡೇರಿಕೆಗಾಗಿ ಪ್ರಭಾವಶಾಲಿ ಉಪಕರಣವೆಂದು, ಮಾಧ್ಯಮವೆಂದು ಅವರು ಬಳಸಿದರು. ಆದ್ದರಿಂದ ಸಮಗ್ರವಾದ ಹೊಸ ಸಾಹಿತ್ಯ ಸಿದ್ಧಾಂತದ ಅಗತ್ಯ ಅವರಿಗೆ ಕಾಣಿಸಲಿಲ್ಲ. ಸಿದ್ಧ ಸಾಹಿತ್ಯ ಪ್ರಕಾರಗಳನ್ನು ಪರಿಕಲ್ಪನೆಗಳನ್ನು ತಮ್ಮ ಅಗತ್ಯಕ್ಕೆ, ಉದ್ದೇಶಕ್ಕೆ ಅನುಗುಣವಾಗಿ ಬಳಸಿಕೊಂಡರು. ಕಥೆ, ಕಾದಂಬರಿ ಅವರು ಆಯ್ಕೆ ಮಾಡಿಕೊಂಡ ಮುಖ್ಯ ಸಾಹಿತ್ಯ ಪ್ರಕಾರಗಳಾದವು. ಹೊಸ ವಿಚಾರವಾದದ ಮೂಲಕ ಅವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶಿಸಿದರು.

ಭಾರತೀಯ ಸಂಸ್ಕೃತಿಯನ್ನು ಶ್ರೇಣೀಕೃತ ಜಾತಿ ವ್ಯವಸ್ಥೆಯ ಮೇಲು ನೆಲೆಯಲ್ಲಿದ್ದವರ ಕಡೆಯಿಂದ ಅರ್ಥವಿಸಿ ವ್ಯಾಖ್ಯಾನಿಸುವ, ವೈಭವೀಕರಿಸುವ ನವೋದಯ ಕಾಲದ ದೃಷ್ಟಿಯನ್ನು ಪ್ರಗತಿಶೀಲರು ಪ್ರಶ್ನಿಸಿದರು. ಪ್ರಗತಿಶೀಲರಲ್ಲಿ ವರ್ಗದ ನೆಲೆಯಿಂದ, ಶೋಷಿತರ ಹಾಗೂ ಕೆಳನೆಲೆಯವರ ಅನುಭವದ ಕಡೆಯಿಂದ ಸಂಸ್ಕೃತಿ ಮತ್ತು ಸಾಹಿತ್ಯ ಸಂದರ್ಭವನ್ನು ಪುನಾರಚಿಸಿಕೊಳ್ಳುವ ಮನೋಧರ್ಮ ವ್ಯಕ್ತವಾಯಿತು. ಇದು ಮುಂದೆ ಬಂದ ದಲಿತ–ಬಂಡಾಯ ಸಾಹಿತ್ಯಕ್ಕೆ ಹಿನ್ನೆಲೆಯನ್ನು ಒದಗಿಸಿತು. ದಲಿತ–ಬಂಡಾಯದಲ್ಲಿ ಪ್ರಗತಿಶೀಲ ಮತ್ತು ಬರಹಗಾರರ ಒಕ್ಕೂಟದ ಚಿಂತನೆಗಳು ವಿಲೀನವಾಗಿ ಹೊಸ ವ್ಯಾಪ್ತಿ, ಹೊಸ ಆಯಾಮಗಳನ್ನು ಪಡೆದುಕೊಂಡವು. ಹೀಗೆ ಪ್ರಗತಿಶೀಲ ಸಾಹಿತ್ಯವನ್ನು ವಿಭಿನ್ನ ಪರೀಪ್ರೇಕ್ಷ್ಯದಲ್ಲಿ ಅಧ್ಯನಕ್ಕೊಳಪಡಿಸಲು ಅವಕಾಶವಿದೆ.

ಪ್ರಗತಿಶೀಲ ಲೇಖಕರು ಸಾಹಿತ್ಯವನ್ನು ಸಾಮಾನ್ಯ ಜನರ ಓದಿಗೆ ತಲುಪಿಸಿದ ಜನರಿಗೆ ಅರ್ಥವಾಗುವಂತೆ ಬರೆಯುವ ಕಳಕಳಿಯೊಂದಿಗೆ ಜನರಿಗೆ ತಲುಪಿಸಬೇಕಾದದ್ದೇನು ಎಂಬುದರ ಬಗ್ಗೆಯೂ ಅವರಿಗೆ ಖಚಿತ ನಿಲುವುಗಳಿದ್ದವು. ಪ್ರಗತಿಶೀಲ ಲೇಖಕರ ವಿಚಾರಗಳ ಕುರಿತು ನಿಜಕ್ಕೂ ರಚನಾತ್ಮಕ ಚರ್ಚೆ ನಡೆಯಿತೇ ಎಂದು ಈಗ ಮರುಚಿಂತನೆ ಮಾಡಬೇಕಾದ ಅನಿವಾರ್ಯತೆ ಇದೆ. ಈ ಹಿನ್ನೆಲೆಯಲ್ಲಿ ಅವರ ಕೃತಿಗಳನ್ನು ಮರು ಓದಿಗೆ ಒಳಪಡಿಸಿ ಹೊಸ ಒಳನೋಟಗಳನ್ನು ಪಡೆಯಲು ಅವಕಾಶವಿದೆ.

ಪ್ರಗತಿಶೀಲ ಚಳುವಳಿಯ ಮುಖ್ಯ ಬರಹಗಾರರಾದ ಅ.ನ.ಕೃ., ಬಸವರಾಜ ಕಟ್ಟೀಮನಿ, ನಿರಂಜನ, ತರಾಸು, ಚದುರಂಗರ ಕೃತಿಗಳನ್ನು ಈಗ ಓದುವಾಗ, ಅವರು ತಮ್ಮ ಬರಹದ ಸಂದರ್ಭದಲ್ಲಿ ಕಟ್ಟಿಕೊಂಡಿದ್ದ ತಾತ್ವಿಕ ನಿರ್ದೇಶನಗಳನ್ನು ಮೀರಿ ಅವರ ಕೃತಿಗಳು ವಿಭಿನ್ನ ಪರೀಪ್ರೇಕ್ಷ್ಯದಲ್ಲಿ ಗ್ರಹಿಕೆಗೆ ಒಳಗಾದುದನ್ನು ಗಮನಿಸಬಹುದು. ಆ ಕಾಲದ ಹತ್ತು ಹಲವು ಅಪೇಕ್ಷೆಗಳು, ಒಳಸುಳಿಗಳು, ಬದುಕಿನ ಸಮಸ್ಯೆಗಳು ಅವರ ಕೃತಿಗಳಲ್ಲಿ ಅಂತರ್ಜಾಲದಂತೆ ಬಚ್ಚಿಟ್ಟುಕೊಂಡಿರುವುದು ಕುತೂಹಲದ ಸಂಗತಿಯಾಗಿ ನಮ್ಮನ್ನು ಕಾಡುತ್ತದೆ. ಅವೆಲ್ಲವುಗಳನ್ನೂ ಪರಿಶೀಲಿಸಿ, ಪರಿಶೋಧಿಸುವ ಹೊಸ ಸಾಧ್ಯತೆಗಳು ನಮ್ಮ ಮುಂದಿವೆ.

ಪ್ರಗತಿಶೀಲ ಸಾಹಿತ್ಯ ನಮ್ಮ ಸಾಹಿತ್ಯಕ್ಕೆ ಹೊಸ ಆಯಾಮವನ್ನು ತಂದುಕೊಟ್ಟಿತು. ನವೋದಯ ಕಾಲದ ಲೇಖಕರಿಗಿಂತ ಭಿನ್ನವಾಗಿ ಬರೆಯತೊಡಗಿದ ಪ್ರಗತಿಶೀಲರಲ್ಲಿ ವಾಸ್ತವತೆ, ಶೋಷಿತ ಜನಾಂಗದ ಚಿತ್ರಣ ಮಹತ್ವದ ಸ್ಥಾನ ಪಡೆದವು. ಕಲಾತ್ಮಕತೆ ಅವರ ಕಾದಂಬರಿಗಳಲ್ಲಿ ಗೌಣವೆನಿಸಿದರೂ, ಅನುಭವದ ಸರಳೀಕರಣಕ್ಕೆ ಪಕ್ಕಾಗಿದ್ದರೂ ಪ್ರಗತಿಶೀಲ ಧೋರಣೆ ಸಾಧಿಸಿದ್ದು ಕಡಿಮೆ ಎನ್ನುವಂತಿಲ್ಲ. 'ಇಡೀ ಸಮಾಜದ ಚಾರಿತ್ರಿಕ ಸಂದರ್ಭದಲ್ಲಿ ಪ್ರಗತಿಶೀಲ ಸಾಹಿತ್ಯವನ್ನು ತೂಗಿದಾಗ ಅದಕ್ಕೆ ಮೌಲ್ಯ ಬರುತ್ತದೆ. ಮೊದಲನೆಯದಾಗಿ ಅ.ನ.ಕೃ ಮತ್ತು ಅವರ ಪಂಥದವರು ಓದುಗ ವರ್ಗವನ್ನು ಹಿಗ್ಗಿಸಿದರು. ಅಲ್ಲದೆ ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆಗೆ ಮಹತ್ವ

ಬಂದಿತು. ಸಮಾಜದ ಸಮಸ್ಯೆಗಳ ಇರವಿನ ತಿಳುವಳಿಕೆಯಷ್ಟೇ ಸಾಮಾಜಿಕ ಪ್ರಜ್ಞೆಯಲ್ಲ ಎಂಬುದು ನಿಜ. ಆದರೆ ನಾವು ಬಯಸುವ, ನಿರೀಕ್ಷಿಸುವ ಸಾಮಾಜಿಕ ಪ್ರಜ್ಞೆ ಮೂಡಲು ಮೊದಲು ಅಗತ್ಯವಾಗಿರುವುದು ಸಮಾಜದ ಸಮಸ್ಯೆಗಳನ್ನು ಕುರಿತು ನಿರ್ಭಯವಾಗಿ ಬರೆಯುವುದಕ್ಕೆ ಅವಕಾಶವಿರುವ ವಾತಾವರಣ. ಇಂತಹ ವಾತಾವರಣವನ್ನು ನಿರ್ಮಿಸುವಲ್ಲಿ ಪ್ರಗತಿಶೀಲ ಸಾಹಿತ್ಯ ಪ್ರಮುಖ ಪಾತ್ರವಹಿಸಿತು.' ಎಂಬ ವಿಮರ್ಶಕರ ಅಭಿಪ್ರಾಯ ಪ್ರಗತಿಶೀಲ ಸಾಹಿತ್ಯದ ಮಹತ್ವವನ್ನು ಎತ್ತಿ ತೋರಿಸುತ್ತದೆ. ಈ ದೃಷ್ಟಿಯಿಂದ ಅ.ನ.ಕೃ ಅವರೂ ಹಾಗೂ ಅವರ ಪ್ರಗತಿಶೀಲ ಗೆಳೆಯರೂ ಮಾಡಿದ ಸಾಧನೆ ನಮ್ಮ ಸಾಹಿತ್ಯ ಇತಿಹಾಸದಲ್ಲಿ ಮರೆಯದಂಥ ಅಧ್ಯಾಯವಾಗಿದೆ.

ಪ್ರಗತಿಶೀಲ ಲೇಖಕರಲ್ಲಿ ಸಂಸ್ಕೃತಿಯ ಚಿಂತನೆ ಮತ್ತು ವಿಚಾರವಾದದ ನಡುವೆ ಅಂತರ್‌ಸಂಬಂಧ ಏರ್ಪಡುತ್ತದೆ. ಸಂಸ್ಕೃತಿ ಚಿಂತನೆಯು ಪ್ರಗತಿಶೀಲರಲ್ಲಿ ನವೋದಯದವರ ಚಿಂತನೆಗಿಂತ ಬೇರೆಯಾಯಿತು. ಅವರ ಬರಹಗಳಲ್ಲಿ ಸಂಸ್ಕೃತಿಯೆಂಬ ಪದದ ಅರ್ಥ ಬದಲಾಯಿತು ಎಂಬುದು ಕೂಡಾ ನಿಜ. ಅದು ಬರಿಯ 'ಆದರ್ಶ' ಮೌಲ್ಯಗಳ ಕ್ರೋಢೀಕರಣವಾಗದೆ ಸಾಮಾಜಿಕ ವಾಸ್ತವದೊಂದಿಗೆ ಸಂಬಂಧ ಪಡೆಯಿತು. ಪ್ರಗತಿಶೀಲರು ಸಂಸ್ಕೃತಿಯನ್ನು ಜನಸಾಮಾನ್ಯರ ಮೂಲಕ ನಿರ್ವಚಿಸಲು ಪ್ರಯತ್ನಿಸುತ್ತಾರೆ. ಈ ನೆಲೆಯಲ್ಲಿ ಅಧ್ಯಯನದ ಸಾಧ್ಯತೆಯಿದೆ.

ಪ್ರಗತಿಶೀಲರ ಮಹತ್ವದ ಸಾಧನೆಯೆಂದರೆ ಕಾದಂಬರಿ ಮತ್ತು ಕಥಾ ಕ್ಷೇತ್ರದ ಸೀಮೆಗಳನ್ನು ವಿಸ್ತರಿಸಿದರು. ಮಾನವೀಯವಾದದ್ದಾವುದನ್ನೂ ಅವರು ತಮ್ಮ ಕೃತಿಗಳಿಂದ ಹೊರಗಿಡಲಿಲ್ಲ. ಉಪನಿಷತ್ತುಗಳಿಂದ ಹಿಡಿದು ವೇಶ್ಯಾವೃತ್ತಿಯವರೆಗೆ ಮಾನವನ ಅನುಭವಕ್ಕೆ ಬಂದ ಎಲ್ಲ ವಿಷಯಗಳನ್ನೂ ಅವರ ಕೃತಿಗಳು ಒಳಗೊಳ್ಳಲು ಪ್ರಯತ್ನಿಸಿದವು. ಲೈಂಗಿಕತೆಯ ಬಗ್ಗೆ ಅವರಿಟ್ಟುಕೊಂಡ ಉದಾರ ಧೋರಣೆಯಿಂದಾಗಿ ಅವರು ಟೀಕೆಗೊಳಗಾಗಬೇಕಾಯಿತು. ವಾಚನೀಯತೆ ಮತ್ತು ವಸ್ತು ವೈವಿಧ್ಯ ಅವರ ಕಾದಂಬರಿಗಳ ಮತ್ತು ಕಥೆಗಳ ಮುಖ್ಯ ಸಾಧನೆ. ಸಂಪ್ರದಾಯ ಮತ್ತು ಆಧುನಿಕತೆಗಳ ಹೋರಾಟದಲ್ಲಿ ಸಿಕ್ಕಿ ಬದಲಾಗುತ್ತಿರುವ ಸಮಾಜದ ಬೃಹತ್ ಚಿತ್ರವನ್ನೇ ಪ್ರಗತಿಶೀಲ ಲೇಖಕರಕೃತಿಗಳು ತೆರೆದು ತೋರಿಸುತ್ತವೆ. ಸಾಹಿತ್ಯವನ್ನು ಸಾಮಾನ್ಯ ಜನತೆಗೆ ಮುಟ್ಟಿಸುವುದು ಪ್ರಗತಿಶೀಲ ಲೇಖಕರ ಗುರಿಯಾಗಿತ್ತು. ಈ ಹಿನ್ನೆಲೆಯಲ್ಲಿ ಜನಪ್ರಿಯತೆ ಹಾಗೂ ಪ್ರಗತಿಶೀಲ ಸಾಹಿತ್ಯದ ಸಾಧನೆಯ ಕುರಿತು ಸಂಶೋಧನೆ ಕೈಗೊಳ್ಳಬಹುದು.

ಜಿ.ಎಚ್. ನಾಯಕ್ ಅವರು ತಮ್ಮ 'ಸಾಹಿತ್ಯ ಸಮೀಕ್ಷೆ' ಎಂಬ ಕೃತಿಯಲ್ಲಿ ಪ್ರಗತಿಶೀಲರ ಸಾಹಿತ್ಯದ ಕುರಿತು ಅನೇಕ ಹೊಸ ವಿಚಾರಗಳನ್ನು ಹೇಳಿದ್ದಾರೆ. ಅವರು ಹೇಳುವಂತೆ ಪ್ರಗತಿಶೀಲ ಚಳುವಳಿ ಸಾಹಿತ್ಯ ತತ್ವದ ಮೂಲದಿಂದ ಹುಟ್ಟಿರದೇ ರಾಜಕೀಯ, ಸಾಮಾಜಿಕ, ಆರ್ಥಿಕ ಮೂಲ ಚಿಂತನೆಯ ನೆಲೆಯಿಂದ ಹುಟ್ಟಿದ್ದಾಗಿತ್ತು. ಸಮತಾವಾದೀ ವಿಚಾರವಾದದ ಆಕರ್ಷಣೆಗೆ ಒಳಗಾಯಿತು. ಪ್ರಗತಿಶೀಲ ಚಳುವಳಿ ಕರ್ನಾಟಕದಲ್ಲಿ ಪ್ರಾರಂಭವಾದಾಗ (1943) ಸ್ವಾತಂತ್ರ್ಯ ಹೋರಾಟ ನಿರ್ಣಾಯಕ ಘಟ್ಟ ತಲುಪಿತ್ತು. ಮೈಸೂರು ಸಂಸ್ಥಾನದಲ್ಲಿ ನಡೆದ ಆನಂತರದ ('ಭಾರತ ಬಿಟ್ಟು ತೊಲಗಿ' ಚಳುವಳಿಯ ನಂತರದ) ಕಾಲದ ಸ್ವಾತಂತ್ರ್ಯ ಹೋರಾಟಕ್ಕೆ ಭಾರತೀಯ ಸಂಸ್ಕೃತಿಯನ್ನು ವೈಭವೀಕರಿಸುವ ಪ್ರಶ್ನೆ ಎದುರಾಗಿರಲಿಲ್ಲ. ಅಂಥ ಕಾಲಘಟ್ಟದಲ್ಲಿ ಮತ್ತು ಆನಂತರದಲ್ಲಿ ಭಾರತೀಯ ಸಂಸ್ಕೃತಿಯ ಹಿರಿಮೆಯನ್ನು ಮೆರೆಸುವ ಹಾಗೂ ಸಾಂಪ್ರದಾಯಿಕ ಮೌಲ್ಯಗಳನ್ನು ಕೀರ್ತಿಸುವ ಅಗತ್ಯ ಪ್ರಗತಿಶೀಲರಿಗೆ ಏಕೆ ಉಂಟಾಯಿತು ಎಂದು ಪ್ರಶ್ನಿಸುತ್ತಾರೆ. ಅಲ್ಲದೆ ಸಮತಾವಾದೀ ದೃಷ್ಟಿಯ ಪ್ರಗತಿಶೀಲರಿಗೆ ಸಾಮ್ರಾಜ್ಯಶಾಹಿ ಧೋರಣೆಯ ರಾಜರ ಯುದ್ಧಗಳನ್ನು ವೈಭವೀಕರಿಸುವಂಥ ಬರವಣಿಗೆಯ ಅವಶ್ಯಕತೆ ಏಕೆ ಉಂಟಾಯಿತು ಎಂದು ಕೇಳುತ್ತಾರೆ. ಈ ಮೌಲ್ಯ ಪ್ರಜ್ಞೆಯ

ವಿಪರ್ಯಾಸಗಳಿಗೆ "ಕಾರಣಗಳನ್ನು ಸಾಹಿತ್ಯದ ನೆಲೆಯಲ್ಲಿ ಮಾತ್ರ ಹುಡುಕದೆ ಸಂಸ್ಕೃತಿ ಸಂದರ್ಭದ ನೆಲೆಯಲ್ಲಿಯೂ ಹುಡುಕಬೇಕು"[3] ಎಂದು ಹೇಳುತ್ತಾರೆ. ಈ ಮಾತುಗಳು ಪ್ರಗತಿಶೀಲರ ಸಾಹಿತ್ಯವನ್ನು 'ಸಂಸ್ಕೃತಿ ಚಿಂತನೆ'ಯ ನೆಲೆಯ ಹೊಸ ಬೆಳಕಿನಲ್ಲಿ ಮರುಶೋಧಿಸುವ ಅಗತ್ಯವನ್ನು ಪ್ರತಿಪಾದಿಸುತ್ತವೆ.

ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು 'ನವ್ಯ ವಿಮರ್ಶೆಯ ಸಂದರ್ಭಲ್ಲಂತೂ ನಮ್ಮ ವಿಮರ್ಶೆಯ ಸಂವೇದನೆ ಮತ್ತಷ್ಟು ಸಮಸ್ಯೆಗಳನ್ನೆದುರಿಸಿತು. ಒಬ್ಬ ಕವಿಯನ್ನೋ, ಒಂದು ಕಾವ್ಯ ಮಾದರಿಯನ್ನೋ ಒಪ್ಪಿಕೊಂಡ ಸಂವೇದನೆ ಮತ್ತೊಂದು ಮಾದರಿಯನ್ನು ಒಪ್ಪಿಕೊಳ್ಳಲಾಗದ, ಓದಿ ಸಂತೋಷಿಸಲಾಗದ, ಅನುಭವಿಸಲಾಗದ ಸ್ಥಿತಿ ತಲುಪಿತು. ಹೀಗಾಗಿ ಕನ್ನಡ ವಿಮರ್ಶೆ ಕೆಲವು ಕೃತಿಗಳನ್ನು, ಕೆಲವು ಕೃತಿಗಾರರನ್ನು ಮುಖ್ಯರೆಂದು ಪರಿಭಾವಿಸಿ, ಉಳಿದವರನ್ನು ನಿರ್ಲಕ್ಷಿಸಿತು.'[4]ಎಂದು ಹೇಳುತ್ತಾರೆ. ಅಲ್ಲದೆ ಕೆಲವೊಮ್ಮೆ ನಮ್ಮ ವಿಮರ್ಶೆ ಕೇವಲ ಅಕಾಡೆಮಿಕ್ ಆಸಕ್ತಿಗೆ ಮಾತ್ರ ಸೀಮಿತವಾಗಿ ಒಬ್ಬ ಲೇಖಕನ ಕೃತಿಗಳನ್ನು ಮತ್ತು ಆ ಲೇಖಕನ ಮಹತ್ವವನ್ನು ಕಲಾತ್ಮಕ ನೆಲೆಯಲ್ಲಿ ಮಾತ್ರ ಗಮನಿಸಿತು. ಒಟ್ಟು ಸಂಸ್ಕೃತಿಯ ನೆಲೆಯಿಂದ ಅವನನ್ನು ಅಲಕ್ಷಿಸಿತು. ಹೀಗೆ ನಿರ್ಲಕ್ಷ್ಯಕ್ಕೆ ಒಳಗಾದ ಕನ್ನಡ ಪ್ರತಿಭೆಗಳಲ್ಲಿ ಅನಕೃ ಒಬ್ಬರು ಎಂದು ನರಹಳ್ಳಿಯವರು ಹೇಳುತ್ತಾರೆ. ಇದು ಲಕ್ಷಿಸಬೇಕಾದ ವಿಚಾರ.ಹೀಗೆ ನಿರ್ಲಕ್ಷಕ್ಕೆ ಒಳಗಾದ ಪ್ರಗತಿಶೀಲ ಲೇಖಕರನ್ನು ಒಟ್ಟು ಕನ್ನಡ ಸಂಸ್ಕೃತಿಯ ನೆಲೆಯಲ್ಲಿ ಸಂಶೋಧನೆಗೆ ಒಳಪಡಿಸಬಹುದಾದ ಸಾಧ್ಯತೆಗಳನ್ನು ಗಮನಿಸಬಹುದು. ಕನ್ನಡ ವಿಮರ್ಶೆ ನವ್ಯ ಸಂದರ್ಭದ ನಂತರ ಜನಪ್ರಿಯತೆಯನ್ನು ಗುಮಾನಿಯಿಂದ ನೋಡಿತು; ಒಂದು ರೀತಿಯಲ್ಲಿ ಜನಪ್ರಿಯ ಲೇಖಕರನ್ನು ನಿರ್ಲಕ್ಷ್ಯದಿಂದ ಕಂಡಿತು. ಆದರೆ ಜನಪ್ರಿಯತೆಯ ಇತ್ಯಾತ್ಮಕ ಅಂಶಗಳ ಬಗೆಗೆ ನಾವಿಂದು ಚಿಂತಿಸಬೇಕಿದೆ. ಜನಪ್ರಿಯರಾಗಲೆಂದೇ ಸಾಹಿತ್ಯ ರಚಿಸುವುದಕ್ಕೂ, ಒಂದು ಕೃತಿ ಸಹಜವಾಗಿ ಜನಪ್ರಿಯವಾಗುವುದಕ್ಕೂ ಇರುವ ಅಂತರವನ್ನೂ ನಾವು ಗುರುತಿಸಬೇಕಿದೆ. ಜನಪ್ರಿಯತೆ ದೋಷವಾಗಬೇಕಿಲ್ಲ. ಆದರೆ ಜನಪ್ರಿಯ ಸಂಸ್ಕೃತಿಯ ಅಪಾಯಗಳನ್ನು ನಾವು ಅಲ್ಲಗಳೆಯುವಂತಿಲ್ಲ. ಪ್ರಗತಿಶೀಲ ಲೇಖಕರ ಜನಪ್ರಿಯತೆ ಸ್ವರೂಪ ಹಾಗೂ ಇಂದು ಅದರ ಇತ್ಯಾತ್ಮಕ ಅಂಶಗಳನ್ನು ಅಳವಡಿಸಿಕೊಳ್ಳಬಹುದಾದ ಕ್ರಮದ ಬಗ್ಗೆ ನಾವು ಸಂಶೋಧನಾ ಅಧ್ಯಯನ ಕೈಗೊಳ್ಳಬಹುದು.

ಅ.ನ.ಕೃ ಒಂದು ಹಂತದಲ್ಲಿ ಮಾನವತಾವಾದವನ್ನೇ ಪ್ರಗತಿಶೀಲತೆಯೆಂದು ಕರೆದರು. 'ಸಾಹಿತ್ಯ ಜೀವನದರ್ಶನ ಮಾಡಿಸುವುದರ ಜೊತೆಗೆ ಉನ್ನತ ಜೀವನದ ನಿರ್ಮಾಣಕ್ಕೆ ನೆರವಾಗಬೇಕು. ಸಾಹಿತಿಯ ಧ್ಯೇಯ ಲೋಕ ವಿಲಾಸವಲ್ಲ, ಲೋಕ ವಿಕಾಸ. ಅವನ ಗುರಿ ತಾತ್ಕಾಲಿಕ ಸಂತೋಷವನ್ನುಂಟು ಮಾಡುವುದಲ್ಲ. ಶಾಶ್ವತಾನಂದವನ್ನುಂಟು ಮಾಡುವುದು' ಎಂಬುದು ಅವರ ಅಭಿಮತವಾಗಿತ್ತು. ಈ ಹಿನ್ನೆಲೆಯಲ್ಲಿ ಪ್ರಗತಿಶೀಲ ಲೇಖಕರ ಕೃತಿಗಳಲ್ಲಿ ಅಭಿವ್ಯಕ್ತವಾದ **ಉದಾರ ಮಾನವತಾವಾದ** ನೆಲೆಗಳನ್ನು ಶೋಧಿಸಬಹುದು.

ಪ್ರಗತಿಶೀಲ ಸಾಹಿತ್ಯ ಆಧುನಿಕ ಕನ್ನಡ ಸಾಹಿತ್ಯದ ಮೇಲೆ ಕೆಲವು ಗುರುತುಗಳನ್ನು ಉಳಿಸಿ ಹೋಗಿದೆ. ಈ ಚಳುವಳಿ ಲೇಖಕನ ಮತ್ತು ಓದುಗನ ಸಾಮಾಜಿಕ ಪ್ರಜ್ಞೆಯನ್ನು ತೀಕ್ಷ್ಣಗೊಳಿಸಿತು. ವಾಸ್ತವತಾವಾದ ತನ್ನ ಪ್ರಭಾವವನ್ನು ವಿಸ್ತರಿಸಿಕೊಂಡಿತು. ಆಡುಮಾತಿನ ಬಳಕೆ ಹೆಚ್ಚಿತು. ವಿವರಗಳು ಹೆಚ್ಚು ದಟ್ಟವಾದವು. ಬರವಣಿಗೆ ಕಾವು ಮತ್ತು ವೇಗಗಳನ್ನು ಗಳಿಸಿಕೊಂಡಿತು. ಕನ್ನಡ ಕಾದಂಬರಿ ಸಾಹಿತ್ಯಕ್ಕೆ ಗ್ರಾಮ ಜೀವನ ಮತ್ತು

3. ನಾಯಕ್, ಜಿ.ಹೆಚ್. (2009). *ಸಾಹಿತ್ಯ ಸಮೀಕ್ಷೆ*. ಪುಟ. 200
4. ನರಹಳ್ಳಿ ಬಾಲಸುಬ್ರಹ್ಮಣ್ಯ. (2006). ಅ.ನ.ಕೃ. ಮತ್ತು ಕನ್ನಡ ಸಂಸ್ಕೃತಿ. ಪುಟ.107

ಕಾರ್ಮಿಕ ವರ್ಗದ ಜೀವನವನ್ನು ತಂದುಕೊಟ್ಟರು. ಭಾಷೆಗೆ ಹೊಸ ಕಸುವನ್ನು ತಂದುಕೊಟ್ಟರು.

ಪ್ರಗತಿಶೀಲ ಸಾಹಿತ್ಯ ಚಳುವಳಿಯನ್ನು ಕುರಿತು ಇದುವರೆಗೆ ಕನ್ನಡದಲ್ಲಿ ನಡೆದ ಅಧ್ಯಯನವನ್ನು ನೋಡಿದಾಗ ಈ ಸಾಹಿತ್ಯ ಚಳುವಳಿಯ ಬಹುತೇಕ ಲೇಖಕರು ವಿಮರ್ಶಕರ ಮತ್ತು ಸಂಶೋಧಕರ ಅವಜ್ಞೆಗೊಳಗಾಗಿರುವುದು ಕಂಡು ಬರುತ್ತದೆ. ಪ್ರಗತಿಶೀಲ ಸಾಹಿತ್ಯ ಚಳುವಳಿಯ ಪ್ರಮುಖ ಲೇಖಕರ ಕಾದಂಬರಿ ಮತ್ತು ಕಥೆಗಳನ್ನು ಕುರಿತಂತೆ ಸಾಮಾಜಿಕ, ಆರ್ಥಿಕ ನೆಲೆಯಿಂದ ಅಧ್ಯಯನಗಳು ನಡೆದಿವೆ, ಆದರೆ ಸಂಸ್ಕೃತಿ ನೆಲೆಯಿಂದ, ಭಾಷೆ ಮತ್ತು ಶೈಲಿಯ ನೆಲೆಯಿಂದ, ಉದಾರ ಮಾನವತಾವಾದದ ನೆಲೆಯಿಂದ ಅಧ್ಯಯನಗಳು ಆಗಿರುವುದು ವಿರಳ. ಈ ನಿಟ್ಟಿನಲ್ಲಿ ಸಂಶೋಧನೆಯನ್ನು ಕೈಗೊಳ್ಳಲು ಅವಕಾಶಗಳಿವೆ.

**ಪರಾಮರ್ಶನ ಗ್ರಂಥಗಳು**


- ಅ.ನ.ಕೃಷ್ಣರಾಯರು. (1944). ಪ್ರಗತಿಶೀಲ ಸಾಹಿತ್ಯ. ಪ್ರಗತಿಶೀಲ ಲೇಖಕರ ಸಂಘ.
- ಆಮೂರ. ಜಿ.ಎಸ್. (1987). ಅ.ನ.ಕೃಷ್ಣ ರಾಯರು. ಸಾಹಿತ್ಯ ಅಕಾಡೆಮಿ.
- ನರಹಳ್ಳಿ ಬಾಲಸುಬ್ರಹ್ಮಣ್ಯ. (2006). ಅ.ನ.ಕೃ. ಮತ್ತು ಕನ್ನಡ ಸಂಸ್ಕೃತಿ. ಅಂಕಿತ ಪುಸ್ತಕ.
- ನಾಯಕ, ಜಿ.ಎಚ್. (2009). *ಸಾಹಿತ್ಯ ಸಮೀಕ್ಷೆ.* ಶ್ರೀ ರಾಘವೇಂದ್ರ ಪ್ರಕಾಶನ.
- ಶೇಷಗಿರಿರಾವ್, ಎಲ್.ಎಸ್. (2002). *ಹೊಸಗನ್ನಡ ಸಾಹಿತ್ಯ ಚರಿತ್ರೆ.* ಅಂಕಿತ ಪುಸ್ತಕ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 140-149
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಹೊಸ ತಲೆಮಾರಿನ ಕಥೆಗಾರರ ತಲ್ಲಣಗಳು ಮತ್ತು ಜಾಗತೀಕರಣ

**ಹನುಮಂತಪ್ಪ ಸಿ. ಬಿ**
ಸಂಶೋಧನಾ ವಿದ್ಯಾರ್ಥಿ, ಕನ್ನಡ ಅಧ್ಯಯನ ವಿಭಾಗ, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ.

**Abstract:**

*ಆಧುನಿಕ ಕನ್ನಡ ಸಾಹಿತ್ಯವು ಹಲವು ಸ್ವರೂಪದ ವೈಶಿಷ್ಟ್ಯತೆಗಳ ಜೊತೆಗೆ ತುಂಬಾ ವಿಶಾಲತೆಯನ್ನು ಹೊಂದಿದೆ. ಏಕೆಂದರೆ ಕಥೆ, ಕಾದಂಬರಿ, ವಿಮರ್ಶೆ, ಆತ್ಮಕಥನ, ಜೀವನ ಚರಿತ್ರೆ ಹೀಗೆ ಇನ್ನೂ ಹಲವು ಸಾಹಿತ್ಯ ಪ್ರಕಾರಗಳು ಬೆಳೆದು ಬಂದಿದ್ದು ಆಧುನಿಕ ಕನ್ನಡ ಸಾಹಿತ್ಯವನ್ನು ಅತ್ಯಂತ ಶ್ರೀಮಂತಗೊಳಿಸಿವೆ. ಪ್ರಸ್ತುತ ಸಮಾಜದಲ್ಲಾಗುವ ಜನಜೀವನದ ಬದುಕಿನ ಸ್ಥಿತ್ಯಂತರಗಳು ಪ್ರೇರೇಪಿಸಿದಂತೆ ಜಾಗತಿಕ ವಿದ್ಯಮಾನಗಳು, ತಂತ್ರಜ್ಞಾನಗಳ ಸೌಲಭ್ಯಗಳು ಕಥೆಗಾರರ ಮೇಲೆ ಪ್ರಭಾವಿಸಿವೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹಲವು ವಿಭಿನ್ನ ಸ್ವರೂಪದ ಸಾಹಿತ್ಯ ಪ್ರಕಾರಗಳು ಬೆಳೆದು ಬಂದಂತೆ ಈ ಹೊಸತಲೆಮಾರಿನ ಕಥೆಗಾರರ ವಸ್ತು, ಆಶಯಗಳು ಬದಲಾಗಿ ಅವರ ತಲ್ಲಣಗಳು ಹೊಸ ಸ್ವರೂಪವನ್ನು ಪಡೆದುಕೊಂಡಿವೆ. ಇಂತಹ ಬದಲಾದ ಜಾಗತಿಕ ವೇಗದ ಬದುಕಿನಲ್ಲಿ ಎದುರಿಸುತ್ತಿರುವ ಸವಾಲುಗಳು ಮತ್ತು ಸಂದಿಗ್ಧತೆಗಳು ಸಾಕಷ್ಟಿವೆ. ಈ ಹಿನ್ನೆಲೆಯಲ್ಲಿ 'ಹೊಸತಲೆಮಾರಿನ ಕಥೆಗಾರರ ತಲ್ಲಣಗಳು ಮತ್ತು ಜಾಗತೀಕರಣ' ಎಂಬ ಶೀರ್ಷಿಕೆಯಡಿಯಲ್ಲಿ ಚರ್ಚಿಸುವುದು ಇಂದಿನ ಅಗತ್ಯ ಮತ್ತು ಮುಖ್ಯ ಉದ್ದೇಶವಾಗಿದೆ.*

**Keywords:** *ಆಧುನಿಕ ಕನ್ನಡ ಸಾಹಿತ್ಯ, ಹೊಸ ತಲೆಮಾರಿನ ಲೇಖಕರು, ಜಾಗತೀಕರಣ, ಕಥೆಗಾರರ ತಲ್ಲಣಗಳು.*

**ಪೀಠಿಕೆ**

ಹೊಸಗನ್ನಡ ಸಾಹಿತ್ಯದಲ್ಲಿ ಅಧ್ಯಯನದ ದೃಷ್ಟಿಯಿಂದ ಮಾಡಿಕೊಂಡಿರುವ ನವೋದಯ ಪೂರ್ವ, ನವೋದಯ, ಪ್ರಗತಿಶೀಲ, ನವ್ಯ, ದಲಿತ ಮತ್ತು ಬಂಡಾಯ ಸಾಹಿತ್ಯದ ಘಟ್ಟಗಳಲ್ಲದೆ ಸ್ತ್ರೀವಾದಿ, ವೈಚಾರಿಕ ಮತ್ತು ವಿಮರ್ಶಾ ಸಾಹಿತ್ಯದ ಫಸಲು ಬೆಳೆದು ಇನ್ನಷ್ಟು ಸಮೃದ್ಧಗೊಳಿಸಿವೆ. ಕಳೆದ ಶತಮಾನದ ಸಾಹಿತ್ಯವನ್ನು ವಿಭಾಗ ಮಾಡಿದಂತೆ ಇಪ್ಪತ್ತೊಂದನೆಯ ಶತಮಾನದ ಸಾಹಿತ್ಯವನ್ನು ಅಧ್ಯಯನದ, ಕಾಲದ ನಿರ್ಣಯದಲ್ಲಿ, ಕೃತಿಗಳ ವಸ್ತು, ಆಶಯದ ದೃಷ್ಟಿಯಲ್ಲಿ, ಕವಿಗಳ, ಕಥೆಗಾರರ ಬರಹದ ಆಸಕ್ತಿಯ ಹಿನ್ನೆಲೆಯಲ್ಲಿ, ಸಮಾಜದ ಮೇಲಿನ ಪರಿಣಾಮಕಾರಿ ಬದಲಾವಣೆಗಳ ನೆಲೆಯಲ್ಲಿ ಒಂದು ಸಿದ್ಧಾಂತಕ್ಕೆ ಅಥವಾ ತಾತ್ವಿಕತೆಗೆ ಅಂಟಿಕೊಂಡಿದೆ ಎಂದು ಹೇಳುವುದು, ನಿರ್ಧಾರ ಮಾಡುವುದು ಅಸಾಧ್ಯವಾದ ಮಾತಾಗಿದೆ. ಹಾಗಾಗಿ ಕಳೆದ ಎರಡು ದಶಕಗಳ ಕಾಲಘಟ್ಟದಲ್ಲಿ ಅಭಿವ್ಯಕ್ತಪಡಿಸಿರುವ ಕಥೆಗಾರರ ಆಂತರಿಕ ತಲ್ಲಣಗಳು, ಜಾಗತೀಕರಣ ಸಂದರ್ಭದಲ್ಲಿ ಎದುರಿಸಬಹುದಾದ ಸವಾಲುಗಳು ಮತ್ತು

***Please cite this article as:*** ಹನುಮಂತಪ್ಪ. ಸಿ. ಬಿ. (2024). ಹೊಸ ತಲೆಮಾರಿನ ಕಥೆಗಾರರ ತಲ್ಲಣಗಳು ಮತ್ತು ಜಾಗತೀಕರಣ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(3), 140–149

ಸಾಧ್ಯತೆಗಳನ್ನಾಧರಿಸಿ, ಕಾಲಘಟ್ಟವನ್ನಾಧರಿಸಿ ಆಧುನಿಕೋತ್ತರ ಯುಗವೆಂದೂ, ಜಾಗತೀಕರಣದ ಸಾಹಿತ್ಯ ಯುಗವೆಂದೂ ಅಥವಾ ಸಂಕೀರ್ಣ ಸಾಹಿತ್ಯವೆಂದೂ ಕರೆಯಬಹುದು.

ವಿಶ್ವದೆಲ್ಲೆಡೆ ಜರುಗಿದ ಕೈಗಾರಿಕಾ ಕ್ರಾಂತಿಯು ಜನಜೀವನವನ್ನು ಸಮಗ್ರವಾಗಿ ಆವರಿಸಿಕೊಳ್ಳುವುದ ರೊಂದಿಗೆ ತನ್ನ ಅಗಾಧವಾದ ಪರಿಣಾಮವನ್ನು ಈ ಸಮಾಜದ ಮೇಲೂ ಜಾಗತೀಕವಾಗಿ ಪ್ರಭಾವಿಸಿದೆ. ಅದರಂತೆಯೇ ಕವಿಗಳ, ಕಥೆಗಾರರ, ಬರಹಗಾರರ ಮೇಲೂ ಹಲವು ಸ್ವರೂಪದ ಸಮಾಜದೊಳಗಿನ ದಾವಂತಗಳು, ಆತಂಕಗಳು, ತಲ್ಲಣಗಳೊಂದಿಗೆ ಪ್ರತಿಸ್ಪಂದಿಸುವಂತೆ ಮಾಡಿ ಹೊಸ ಮಾರ್ಗವನ್ನು ಕಂಡುಕೊಳ್ಳುವಂತೆ ಮಾಡಿದೆ. ಕಥೆಗಾರ ಸದಾ ತನ್ನ ಸುತ್ತಲಿನ ಸಮಾಜ ಮತ್ತು ಪರಿಸರದೊಂದಿಗೆ ಅನುಸಂದಾನವಾಗುತ್ತಲೇ ಇರುತ್ತಾನೆ. ಹಾಗಾಗಿ ಆತನಿಗೂ ಸಮಾಜಕ್ಕೂ ವಿಶೇಷ ಸಂಬಂಧವಿರುತ್ತದೆ. ಈ ಸಮಾಜವನ್ನು ಒಬ್ಬ ಚರಿತ್ರೆಕಾರನಾಗಿ ನೋಡುವ ದೃಷ್ಟಿಯೇ ಬೇರೆ, ಒಬ್ಬ ಮಾನವಶಾಸ್ತ್ರಜ್ಞನಾಗಿ ನೋಡುವ ದೃಷ್ಟಿಯೇ ಬೇರೆ ಹಾಗೆಯೇ ಒಬ್ಬ ಕವಿಯಾಗಿ, ಕಥೆಗಾರನಾಗಿ ನೋಡುವ ದೃಷ್ಟಿಯೇ ಬೇರೆಯಾಗಿರುತ್ತದೆ. ಹೊಸತಲೆಮಾರಿನ ಕವಿ, ಕಥೆಗಾರ, ಬರಹಗಾರ ತನ್ನ ವಸ್ತುವನ್ನು ಈ ಸಮಾಜದಿಂದ ಆಯ್ದುಕೊಂಡು ಅದನ್ನು ತನ್ನ ಭಾವ ಸಂವೇದನೆಗೆ ಒಳಪಡಿಸುತ್ತಾನೆ. ಸುತ್ತಲಿನ ಸಮಾಜದ ಬದುಕನ್ನು, ಬೌದ್ಧಿಕ ಆಶೋತ್ತರಗಳನ್ನು, ಹಲವು ತುಡಿತಗಳಿಗೆ ತನ್ನ ವಿಶೇಷ ಅನುಭವ ಮತ್ತು ಸಾಮಾಜಿಕ ಕಳಕಳಿಯ ಪ್ರಜ್ಞೆಯಿಂದ ಹದಮಾಡಿ ಕೃತಿಯ ಮೂಲಕ ವ್ಯಕ್ತಪಡಿಸುತ್ತಾನೆ.

ಹೊಸ ತಲೆಮಾರು ಎಂದರೆ ಇಲ್ಲಿ ಕೇವಲ ವಯಸ್ಸಿನ ಮಾನದಂಡವನ್ನಷ್ಟೇ ಇಟ್ಟುಕೊಂಡಿಲ್ಲ. ಇದನ್ನು ಹೀಗೆ ವಿಭಾಗ ಮಾಡುವುದು ಕೂಡ ತಪ್ಪು ಭಾವನೆ ಎಂದೆನಿಸುತ್ತದೆ. ಇಪ್ಪತ್ತೊಂದನೇ ಶತಮಾನದ ಆರಂಭದ ದಶಕದಲ್ಲಿದ್ದು, ಸದಾ ಪ್ರಸ್ತುತ ಸಮಕಾಲೀನತೆಗೆ ಪ್ರತಿಸ್ಪಂದಿಸುವ ಕಥೆಗಾರರು ಮತ್ತು ಚರ್ಚೆಗೊಳಪಡುವ ಅಂಶವನ್ನು ಇಲ್ಲಿ ಗಣನೆಗೆ ಪರಿಗಣಿಸಲಾಗಿದೆ. ಅಲ್ಲದೇ ಕಥೆಗಾರರು ಕನ್ನಡ ಸಾಹಿತ್ಯದ ಎಲ್ಲಾ ಕಾಲದಲ್ಲಿಯೂ ತಮ್ಮ ಬರವಣಿಗೆಯನ್ನು ಕಥಾ ಸ್ವರೂಪಗಳಲ್ಲಿ ವ್ಯಕ್ತಪಡಿಸುತ್ತಾ ಬಂದಿದ್ದಾರೆ. ಇದನ್ನು ಪ್ರಾಚೀನ ಸಾಹಿತ್ಯದಿಂದ ಹಿಡಿದು ಇಂದಿನ ಆಧುನಿಕ ಮತ್ತು ಆಧುನಿಕೋತ್ತರ ಕಾಲಘಟ್ಟದಲ್ಲಿಯೂ ನಾವು ಗುರುತಿಸಬಹುದು. ಆಯಾ ಕಾಲಘಟ್ಟದ ಕಥೆಗಾರರ ತಲ್ಲಣಗಳು ಬೇರೆ ಬೇರೆಯಾಗಿಯೂ, ಒಂದೇ ತೆರನಾಗಿಯೂ ಇರಬಹುದು.ಇಲ್ಲಿ ತಲ್ಲಣಗಳು ಎಂದರೇನು? ಎಂಬುದನ್ನು ಈ ಮುಂದಿನಂತೆ ವ್ಯಾಖ್ಯಾನಿಸಿಕೊಳ್ಳಲಾಗಿದೆ. **"**ಲೇಖಕರು ತಮ್ಮ ಬರಹದ ಕಷ್ಟ ಸುಖಗಳನ್ನೂ, ಸುತ್ತಲ ಪರಿಸರವನ್ನು ಕುರಿತ ಅನಿಸಿಕೆಗಳನ್ನು ಮುಕ್ತವಾಗಿ ಹಂಚಿಕೊಳ್ಳುತ್ತಾರೆ. ಇವುಗಳಲ್ಲಿ ಖಚಿತತೆ, ಭಿನ್ನಮತ, ಬದ್ಧತೆ, ಆತ್ಮವಿಶ್ವಾಸ, ಕನಸು, ವಿಷಾದ, ಸೂಕ್ಷ್ಮತೆ, ಸಂಭ್ರಮ, ಜಿಜ್ಞಾಸೆ ಎಲ್ಲವೂ ಇವೆ. ಇವುಗಳನ್ನು ವಿಶಾಲ ಅರ್ಥದಲ್ಲಿ ತಲ್ಲಣಗಳು ಎಂದು ಕರೆಯಬಹುದು.**"**[1] ಹೀಗೆ ಕಥೆಗಾರನೊಬ್ಬನು ತನ್ನ ಸುತ್ತಲಿನ ಸಮಾಜ ಮತ್ತು ಪರಿಸರದೊಂದಿಗೆ ಅನುಸಂದಾನವಾಗುತ್ತಲೇ ಸಮಾಜಕ್ಕೊಂದು ಬದಲಾವಣೆಯ ತಾತ್ವಿಕತೆಯನ್ನು ಬಯಸುತ್ತಾ ತನ್ನೊಳಗಿನ ನಿವೇದನೆಗಳನ್ನು, ವೈಲಕ್ಷಣಗಳನ್ನು ವ್ಯಕ್ತಪಡಿಸುತ್ತಲೇ ಇರುತ್ತಾನೆ. ಇವುಗಳನ್ನೇ ನಾವು ತಲ್ಲಣಗಳು ಎಂದು ವ್ಯಾಖ್ಯಾನಿಸಿಕೊಳ್ಳಬಹುದಾಗಿದೆ.

ಈ ಹೊಸತಲೆಮಾರಿನ ಕಥೆಗಾರರಲ್ಲಿ ತನ್ನದೇ ಆದ ತಾತ್ವಿಕತೆ ಮತ್ತು ಸಾಹಿತ್ಯ ಲಕ್ಷಣಗಳನ್ನು ಗುರುತಿಸಬಹುದು. ಈ ಲಕ್ಷಣಗಳನ್ನು ಗುರುತಿಸುವುದು ಇಲ್ಲಿನ ಮುಖ್ಯವಾದ ಚರ್ಚೆಯಾಗಿದೆ. ಈ ಕಾಲಘಟ್ಟದಲ್ಲಿ ಹಿರಿಯರೂ, ಕಿರಿಯರೂ ಕಥಾಸಾಹಿತ್ಯದಲ್ಲಿ ತೊಡಗಿಸಿಕೊಂಡಿದ್ದಾರೆ. ಇವರು ದಿನಪತ್ರಿಕೆಗಳಲ್ಲಿ, ಇಂಟರ್‌ನೆಟ್, ಅಂತರ್ಜಾಲ ಪತ್ರಿಕೆಗಳಲ್ಲಿ, ಫೇಸ್‌ಬುಕ್, ವಾಟ್ಸಾಪ್‌ಗಳಲ್ಲಿ ಇನ್ನೂ ಮೊದಲಾದ ಸಾಮಾಜಿಕ

ಜಾಲತಾಣಗಳ ಮಾಧ್ಯಮಗಳಲ್ಲಿ ನಿರಂತರವಾಗಿ ತಮ್ಮ ಕಥಾಸಾಹಿತ್ಯವನ್ನು ವ್ಯಕ್ತಪಡಿಸುತ್ತಿದ್ದಾರೆ.

ಇತ್ತೀಚಿನ ದಿನಗಳಲ್ಲಿ ಬಹುತೇಕ ಬರಹಗಾರರು ಸಾಮಾಜಿಕ ಜಾಲತಾಣಗಳ ಸಾಂಧರ್ಭಿಕ ಉಪಯೋಗವನ್ನು ಮಾಡಿಕೊಳ್ಳುತ್ತಿದ್ದಾರೆ. ಕಾರಣ ಕಥೆಗಾರರು ಬರೆದ ಮೊದಲ ಬರಹಗಳನ್ನು ಮೊದಲು ಪ್ರಕಟಿಸುವ ದಾವಂತದಲ್ಲಿ ಸಮಾಜದ ವಸ್ತುವನ್ನೋ, ಜೀವನ ದರ್ಶನದ ಸದಾಶಯವನ್ನೋ, ಸಮಕಾಲೀನ ದಾವಂತದ ಸ್ವಾನುಭವಗಳನ್ನೋ, ಭಾವಾತಿರೇಕದ ಸನ್ನಿವೇಶಗಳನ್ನೋ ಅಥವಾ ಅನಿಸಿಕೆ, ಅಭಿಪ್ರಾಯಗಳನ್ನೋ ಆಯ್ದು ಬರಹ ರೂಪಕ್ಕಿಳಿಸುವ ಪ್ರಯತ್ನ ಮಾಡುತ್ತಿದ್ದಾರೆ. ಇವೆಲ್ಲವುಗಳ ಹಿಂದೆ ಒಂದು ರೀತಿಯ ಸೂಕ್ಷ್ಮವಾದ ವಿಶಿಷ್ಟ ಸಂವೇದನೆ ಮತ್ತು ಅವಸರದ ತಲ್ಲಣಗಳಿವೆ ಎಂಬುದನ್ನು ಗುರುತಿಸಬಹುದು.

ಸಾಹಿತ್ಯ ಎನ್ನುವುದು ನಿಂತ ನೀರಲ್ಲ, ಇದು ಸದಾ ಪ್ರವಹಿಸುತ್ತಲೇ ಒಂದಿಲ್ಲೊಂದು ಸಂದಿಗ್ಧತೆಗಳಿಗೆ, ಸದಾಶಯಗಳಿಗೆ ಮುಖಾಮುಖಿಯಾಗುತ್ತಲೇ ಇರುತ್ತದೆ. ಇದನ್ನು ಹಲವಾರು ಕಾಲಘಟ್ಟದ ಕಥೆಗಾರರು, ಬರಹಗಾರರು ನಿರೂಪಿಸಿದ್ದಾರೆ. ಆದರೆ ಇತ್ತೀಚಿನ ಹೊಸತಲೆಮಾರಿನ ಕಥೆಗಾರರಲ್ಲಿ ಒಂದು ನಿರ್ದಿಷ್ಟ ತಾತ್ವಿಕ ಸಿದ್ಧಾಂತದ ಕಟ್ಟುಪಾಡಿಗೆ ಅಂಟಿಕೊಳ್ಳದೆ ಮುಕ್ತವಾಗಿ ಬರೆಯುತ್ತಿರುವುದು ಅವರ ಸ್ವತಂತ್ರತೆಯನ್ನು ನಿರೂಪಿಸುತ್ತದೆ. ಈ ಸಮಾಜದ ಮಾನವನ ಬದುಕನ್ನು ಮಾನವೀಯ ಅಂಶಗಳ ತಳಹದಿಯಲ್ಲಿ ಸತ್ಯವನ್ನು ಹುಡುಕುವ ಪ್ರಯತ್ನವು ನಿರಂತರವಾಗಿ ನಡೆಯಬೇಕಾಗುತ್ತದೆ. ಯಾವುದೇ ಒಂದು ಸಮಾಜದ ಸಾಂಸ್ಕೃತಿಕ ಪರಿಸರವನ್ನು ಪ್ರಚುರಪಡಿಸಬೇಕಾದರೆ ಲೇಖಕರ ಮತ್ತು ಕಥೆಗಾರರ ಪಾತ್ರ ಬಹುಮುಖ್ಯವಾಗುತ್ತದೆ. ಇದನ್ನು ಆತನ ಬದುಕು–ಬರಹದಲ್ಲಿ, ಕೃತಿಗಳಲ್ಲಿ, ಹುದುಗಿರುವ ಸತ್ಯದರ್ಶನ ಮಾಡಬೇಕಾಗುತ್ತದೆ. ಈ ನೆಲೆಯಲ್ಲಿ ಪ್ರಸ್ತುತ ಜಾಗತೀಕರಣದ ಈ ಹೊತ್ತಿನಲ್ಲಿ ಹೊಸತಲೆಮಾರಿನ ಕಥೆಗಾರರ ತಲ್ಲಣಗಳನ್ನು ಚರ್ಚಿಸಲು ಸಾಧ್ಯವಿದೆ.

ಆಧುನಿಕ ಕನ್ನಡ ಸಾಹಿತ್ಯದ ನವೋದಯ, ಪ್ರಗತಿಶೀಲ, ನವ್ಯ ಮತ್ತು ದಲಿತ ಮತ್ತು ಬಂಡಾಯೋತ್ತರ ನಂತರದ ಆಧುನಿಕೋತ್ತರ ಕಾಲದಲ್ಲಿಯೂ ಕಥಾಸಾಹಿತ್ಯ ಸೃಷ್ಟಿಯಾಯಿತಾದರೂ ಅದರ ದಿಕ್ಕೇ ಬದಲಾಗಿ ಸಮಾಜವನ್ನು ಕಟ್ಟುವಂತಹ, ಪುನರ್ ನಿರ್ಮಾಣ ಮಾಡುವಂತಹ ಸಾಹಿತ್ಯಾಶಯದ ಸಂಗತಿಗಳಿಗೆ ಹೆಚ್ಚು ಹೊತ್ತು ನೀಡಲಿಲ್ಲ. ಏಕೆಂದರೆ ಯಾವುದೇ ಪಂಥ, ಚಳುವಳಿಯಿಂದ ಗುರುತಿಸಿಕೊಳ್ಳದೆ ದೂರವಿದ್ದು ತಮ್ಮ ಪಾಡಿಗೆ ತಾವು ಸಮಾಜದ ಸಮಕಾಲೀನ ಬದುಕನ್ನು ಸೂಕ್ಷ್ಮನೆಲೆಯಿಂದ ನೋಡಿ ಕಲಾತ್ಮಕತೆಯ ಎಚ್ಚರವನ್ನೂ ಗಮನದಲ್ಲಿಟ್ಟುಕೊಂಡು ಬರೆದ ಸಮರ್ಥ ಕಥೆಗಾರರೂ ಇದ್ದಾರೆನ್ನಬಹುದು. ವಿಚಿತ್ರ ಸನ್ನಿವೇಶಗಳ ಕಾಲ ಇದಾಗಿದ್ದು ಮತ್ತಷ್ಟು ವ್ಯಾಪಿಸುತ್ತಿರುವ ಬಡತನ, ಜಾತೀಯತೆ, ಪಾರತಂತ್ರ್ಯ, ನಿರುದ್ಯೋಗ ಮತ್ತು ಕೌಟುಂಬಿಕ ಸಮಸ್ಯೆಗಳಿಂದ ಕೂಡಿದ ಮನುಷ್ಯನ ಬದುಕು ಅತಂತ್ರವಾಗುತ್ತಿದ್ದು, ಸಾಕಷ್ಟು ತೊಂದರೆಗಳಿಗೆ ತಲೆಯೊಡ್ಡುತ್ತಲೇ ಸಾಗುತ್ತಿದೆ. ಕಥನ ಸಾಹಿತ್ಯವು ಒಂದು ಸಾಂಸ್ಕೃತಿಕ ನೆಲೆಯಾಗಿ ರೂಪುಗೊಳ್ಳುವ ಮೂಲಕ ಸಮಾಜದ ಹಲವು ಮುಖಗಳು ಮುಖ್ಯವಾಹಿನಿಗೆ ಬರುತ್ತಿವೆ. ಈ ಕಾಲಘಟ್ಟದಲ್ಲಿ ಜಂಜಾಟದ ಬದುಕನ್ನು ತಿದ್ದಿ ನೋಡುವ, ಪರಿಷ್ಕರಿಸುವ ಮುಕ್ತವಾದ ಚಿಂತನಧಾರೆಯನ್ನು ಹರಿಸುವ ಪ್ರಯತ್ನದಲ್ಲಿ ಸಮಾಜವನ್ನು ಭಿನ್ನ ನೆಲೆಯಲ್ಲಿ ನೋಡುವ ತವಕ–ತಲ್ಲಣಗಳು ಕಂಡು ಬರುತ್ತಿವೆ. ಹಾಗಾಗಿ ಇಂದಿನ ಬಹುತೇಕ ಕಥೆಗಾರರು ಬರವಣಿಗೆಯ ಸಿದ್ಧವಸ್ತುಗಳಿಂದ ಬಿಡುಗಡೆ ಹೊಂದಿ ತಮ್ಮ ಮನದಂಗಳದ ಸಂಕಟ, ದುಗುಡ, ದುಮ್ಮಾನ, ಸಡಗರ, ಜಾತ್ರೆ, ಪ್ರೇಮ, ಪ್ರೀತಿ, ವಿಶ್ವಾಸ, ಗೌರವ, ಸಾವು, ಆಧ್ಯಾತ್ಮ, ದೊಡ್ಡತನ, ಸಣ್ಣತನ, ಚರಿತ್ರೆ, ಉದ್ಯೋಗ, ಜಾಗತೀಕರಣದ ಪರಿಣಾಮಗಳು,

ಗ್ರಾಮ್ಯ ಜೀವನದ ನಗರೀಕರಣದ ಹೊಸಮುಖಗಳು, ವ್ಯಕ್ತಿ ವ್ಯಕ್ತಿಗಳ ನಡುವಿನ ಜಗಳ, ಹಿಂಸೆ, ನಯವಂಚಕತನ ಹಾಗೂ ಕ್ಷುಲ್ಲಕ ಸಂಗತಿಗಳೆಲ್ಲವನ್ನೂ ಕಥೆಯಾಗಿಸುವಂತಹ ಪ್ರಯತ್ನಗಳು ನಡೆದಿವೆ.

**ಅವಸರ ಮತ್ತು ವೇಗ**

ಜಾಗತೀಕರಣದ ನಮ್ಮ ಈ ಸಮಕಾಲೀನ ಸಮಾಜದ ಪ್ರತಿಯೊಂದು ಅಂಶಗಳೂ ವೇಗದ ಬದುಕಿನಲ್ಲಿ ಸಾಗುತ್ತಿವೆ. ಒಬ್ಬ ವ್ಯಕ್ತಿ ಬೆಳಿಗ್ಗೆ ಏಳುವುದರಿಂದ ಹಿಡಿದು ರಾತ್ರಿ ಮಲಗುವವರೆಗೂ ಒಂದಿಲ್ಲೊಂದು ಸಮಯದ ವೇಳಾಪಟ್ಟಿಯನ್ನು ಹಾಕಿಕೊಳ್ಳುವ ಅನಿವಾರ್ಯತೆಯಿದೆ. ಬದುಕನ್ನು ಕಟ್ಟಿಕೊಳ್ಳಲು ದೊಡ್ಡ ದೊಡ್ಡ ನಗರಗಳಲ್ಲಿ ವಾಸಿಸುವ, ದುಡಿಯುವ ಅದೆಷ್ಟೋ ಮಂದಿ ಈ ವೇಗದ ದಾವಂತಕ್ಕೆ ಹೊಂದಿಕೊಳ್ಳಬೇಕಾಗಿರುವುದು ಅನಿವಾರ್ಯವಾಗಿದೆ. ಇವೆಲ್ಲವುಗಳ ನಡುವೆ ತಮ್ಮ ಅನುಭವಗಳನ್ನು ಹಂಚಿಕೊಳ್ಳಲು ಕೂಡ ಇಂತಿಷ್ಟೇ ಸಮಯವನ್ನು ಮೀಸಲಿಡುವಂತಾಗಿದೆ. ಈ ರೀತಿಯಾದ ಬದುಕಿನಲ್ಲಿ ಮಾನವನ ಕೌಟುಂಬಿಕ ಸಂಬಂಧಗಳ ಬಾಂದವ್ಯ ಸಾಮರಸ್ಯತೆಯ ನಡುವೆ ಪೂರ್ಣ ಪ್ರಮಾಣದಲ್ಲಿ ಬೆರೆತು ಪ್ರೀತಿ, ಸ್ನೇಹ, ವಿಶ್ವಾಸಗಳನ್ನು ಉಳಿಸುವುದು ಮತ್ತು ಗಳಿಸುವುದು ದುಸ್ಥರವಾದ ಸಂಗತಿಯಾಗಿದೆ. ಸಮಕಾಲೀನ ಔಚಿತ್ಯದ ಈ ಹೊಸತಲೆಮಾರಿನ ಕಾಲಘಟ್ಟವು ಹೊಸ ಹೊಸ ಅನ್ವೇಷಣೆ ಮತ್ತು ಆವಿಷ್ಕಾರಗಳಿಗೊಳಗಾಗಿ ತೆರೆದ ಪರಿಸರವನ್ನು ಸೃಷ್ಟಿಸಿದೆ. ತಾಂತ್ರಿಕತೆಯು ಮಾನವನ ಬದುಕಿನ ವೇಗವನ್ನು ಹೆಚ್ಚಿಸಿದೆ. ಹಳ್ಳಿಗಳ ಪ್ರಾದೇಶಿಕ ಸಂಸ್ಕೃತಿಯ ಪಲ್ಲಟಗಳಾಗಿ, ನಗರ ಪ್ರದೇಶಗಳಾಗಿ ಬದಲಾಗುತ್ತಿವೆ. ಅಲ್ಲದೆ ಈಗಾಗಲೇ ಅಸ್ಥಿತ್ವದಲ್ಲಿರುವ ನಗರ ಪ್ರದೇಶಗಳ ತೀವ್ರವಾದ ಬೆಳವಣಿಗೆಯಿಂದಾಗಿ ಜಾಗತಿಕ ವಿದ್ಯಮಾನಗಳನ್ನು ಎದುರಿಸಬೇಕಾದ ಅನೇಕ ಸವಾಲುಗಳುಳ್ಳ ಒತ್ತಡಗಳನ್ನು ಸೃಷ್ಟಿ ಮಾಡುತ್ತಿವೆ. ಹಾಗಾಗಿ ಕಥೆಗಾರರಲ್ಲಿ ಅವಸರ ಎನ್ನುವುದು ಬದುಕಿನ ಅವಸ್ಥಾಂತರಗಳನ್ನು, ವಿಲಕ್ಷಣವಾದ ವಾತಾವರಣವನ್ನು ನಿರ್ಮಿಸುತ್ತಿದೆ. ಕೆಲವರು ತಮ್ಮ ಆತ್ಮತೃಪ್ತಿಗಾಗಿ, ಸಂತೋಷಕ್ಕಾಗಿ ಕಥೆಗಳನ್ನು ರಚಿಸಿದರೆ, ಇನ್ನೂ ಕೆಲವರು ಪ್ರಶಸ್ತಿಗೋಸ್ಕರವಾಗಿ, ವೈಯಕ್ತಿಕ ಪ್ರತಿಷ್ಠೆಗಾಗಿ ಬರೆಯುವ ಕಥೆಗಾರರಿದ್ದಾರೆ. ಅವರಲ್ಲಿಯೂ ಕೂಡ ಈ ಅವಸರ ಎನ್ನುವುದು ಆವರಿಸಿಕೊಂಡು ಸಮಾಜದ ಸಮಾಧಾನದ ಮಗ್ಗಲನ್ನು ಮುರಿದು ದಿಕ್ಕು ದೆಸೆಗಳನ್ನು ತಲೆಕೆಳಗಾಗುವಂತೆ ಮಾಡಿದೆ.

**ಆಯ್ಕೆಯ ಗೊಂದಲ**

ಈ ಹೊಸತಲೆಮಾರಿನ ಕಥೆಗಾರರು ಎದುರಿಸುತ್ತಿರುವ ಮತ್ತೊಂದು ಸವಾಲು ಇದು. ಇತ್ತೀಚೆಗೆ ಬಹುತೇಕ ಬರಹಗಾರರು ಬರೆಯುತ್ತಿದ್ದಾರೆಯೇ ವಿನಃ ಅವರು ನಿರ್ದಿಷ್ಟವಾದ ವಿಷಯ ವಸ್ತುವೊಂದನ್ನು ಆಯ್ಕೆ ಮಾಡುವಲ್ಲಿ, ಸಾಹಿತ್ಯ ಪ್ರಕಾರವನ್ನು ಆಯ್ದುಕೊಳ್ಳುವಲ್ಲಿ ಗುರುತರವಾದ ಗೊಂದಲ ಅನುಭವಿಸುತ್ತಿದ್ದಾರೆ. **"**ಈ ಕಾಲ ಚಳುವಳಿಗಳು ಇಲ್ಲದ ಕಾಲ. ಎಲ್ಲರೂ ಮುಕ್ತವಾಗಿ ಬರೆಯುತ್ತಿದ್ದಾರೆ. ಇದು ಬರಹಗಾರನಿಗೆ ಒಂದು ರೀತಿಯಲ್ಲಿ ಅನುಕೂಲ ಮತ್ತು ಅನನುಕೂಲವೂ ಹೌದು.ಒಂದು ಚಳುವಳಿ ಚಾಲ್ತಿಯಲ್ಲಿದ್ದಾಗ ಆ ಚಳುವಳಿಯ ಆಶಯಗಳಿಗೆ ತಕ್ಕ ಹಾಗೆ ಬರೆಯುವುದು. ಇದು ಸುಲಭದ ದಾರಿ.ಆದರೆ, ಯಾವುದೇ ಚಳುವಳಿ ಇಲ್ಲದಾಗ ಬರವಣಿಗೆಗೆ ಸಿದ್ಧ ಮಾದರಿಗಳಿರುವುದಿಲ್ಲ. ಆಗ ಆಯಾಯ ಬರಹಗಾರರೇ ತಮ್ಮ ಜಾಡು ಕಂಡುಕೊಳ್ಳಬೇಕು. ಅಂತಹದೊಂದು ಜಾಡು ಕಂಡುಕೊಳ್ಳುವ ತಾಲೀಮು ಸದ್ಯ ನಡೆದಿರುವುದು ಗೋಚರವಾಗುತ್ತಿದೆ.**"**[2] ನಿಜಕ್ಕೂ ಈ ಮಾತು ಒಪ್ಪಿಕೊಳ್ಳಬೇಕಾದದ್ದಾಗಿದೆ. ಏಕೆಂದರೆ ಜಾಗತೀಕರಣವು ಉಚ್ಛ್ರಾಯ ಸ್ಥಿತಿಯಲ್ಲಿರುವ ಈ ಕಾಲಘಟ್ಟದಲ್ಲಿ ಯಾವುದೇ ಸ್ವರೂಪದ ಒಂದು ಗಟ್ಟಿಯಾದ ಸಿದ್ಧಾಂತ, ತಾತ್ವಿಕತೆ, ಚಳುವಳಿಯು ಅಂತಿಮವಾಗಿ ರೂಪುಗೊಂಡಿಲ್ಲವಾದ್ದರಿಂದ ಅಥವಾ

ಇನ್ನೂ ಮುಂದೆ ರೂಪುಗೊಳ್ಳುತ್ತದೆ ಎನ್ನುವ ಭರವಸೆಯ ಧೋರಣೆಯಿಂದ ಇರುವ ಸಂಕ್ರಮಣ ಸ್ಥಿತಿಯಂತಾಗಿದ್ದು, ಯಾವುದೇ ಸೈದ್ಧಾಂತಿಕ ಖಚಿತತೆ, ತಾತ್ವಿಕ ಸ್ಪಷ್ಟತೆ ಇಲ್ಲದೇ ಇರುವಂತಹ ಆಯ್ಕೆಯ ಗೊಂದಲವು ನಮ್ಮ ಕಥೆಗಾರರನ್ನು ಆವರಿಸಿ ಕಾಡಿದೆ ಎನ್ನಬಹುದು. "ಕನ್ನಡ ಸಣ್ಣಕಥೆ ತನ್ನ ಸಾಮಾಗ್ರಿ ಆಯ್ಕೆಯ ಕ್ಷೇತ್ರವನ್ನು ವಿಸ್ತಾರಗೊಳಿಸಿಕೊಂಡಿದೆ. ಹಲವು ನಿಲುವುಗಳನ್ನು ಪ್ರತಿಬಿಂಬಿಸಿದೆ, ಹೊಸ ಹೊಸ ತಂತ್ರಗಳನ್ನು ಬಳಸಿದೆ, ಭಾಷೆಯ ಬಳಕೆಯಲ್ಲಿ ವಿಶಿಷ್ಟ ಪ್ರಯೋಗಗಳನ್ನು ಆಯ್ಕೆಯನ್ನು ನಡೆಸಿದೆ."[3] ಎನ್ನಬಹುದು.ಕೆಲವು ಕಥೆಗಾರರು ಅತ್ಯಂತ ಶಿಸ್ತಿನಿಂದ, ತನ್ಮಯತೆಯಿಂದ ಪ್ರಜ್ಞಾಪೂರ್ವಕವಾಗಿ ಬರೆಯುತ್ತಿದ್ದಾರೆ. ಇನ್ನೂ ಕೆಲವರು ಬರೆಯುತ್ತಾ ಬರೆಯುತ್ತಾ ಕಥೆಗಳ ಸರಣಿಗಳೇ ಮುಂದುವರಿದು ನೀಳ್ಗತೆಗಳಾಗಿ, ಕಾದಂಬರಿಗಳಾಗಿಯೂ ಪರಿವರ್ತನೆಯಾಗುವ ಸಾಧ್ಯತೆಗಳಿವೆ. ಹಾಗಾಗಿ ಕಥೆಗಾರರು ತಮ್ಮ ಆಯ್ಕೆಯ ಗೊಂದಲವನ್ನು ಅನುಭವಿಸುತ್ತಿದ್ದಾರೆನ್ನಬಹುದು.

**ಭಾಷಿಕ ಸಮಸ್ಯೆ**

ಭಾಷೆ ಮಾನವನ ಅವಿಭಾಜ್ಯ ಮಾಧ್ಯಮ, ಇದನ್ನು ಸಮರ್ಥವಾಗಿ ಬಳಸಿಕೊಂಡಲ್ಲಿ ಮಾತು ಬಾರದ ಮೂಗನು ಸಂಜ್ಞೆಗಳ ಮೂಲಕ ತನ್ನ ಮನೋನಿವೇದನೆಗಳನ್ನು ಮತ್ತು ಅನಿಸಿಕೆಗಳನ್ನು ಹಂಚಿಕೊಳ್ಳಲು ಸಾಧ್ಯವಿದೆ. ಈ ಆಧುನಿಕೋತ್ತರ ತಂತ್ರಜ್ಞಾನ ಯುಗದಲ್ಲಿ ನಾವು ಮಾತು ಬಂದರೂ ಬಾರದವರಾಗಿ ಬಿಟ್ಟಿದ್ದೇವೆ. ಹಿಂದೆಲ್ಲಾ ನಮ್ಮ ಭಾವನೆಗಳನ್ನು ಪತ್ರದ ಮುಖೇನ ಹಂಚಿಕೊಳ್ಳುತ್ತಿದ್ದೆವು, ಆದರೀಗ ಆ ಸಮಸ್ಯೆಯನ್ನು ಮೊಬೈಲ್ ತಂತ್ರಜ್ಞಾನ ಸರಳೀಕರಣಗೊಳಿಸಿದೆ. ಯಾವುದೇ ಕಥೆಗಾರನಿಗೆ ತನ್ನ ಪ್ರದೇಶದ ಭಾಷೆಯೂ ಕೂಡ ಮುಖ್ಯವಾಗುತ್ತದೆ. ಓದುಗರ ಮನಸ್ಸಿನಲ್ಲಿ ಉಳಿಯುವಂತೆ ಮಾಡಲು ನಿರೂಪಿಸುವ ಭಾಷೆ ದೇಸಿತನದ ಸ್ಥಳೀಯವಾಗಿ ಆಕರ್ಷಕವಾಗಿರಬೇಕಾಗುತ್ತದೆ. "ಕನ್ನಡ ಸಣ್ಣ ಕಥೆಗಾರರು ಭಾಷೆಯ ಬಿಲ್ಲನ್ನು ತಮ್ಮ ಹಲವು ಉದ್ದೇಶಗಳಿಗೆ ಹೊಂದಿಕೊಳ್ಳುವಂತೆ ಬಾಗಿಸಿ ಶರಸಂಧಾನ ಮಾಡಿದ್ದಾರೆ. ಆದರೆ ಸಂಭಾಷಣೆಯ ಕಲೆಯತ್ತ ಗಮನ ಸಾಕಾದಷ್ಟು ಹರಿದಿಲ್ಲ. ಭಾಷೆಯಿಂದ ಎಷ್ಟು ಕಿಡಿಗಳನ್ನು ಹೊರಡಿಸಬೇಕೋ ಅಷ್ಟನ್ನು ಹೊರಡಿಸುವ ಪ್ರಯತ್ನ ನಡೆದಿಲ್ಲ"[4] ಎನ್ನಬಹುದು. ಇತ್ತೀಚಿನ ದಿನಗಳಲ್ಲಿ ಬರೆಯುತ್ತಿರುವ ಬರಹಗಾರರು ಏಕಕಾಲದಲ್ಲಿ ಬೇರೆ ಬೇರೆ ಭಾಷೆಗಳನ್ನು ಕಲಿತಿರುವುದರಿಂದ ತಮ್ಮ ಬರವಣಿಗೆಯಲ್ಲಿ ಆಂಗ್ಲಭಾಷೆಯನ್ನು ಸಲೀಸಾಗಿ ಬಳಸುತ್ತಾರೆ. ಕನ್ನಡ ಕಥೆಗಳಲ್ಲಿ ಬೆಳಗಾವಿ ಭಾಗದ ಕಥೆಗಾರರು ಮರಾಠಿಯನ್ನು, ಬಳ್ಳಾರಿ ಸೀಮೆಯಲ್ಲಿ ತೆಲುಗು ಭಾಷೆಯನ್ನು, ಕರಾವಳಿ ಭಾಗದಲ್ಲಿ ತುಳು ಮತ್ತು ಕೊಂಕಣಿ ಭಾಷೆಯನ್ನು ನೇರವಾಗಿ ಬಳಸಿಕೊಳ್ಳುತ್ತಾರೆ. ಇನ್ನೂ ಕಂಪ್ಯೂಟರ್ ಜಗತ್ತು ಅಭಿವೃದ್ಧಿಯಾದಾಗಿನಿಂದ ಆದ ಈ ಭಾಷಾ ಸ್ವೀಕರಣ ಮೊಬೈಲ್ ಜಗತ್ತನ್ನು ದಾಟಿ ಇಂದಿನ ಕೊರೊನಾ ಕಾಲದ ಅಗತ್ಯ ಪದಗಳನ್ನು ಅನಿವಾರ್ಯವಾಗಿ ಬಳಸುವಂತೆ ಮಾಡಿದೆ. ಇತ್ತೀಚಿನ ದಿನಗಳಲ್ಲಿ ಅನುವಾದಗೊಂಡಿರುವ ಕಥೆಗಳು ಕೂಡ ಅಲ್ಲಲ್ಲಿ ಕಾಣಸಿಗುತ್ತಿವೆ. ಹಾಗಾಗಿ ಕಥೆಗಾರರಿಗೆ ಈ ಭಾಷೆಯು ಕೂಡ ಒಂದು ಮಾಧ್ಯಮವಾಗಿ ಪ್ರವಹಿಸುವುದರಲ್ಲಿ ಮುಖ್ಯ ಪಾತ್ರವಹಿಸುತ್ತದೆ.

**ಸ್ವಂತಿಕೆಯ ಸಮಸ್ಯೆ**

ತಾಂತ್ರಿಕೋತ್ತರ ಯುಗದಿಂದ ದಾಟಿ ಇಂದಿನ ಡಿಜಿಟಲೀಕರಣದ ಕಾಲಘಟ್ಟದಲ್ಲಿರುವ ನಾವು ಹೊಸತಲೆಮಾರಿನ ವೈಯಕ್ತಿಕತೆಗೆ ಹೊಂದಿಕೊಳ್ಳಬೇಕಾಗಿದೆ. ಇಲ್ಲಿ ಎಲ್ಲವೂ ಸ್ವಂತಿಕೆಯಿಂದ ಇರಬೇಕಾಗುತ್ತದೆ. ಏಕೆಂದರೆ ತಂತ್ರಜ್ಞಾನದ ಜೊತೆ ಜೊತೆಗೆ ವ್ಯಕ್ತಿಗತ ಸಂಬಂಧಗಳು ಭಿನ್ನವಾಗಿ ಬೇರೆ ಬೇರೆಯಾಗುತ್ತಿವೆ. ಕೂಡು ಕುಟುಂಬಗಳು ನಿಧಾನವಾಗಿ ಮಾಯವಾಗುತ್ತಿವೆ. ಒಂದು ಕುಟುಂಬದ ದಿನಬಳಕೆಯ ವಸ್ತುವಿನ ಜೊತೆಗೆ, ಕುಡಿಯುವ

ನೀರನ್ನು ಕೊಂಡುಕೊಳ್ಳುವ ನಾವು ಆರ್ಥಿಕ ಸ್ವಾವಲಂಬನೆಯಿಂದ ಹಿಡಿದು, ಇಂದು ತಂದೆ–ತಾಯಿಯರ ಪ್ರೀತಿಯನ್ನು ಬಾಡಿಗೆ ರೂಪದಲ್ಲಿ ಪಡೆಯಬಹುದಾದ ವಿಷಮ ಕಾಲದಲ್ಲಿ ಬದುಕುತ್ತಾ ಇದ್ದೇವೆ. ನಾವು ಯಾವುದರಲ್ಲೂ ಯಾರ ಮೇಲೂ ಪರಾವಲಂಬಿಯಾಗಬಾರದು ಎನ್ನುವ ಈ ಜಾಗತೀಕರಣದ ಬದುಕಿನಲ್ಲಿ, ಹಣವೊಂದಿದ್ದರೆ ಎಲ್ಲವನ್ನೂ ಕೊಳ್ಳಬಹುದು ಎಂಬ ಭಾವನೆ ಬಂದಿರುವುದು ಮತ್ತು ನಮ್ಮ ಸಮಾಜದಲ್ಲಾಗುತ್ತಿರುವ ಪರಿಣಾಮಕಾರಿ ಬದಲಾವಣೆಗಳು ಕೂಡ ಕಥೆಗಾರರ ಬರಹದ ಮೇಲೆ ಸೋಜಿಗ ಸ್ವರೂಪದ ತಲ್ಲಣಗಳನ್ನುಂಟು ಮಾಡಿವೆ. ಜಾಗತೀಕರಣವು ಪ್ರತಿಯೊಬ್ಬ ಮನುಷ್ಯನನ್ನು ಸ್ವಾರ್ಥತನಕ್ಕೆ ಮತ್ತಷ್ಟು ತಳ್ಳುವಂತೆ ಮಾಡಿ ಎಲ್ಲವೂ ಸೆಲ್ಫೀಯುಗವೆಂದು ಕರೆಯುವಂತೆ ಮಾಡಿದೆ. ಈ ಕಾಲಘಟ್ಟದಲ್ಲಿ ನಮ್ಮ ಗ್ರಾಮೀಣರು ಹೊಟ್ಟೆಪಾಡಿಗಾಗಿ ಕಳೆದುಕೊಂಡ ಬದುಕನ್ನು ಹರಸುತ್ತ ನಗರಕ್ಕೆ ವಲಸೆ ಬಂದು, ಇತ್ತ ಹಿಂತಿರುಗಿ ಹಳ್ಳಿಗೂ ಹೋಗಲಾರದೆ, ನಗರದಲ್ಲೂ ಇರಲಾರದೆ ತ್ರಿಶಂಕು ಪರಿಸ್ಥಿತಿಯಲ್ಲಿರುವ ಸಂದರ್ಭದಲ್ಲಿ ಜೀವನದ ಹೊಸ ಹುಡುಕಾಟ ಮಾಡುತ್ತಿರುವುದು ಗಮನಾರ್ಹ ಅಂಶವಾಗಿದೆ. ಇದು ಕಥೆಗಾರರನ್ನು ಕೂಡ ಬೆಂಬಿಡದೆ ಆವರಿಸಿದೆ ಎನ್ನಬಹುದು. ಬಹುತೇಕ ಕಥೆಗಳಲ್ಲಿ ಮೋಸ, ವಂಚನೆ, ಸ್ವಾರ್ಥತನದ ಕಥಾವಸ್ತುಗಳಿರುವುದನ್ನು, ಸ್ವಾವಲಂಬಿಯಾಗಿ ಬದುಕನ್ನು ಕಟ್ಟಿಕೊಳ್ಳುತ್ತಿರುವ, ಅವುಗಳಿಂದಾಗುತ್ತಿರುವ ಪರಿಣಾಮಗಳನ್ನು ಕಥೆಗಾರರು ವಿಷಯವಸ್ತುವನ್ನಾಗಿ ಆಯ್ಕೆ ಮಾಡಿಕೊಂಡು ಅಭಿವ್ಯಕ್ತಪಡಿಸಿರುವುದನ್ನು ಕಾಣಬಹುದು.

**ಬಡತನ, ಹಸಿವು, ನಿರುದ್ಯೋಗ, ಅವಮಾನ, ವಲಸೆ**

ಆಧುನಿಕೋತ್ತರ ಈ ಯುಗದಲ್ಲಿ ಜಾಗತೀಕರಣವು ಹಳ್ಳಿಗಳ ಜೀವನ ಸಂಸ್ಕೃತಿಯ ಮೇಲೆ ಸ್ಥಿತ್ಯಂತರಗಳಾಗಿ, ಪ್ರಭಾವ ಭೀರಿ ಪ್ರತಿಯೊಬ್ಬ ವ್ಯಕ್ತಿಯನ್ನು ಕಂಟಕಪ್ರಾಯವಾಗಿ ಕಾಡುತ್ತಿರುವ ಸಮಸ್ಯೆ ಎಂದರೆ ಬಡತನ, ಹಸಿವು, ಅವಮಾನ, ನಿರುದ್ಯೋಗ, ವಲಸೆಗಳು. ಇವು ನಿಜಕ್ಕೂ ಈ ಹೊಸತಲೆಮಾರಿನ ಕಥೆಗಾರರ ಮೇಲೆ ಅಗಾದವಾಗಿ ಬಾಧಿಸಿವೆ ಎನ್ನಬಹುದು. ಭಾರತ ದೇಶದಂತಹ ವಿಶಾಲವಾದ ಪ್ರದೇಶದಲ್ಲಿ ಮಳೆಯಾಶ್ರಿತ ಭೂಮಿಯನ್ನು ನಂಬಿಕೊಂಡು ಬದುಕುತ್ತಿರುವ ನಾವುಗಳು, ನಮ್ಮಲ್ಲಿ ಬರಪೀಡಿತ ಹಳ್ಳಿಗಳೇ ಪ್ರಧಾನವಾಗಿ ಕಂಡು ಬಂದರೂ ಇಲ್ಲಿ ವಾಸಿಸುವ ಜನರಲ್ಲಿ ಅಭದ್ರತೆಯು ಹಲವು ಸ್ವರೂಪದ ಸಮಸ್ಯೆಗಳನ್ನು ಸೃಷ್ಟಿಸಿದೆನ್ನಬಹುದು. ಬಡತನ, ಬಡತನದಿಂದ ಹಸಿವು, ಅವಮಾನಗಳು ಉಂಟಾಗಿ, ಅವಮಾನ ಮತ್ತು ಹಸಿವು ತಣಿಸಿಕೊಳ್ಳಲು, ನಿರೂದ್ಯೋಗವನ್ನು ನೀಗಿಸಲು ಉದ್ಯೋಗವನ್ನು ಅರಸಿ ವಲಸೆ ಹೋಗುವುದು ನಿರಂತರವಾಗಿ ಕಾಡುವ ಪ್ರಕ್ರಿಯೆಗಳಾಗಿವೆ. ಇವು ಸಮಾಜದಲ್ಲಿ ಆಗಿರುವ, ಆಗುತ್ತಿರುವ ಪಲ್ಲಟಗಳಾಗಿ ಬದಲಾಗಿವೆ. ಈ ರೀತಿಯ ಅಂಶಗಳು ನಮ್ಮ ಬರಹಗಾರರು ತಮ್ಮ ಕಥೆಗಳಲ್ಲಿ ತಂದಿರುವುದು ನಿಜಕ್ಕೂ ಅವುಗಳನ್ನು ನಿರೂಪಿಸುವ ಪ್ರಯತ್ನದಲ್ಲಿ ಹಲವು ಸ್ವರೂಪದ ತಲ್ಲಣಗಳನ್ನನುಭವಿಸಿದ್ದಾರೆನ್ನಬಹುದು.

ಈ ಮೇಲಿನ ಇನ್ನೂ ಮುಂತಾದ ಅಂಶಗಳುಳ್ಳ ತಲ್ಲಣಗಳು ಈ ಹೊತ್ತಿನ ಕಥೆಗಾರರ ಕಥೆಗಾರಿಕೆಯಲ್ಲಿ ಎದುರಿಸುತ್ತಿದ್ದಾರೆ. ಇವು ನಮ್ಮ ಬದುಕಿನ ನಿತ್ಯದ ಭಾಗಗಳಾಗಿ ವಾಸ್ತವಕ್ಕೆ ಹಿಡಿದ ಕೈಗನ್ನಡಿಯಂತಿವೆ. ಇದುವರೆಗೂ ಕಥಾಜಗತ್ತು ಎಂದೂ ಕಂಡಿಲ್ಲದ ಹೊಸ ಪರಿಭಾಷೆಯಲ್ಲಿ ಅಭಿವ್ಯಕ್ತಪಡಿಸಲು ತವಕಿಸುತ್ತಿದೆ. ಸಮಕಾಲೀನ ಸಂದಿಗ್ಧತೆಗಳಿಗೆ ಅನುಸಂದಾನವಾಗುತ್ತಾ ತನ್ನದಲ್ಲದ್ದನ್ನು ಹೇಗೆ ಗ್ರಹಿಸುವುದು ಎಂಬ ಜಿಜ್ಞಾಸೆಯಲ್ಲಿ, ಇಲ್ಲದ್ದನ್ನು ಹುಡುಕುವ, ಇರುವಿಕೆಯ ನೆಲೆಯಲ್ಲಿ ಕಳೆದುಹೋದದ್ದರ ಅಂಶಗಳನ್ನು ಹುಡುಕುವ ಮತ್ತು ಹೊಸ ಜೀವನಕ್ಕೆ ಹಲವು ರೀತಿಯ ತಿರುವುಗಳನ್ನು ನೀಡುವತ್ತ ಗಮನ ಹರಿಸುತ್ತಿದೆ.

ಇಡೀ ಜಗತ್ತನ್ನು ತನ್ನೊಳಗೆ ಗರ್ಭೀಕರಿಸಿಕೊಂಡಂತಿರುವ ಜಾಗತೀಕರಣದ ಸಕಲ ಸೌಲಭ್ಯಗಳನ್ನು ಅನುಭವಿಸುತ್ತಿರುವ ನಾವುಗಳು ಇದು ಉಳ್ಳವರ ಲೋಕವಾಗಿದೆ ಎಂದು ಹೇಳಬಹುದು. ಆಮದು ಮಾಡಿಕೊಳ್ಳುತ್ತಿರುವ ಸರಕುಗಳೇ ಇಂದು ಸಂಸ್ಕೃತಿಯಂತಾಗಿ ಇಡೀ ಬದುಕನ್ನು ಅರ್ಥಹೀನವನ್ನಾಗಿ ಮಾಡಿ ಸೃಜನಶೀಲ ಬರಹಗಾರರನ್ನು ವೈರುಧ್ಯವಾಗಿ ಇದು ಕಾಡಿಸಿದೆ ಎಂಬುದರಲ್ಲಿ ಯಾವ ತಪ್ಪಾಗಲಾರದು.ಕನ್ನಡದ ಹೊಸತಲೆಮಾರಿನ ಕಥೆಗಾರರಾದ ಸರ್ಜಾಶಂಕರ ಹರಳಿಮಠ ಅವರ 'ಬಾರಯ್ಯ ಬೆಳದಿಂಗಳೆ' ಕಥಾಸಂಕಲನದ ಒಂದು ಕಥೆ 'ಬಂಡಿಯಾದ ಬುದ್ಧ' ಕಥೆಯೂ, ವಿನಯಾ ಅವರ 'ಊರ ಒಳಗಣ ಬಯಲು' ಕಥೆಯೂ, ಎಚ್. ನಾಗವೇಣಿಯವರ 'ಮೀಯುವ ಆಟ' ಕಥಾ ಸಂಕಲನದ 'ತಾಯ್ತನ' ಎಂಬ ಕಥೆಗಳೂ ವ್ಯಕ್ತಿಗಳ ನಡುವಿನ ಪರಸ್ಪರ ನಡೆಸುವ ಮಾನವ ಸಂಸ್ಕೃತಿ, ಮಾನ ಪ್ರಾಣಗಳನ್ನು ಹಾಳು ಮಾಡುವ ಕೊಳ್ಳುಬಾಕ ಸಂಸ್ಕೃತಿ, ಒಂದೇ ಕುಟುಂಬದಲ್ಲಿ ಎಲ್ಲರೂ ಸಹಬಾಳ್ವೆಯ ಕನಸನ್ನು ಕಾಣುತ್ತಿದ್ದ ನಮಗೆ ಕೋಮುವಾದಿ ಸಮಸ್ಯೆಯಂತಹ ಭಯ ಮತ್ತು ಆತಂಕಗಳನ್ನು ಎದುರಿಸುವ ಸಂದರ್ಭದಲ್ಲಿ, ಮಾನವೀಯ ನೆಲೆಯಲ್ಲಿ ಬದುಕನ್ನು, ನವಸಂಸ್ಕೃತಿಯ ಉತ್ತಮ ಸಮಾಜವನ್ನು ಕಟ್ಟಿಕೊಡುವ ತಲ್ಲಣಗಳನ್ನು ಅಭಿವ್ಯಕ್ತಪಡಿಸುವ ಸೃಜನಶೀಲ ಕಥೆಗಾರರಾಗಿ ಕಾಣಿಸಿಕೊಳ್ಳುತ್ತಾರೆ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ.

ವಸುದೇಂದ್ರ ಮತ್ತು ವಿವೇಕ ಶಾನಭಾಗ ಹೊಸತಲೆಮಾರಿನ ಪ್ರಮುಖ ಕಥೆಗಾರರೆಂದೇ ಹೇಳಬಹುದು. ವಸುದೇಂದ್ರ ಅವರ 'ಚೇಳು', 'ಯುಗಾದಿ', 'ಹಂಪಿ ಎಕ್ಸ್‌ಪ್ರೆಸ್' ಕಥಾ ಸಂಕಲನಗಳು, ವಿವೇಕ ಶಾನಭಾಗರ 'ಹುಲಿಸವಾರಿ', 'ಮತ್ತೊಬ್ಬನ ಸಂಸಾರ' ಸಂಕಲನದೊಳಗಿನ ಕಥೆಗಳು ಜಾಗತೀಕರಣದ ಈ ಹೊತ್ತಿನ ತಲ್ಲಣಗಳನ್ನು ಹೊರ ಚೆಲ್ಲುತ್ತವೆ. ಸಮಕಾಲೀನ ಜಗತ್ತಿನ ಜನಸಾಮಾನ್ಯರ ಬದುಕು ಕಾರ್ಪೋರೇಟ್ ಸಂಸ್ಕೃತಿಯಿಂದಾಗಿ ಜೀವನ ಶೈಲಿಯಲ್ಲಿ ತೀವ್ರವಾದ ಬದಲಾವಣೆಗಳಾಗುವುದನ್ನು ಚಿತ್ರಿಸುತ್ತವೆ. ಶಾನಭಾಗರ ಮತ್ತೊಂದು ಕಥೆ 'ಹುಲಿಸವಾರಿ' ಇಲ್ಲಿಯೂ ಕೂಡ ಕಾರ್ಪೋರೇಟ್ ಪ್ರಪಂಚದ ವ್ಯಾಪಾರೀ ಮನೋಭಾವವು ಮಾನವೀಯತೆಯನ್ನು ಕಡೆಗಣಿಸಬೇಕಾಗಿರುವ ಸಂಕೀರ್ಣ ವಾತಾವರಣವನ್ನು ಚರ್ಚಿಸುತ್ತದೆ. ಇಲ್ಲಿನ ಕಥೆಗಳು ಅಂತಃಕರಣದ ಮಾನವೀಯ ಮೌಲ್ಯಗಳಲ್ಲಿ ವ್ಯತ್ಯಾಸಗಳಾಗಿರುವುದನ್ನು ಗುರುತಿಸುತ್ತವೆ. ತಮ್ಮ ನೆಲಮೂಲದ ಕಾಯಕದ ನೆಲೆಗಳನ್ನು, ಅವುಗಳ ಸ್ವರೂಪಗಳನ್ನು ಹೋಲಿಸಿ ನೋಡುವುದು ಒಂದು ದೃಷ್ಟಿಕೋನವಾದರೆ, ಕೆಲಸ ಮಾಡುವ ಕೇಂದ್ರಗಳಾದ ಕಾರ್ಪೋರೇಟ್ ಕಂಪನಿಗಳನ್ನೇ ತಮ್ಮ ನಿಜವಾದ ಬದುಕಿನ ನೆಲೆಗಳು ಎಂದು ಭಾವಿಸಿದವರು ಅದೆಷ್ಟೋ ಮಂದಿ ಇದ್ದಾರೆ. ಮತ್ತೊಂದು ಕಥೆ 'ಫಾಚರ್ ಫೋಚರ್' ಕಥೆಯಲ್ಲಿ ಶಾನಭಾಗರು ಶ್ರಮವಿಲ್ಲದೆ ಕೆಲವರ ಕೈಸೇರುವ ಸಂಪತ್ತು ನೈತಿಕತೆಯನ್ನು ಬದಿಗೆ ಸರಿಸುವ ಹಲವು ಸಾಧ್ಯತೆಗಳನ್ನು ತೋರ್ಪಡಿಸುತ್ತಾರೆ. ಒಡೆದು ಹೋಗುವ ಕೌಟುಂಬಿಕ ವ್ಯವಸ್ಥೆ, ಕಳೆದು ಹೋಗಿರುವ ಮೌಲ್ಯಗಳು, ಕೂಡಿಟ್ಟ ಸಂಪತ್ತು ಕಣ್ಣೆದುರಿಗೆ ಅಸಹಾಯಕವಾಗಿ ಅಡ್ಡಿಯಾಗಿ ನಿಲ್ಲುತ್ತದೆ. ಇಲ್ಲಿನ ಮನುಷ್ಯನ ಒಳಗೂ ಬೆಳೆಯುವ ದ್ವೇಷ ಪರಿವರ್ತಿತವಾಗಿದೆ ಎನ್ನಬಹುದು. ಮನುಷ್ಯ ಬೆಳೆದಂತೆಲ್ಲ ನಾಗರೀಕತೆಯನ್ನು ಉಳಿಸಿಕೊಂಡು ಸುತ್ತಲಿನ ಸಾಮಾಜಿಕ ಪರಿಸರವನ್ನು ಸರಿ ದಾರಿಗೆ ತರಬೇಕಾಗಿದೆ. ಇಲ್ಲಿರುವ ಸಂಪತ್ತು ಮತ್ತು ಅಧಿಕಾರಗಳ ಕಾರಣದಿಂದ ಬೆಳೆಯುತ್ತಿರುವ ಹಿಂಸೆಗೆ ಪರ್ಯಾಯವೇನು ಎಂಬ ನಿಗೂಢ ಚಿಂತನೆ ಕಥೆಯಲ್ಲಿ ಸೂಚ್ಯವಾಗಿ ವ್ಯಕ್ತವಾಗುತ್ತಾ ಹೋಗುತ್ತದೆ. ಇಂತಹ ಪ್ರಕ್ಷುಬ್ಧ ಮನಸ್ಸಿನ ಆಳುವ ವರ್ಗದ ವಿರೋಧಿಯಾಗಿ ನಿಲ್ಲದೆ, ಕೆನೆಗಟ್ಟಿದ ಹಾಲಿನಂತೆ ಪ್ರತಿರೋಧವನ್ನು ಹೊರಗೆಡವುತ್ತಾ ಪರಂಪರೆಯ

ಜೊತೆಗೆ ತಾಳೆ ಹಾಕದೆ, ಇದು ಸಮಕಾಲೀನ ಸಂಸ್ಕೃತಿಯ ವಿಸ್ತರಣೆ ಎಂಬಂತೆ ಆಯಾ ಕಥೆಗಾರರ ಪ್ರಾದೇಶಿಕ ನೆಲೆಗಳನ್ನು ವಿಶ್ಲೇಷಿಸುತ್ತಾ ಒಂದು ಹೊಸ ಸಾಂಸ್ಕೃತಿಕ ಜಗತ್ತನ್ನು ಸಮಾಜದೊಂದಿಗೆ ಬೆಸೆಯುವಂತಹ, ಪರಿಚಯಿಸುವಂತಹ ಪ್ರಯತ್ನಗಳೂ ಸದಾ ಜರುಗುತ್ತಿರುತ್ತವೆ ಎಂಬುದನ್ನು ಅತ್ಯಂತ ಸೂಚ್ಯವಾಗಿ ತಮ್ಮ ಆತಂಕ, ಜಿಜ್ಞಾಸೆ, ತಲ್ಲಣಗಳ ಮೂಲಕ ಅಭಿವ್ಯಕ್ತಪಡಿಸುತ್ತಾರೆ.

ಕಲಿಗಣನಾಥ ಗುಡದೂರು ಅವರು 'ಮತಾಂತರ', 'ಉಡಿಯಲ್ಲಿಯ ಉರಿ', 'ತೂತುಬೊಟ್ಟು', ಎಂಬ ಕಥಾ ಸಂಕಲನಗಳ ಮೂಲಕ ಹೊಸತಲೆಮಾರಿನ ಮಹತ್ವದ ಕಥೆಗಾರರಾಗಿದ್ದಾರೆ. ಗುಡದೂರು ಹೇಳಿಕೊಳ್ಳುವ ಹಾಗೆ "ಸಮಾಜಮುಖಿ ಪ್ರಜ್ಞೆ ಮನುಷ್ಯತ್ವದ ನೆಲೆ, ಸಾದೃಶ್ಯವೆನಿಸಬಹುದಾದ ಕಲ್ಪನೆಗಳೇ ನನ್ನ ಕಥೆಗಳ ತಿರುಳುಗಳು" ಎನ್ನುವ ಇವರು ತಮ್ಮ ಕಥಾಸಂರಚನೆಯ ಹಿನ್ನೆಲೆಯ ತಲ್ಲಣಗಳನ್ನು ಅಭಿವ್ಯಕ್ತಪಡಿಸುತ್ತಾರೆ. 'ಮತಾಂತರ', 'ಅವ್ವ', 'ಉರಿವ ಕೆಂಡದ ಮೇಲೆ' ಎಂಬ ಕಥೆಗಳಲ್ಲಿ ಜಾಗತೀಕರಣದ ಬಗೆಗೆ ಇರುವ ವಿರೋಧದ ಚರ್ಚೆಗಳು ಕಾಣಸಿಗುತ್ತವೆ. 'ಡಾಟರ್ ಆಫ್ ದುರುಗವ್ವ', 'ಮಾಮೂಲಿ ಗಾಂಧಿ', 'ಕತ್ತಲು' ಎಂಬ ಕಥೆಗಳಲ್ಲಿ ವಿಶಿಷ್ಟ ಕಥೆಗಾರಿಕೆಗೆ ಹೊಸದಾದ ಹಾದಿ ಹಿಡಿಯುತ್ತಾ ಬದುಕಿನ ವಿಕೃತಿಗಳಿಗೆ ನಿರ್ಲಿಪ್ತ ಭಾವದೊಂದಿಗೆ ಸಾಮಾಜಿಕ, ರಾಜಕೀಯ, ಆರ್ಥಿಕವಾದ, ಧಾರ್ಮಿಕವಾದ ಹಲವು ಬಿಕ್ಕಟ್ಟುಗಳನ್ನು ಎದುರಿಸುತ್ತಿರುವ ಸಂದರ್ಭದಲ್ಲಿ ಅವುಗಳಿಗೆ ಮುಖಾಮುಖಿಯಾಗುವುದರೊಂದಿಗೆ ನೊಂದ ಮನಸ್ಸಿಗೆ ದಿವ್ಯ ಔಷದಿಯಂತಹ ಸಾಂತ್ವನ ಬಯಸುವ ಮಾನವಪರ ಕಾಳಜಿಯನ್ನು ವ್ಯಕ್ತಪಡಿಸುವ ರೀತಿಯನ್ನು ಇಲ್ಲಿ ನಾವು ಕಾಣಬಹುದು.

ಎಚ್. ಟಿ. ಪೋತೆ ಅವರ 'ಚಮ್ಮಾವುಗೆ', ಮಹಾಂತೇಶ್ ನವಲ್ಕಲ್ ಅವರ 'ನೀರಿನ ನೆರಳು' ಮೋದೂರು ತೇಜ ಅವರ 'ಮರದೊಳಗಣ ಕಿಚ್ಚು', ಹಾಗೂ ಟಿ. ಎಸ್. ಗೊರವರರ 'ಭ್ರಮೆ' ಕಥಾಸಂಕಲನಗಳ ಮೂಲಕ ಹೊಸತಲೆಮಾರಿನ ದಲಿತ ಸಂವೇದನೆಗಳ ಕಥೆಗಾರರಾಗಿ ಗುರುತಿಸಿಕೊಳ್ಳುವುದರ ಜೊತೆಗೆ ನವಿರಾದ ರೀತಿಯಲ್ಲಿ ದಲಿತರ ನೋವು, ಸಂಕಷ್ಟಗಳನ್ನು, ಆಚಾರ–ವಿಚಾರ, ನಂಬಿಕೆ–ಸಂಪ್ರಾದಾಯಗಳನ್ನು ದಾಖಲಿಸುತ್ತಾರೆ. ಭಾರತ ದೇಶಕ್ಕೆ ಸ್ವಾತಂತ್ರ್ಯ ಬಂದು, ಕಾನೂನು ಬದ್ಧ ಸಂವಿಧಾನ ರಚನೆಯಾಗಿ ಹಲವು ವರ್ಷಗಳೂ ಕಳೆದರೂ, ದಮನಿತರ ಬಾಳಿನಲ್ಲಿ ಬೆಳಕು ಎನ್ನುವುದು ಒಂದು ರೀತಿಯಲ್ಲಿ ಮರೀಚಿಕೆಯಾಗಿ ಉಳಿದಿರುವುದು ವಿಪರ್ಯಾಸದ ಸಂಗತಿ ಎನ್ನಬಹುದು. ಈ ಹೊಸ ಜಗತ್ತಿನ ಬದುಕಿನ ಏರಿಳಿತಗಳು, ಕುಟುಂಬದೊಳಗಿನ ದ್ವೇಷ ಮತ್ತು ಅಸೂಯೆಗಳೊಂದಿಗೆ ಹೋರಾಡುವ ಸನ್ನಿವೇಶಗಳು ಕಥೆಗಳಲ್ಲಿ ಕಾಣಸಿಗುತ್ತವೆ. ಸಂಪ್ರದಾಯ, ಚರಿತ್ರೆಯೊಂದಿಗೆ ಸಂಬಂಧ ಬೆಸೆಯುವ ತವಕದಲ್ಲಿ ಮೌಢ್ಯಗಳಿಗೆ ಪ್ರತಿರೋಧವನ್ನು ಒಡ್ಡುತ್ತಿರುವಂತಹ ಸಂದರ್ಭಗಳು, ಅವಾಸ್ತವ ಸಂಗತಿಗಳನ್ನು ವೈಚಾರಿಕ ನೆಲೆಯಲ್ಲಿ ಅರ್ಥೈಸುವ ಪ್ರಯತ್ನಗಳೂ ಕೆ. ಎನ್. ಗಣೇಶಯ್ಯ ಅವರ 'ನೇಹಲ', 'ಪದ್ಮಪಾಣಿ', 'ಶಾಲಾಭಂಜಿಕೆ', ವಸುದೇಂದ್ರ ಅವರ 'ಹೊಟ್ಟೆಯೊಳಗಿನ ಗುಟ್ಟು', ಈ ಕಥೆಗಳೊಳಗೆ ಗುರುತಿಸಬಹುದು. ಹೀಗೆ ಚರಿತ್ರೆ, ಪುರಾಣ, ಸಾಂಪ್ರಾದಾಯಿಕತೆ, ಅನುಭಾವಿಕತೆ ಈ ಎಲ್ಲ ನೆಲೆಗಳನ್ನು ವರ್ತಮಾನದಲ್ಲಿಟ್ಟು ಪುನರ್ ಪರಿಶೀಲನೆಗೆ ಒಳಪಡಿಸುವ ಜಾಗತೀಕರಣದ ವಿದ್ಯಮಾನಗಳ ತಲ್ಲಣಗಳು ಹೊಸತಲೆಮಾರಿನ ಕಥೆಗಾರರಲ್ಲಿ ಹೆಚ್ಚಾಗಿ ಕಾಣಸಿಗುತ್ತವೆ ಎನ್ನಬಹುದು.

ಪರಿಸರ ನಾಶ, ನಕ್ಸಲೀಯರ ಸಮಸ್ಯೆ, ಜಾಗತೀಕರಣದ ಪ್ರಭಾವ, ಪ್ರಸ್ತುತ ಗಂಡ–ಹೆಂಡತಿಯರ ನಡುವಿನ ಜಗಳದಿಂದಾಗಿ ವಿಚ್ಚೇದನ, ಇಳಿವಯಸ್ಸಿನಲ್ಲಿ ವೃದ್ಧಾಶ್ರಮ ಸೇರುತ್ತಿರುವ ತಂದೆ–ತಾಯಿಯರ ಕಷ್ಟ, ನೋವು, ಕೌಟುಂಬಿಕ

ವ್ಯವಸ್ಥೆಯಲ್ಲಿನ ಸಾಮರಸ್ಯ ಕಡಿಮೆಯಾಗಿ ಹಾದಿ ತಪ್ಪಿದ ದಾಂಪತ್ಯ ಬದುಕು, ಸಮೃದ್ಧ ಬದುಕನ್ನು ಒಳಗೊಂಡಿದ್ದ ಗ್ರಾಮೀಣರ ಬದುಕು ಬಹುತೇಕ ಶಿಥಿಲಗೊಂಡಂತಾಗಿರುವ ಸನ್ನಿವೇಶಗಳು, ನಗರದತ್ತ ಮುಖ ಮಾಡಿಕೊಂಡಿರುವ ಗ್ರಾಮೀಣರ ಬದುಕು, ಜಾಗತೀಕರಣದ ಪ್ರಭಾವದಿಂದ ಹಳ್ಳಿಯ ಜನರ ಮುಗ್ಧತೆ, ನಶಿಸಿ ಹೋಗುತ್ತಿರುವ ಮಾನವೀಯ ಸಂಬಂಧಗಳು ಇಂತಹ ವಿಷಯ ವಸ್ತುಗಳನ್ನೊಳಗೊಂಡ ಕಥೆಗಳು ಈ ಹೊಸತಲೆಮಾರಿನ ಕಥೆಗಾರರಾದ ಕೆ. ನೀಲಾ ಅವರ 'ತಿಪ್ಪೆಯನರಸಿ ಮತ್ತು ಇತರ ಕಥೆಗಳು', 'ಜ್ಯೋತಿಯೊಳಗಣ ಕಾಂತಿ', ಅಲಕಾ ತೀರ್ಥಹಳ್ಳಿಯವರ 'ಈ ಕಥೆಗಳ ಸಹವಾಸವೇ ಸಾಕು', ಸರ್ಜಾಶಂಕರ ಹರಳಿಮಠರ 'ಬಾರಯ್ಯ ಬೆಳದಿಂಗಳೆ', ವಿನಯಾ ಒಕ್ಕುಂದ ಅವರ 'ಊರ ಒಳಗಣ ಬಯಲು', ಎಚ್.ನಾಗವೇಣಿ ಅವರ 'ಮೀಯುವ ಆಟ', 'ವಸುಂಧರೆಯ ಗ್ಯಾನ', ಎಂ. ಎಸ್. ವೇದಾ ಅವರ 'ಮುಳ್ಳ ಮನೆಯ ಮೇಲೆ', 'ದುಂಡವ್ವನ ದೆವ್ವ', ಲೋಕೇಶ್ ಅಗಸನಕಟ್ಟೆ ಅವರ 'ಹಟ್ಟಿಯೆಂಬ ಭೂಮಿಯ ತುಣುಕು', ಮಂಜುನಾಥ ಲತಾ ಅವರ 'ತೆಂಕಲಕೇರಿ', 'ಸನ್ ಆಫ್ ಸಿದ್ಧಪ್ಪಾಜಿ' ಎಂಬ ಹಲವಾರು ಹೊಸತಲೆಮಾರಿನ ಕಥೆಗಳಲ್ಲಿ ವಿವಿಧ ಸ್ವರೂಪದ ಭಾವಸಂವೇದನೆಗಳಿರುವುದನ್ನು ಕಾಣಬಹುದು.

"ಪ್ರಸ್ತುತ ದಿನಮಾನಗಳಲ್ಲಿ ಕಥನಗಳಲ್ಲಿ ಆಗುತ್ತಿರುವ ಪಲ್ಲಟಗಳು ಹಲವಾರು. ಇದಕ್ಕೆ ಲೋಕಗ್ರಹಿಕೆಯಲ್ಲಿ ಆದ ಬದಲಾವಣೆಗಳು ಕಾರಣವಾಗಿರಬಹುದು. ಆದರೆ ನಿರ್ದಿಷ್ಟ ಲೋಕಗ್ರಹಿಕೆಯ ಕ್ರಮಕ್ಕೆ ಬದಲಾಗಿ ಬಹುಮಾದರಿಯ ಕಥನ ಕ್ರಮಗಳನ್ನೂ ಅನುಸರಿಸುತ್ತಿರುವುದೂ ಗೋಚರವಾಗುವ ಅಂಶವಾಗಿದೆ. ಆ ಮೂಲಕಸಾಹಿತ್ಯದ ಅನನ್ಯತೆಯನ್ನು ಕಾಪಾಡಿಕೊಳ್ಳುವ ಅಗತ್ಯ ಮತ್ತು ಆತುರ ಇವತ್ತಿನ ಕಥೆಗಾರರಲ್ಲಿ ಕಾಣುವ ಮಹತ್ವದ ಗುಣವಾಗಿದೆ."[5] ನಿಜಕ್ಕೂ ಈ ಮಾತು ಒಪ್ಪಿತವಾಗಿರುವಂತಹದ್ದು. ಏಕೆಂದರೆ ಈ ಹೊತ್ತಿನ ಹೊಸತಲೆಮಾರಿನ ಕಥೆಗಾರರಲ್ಲಿ ಸಮಾಜವನ್ನು ಅರ್ಥ ಮಾಡಿಕೊಳ್ಳುವ ಮಾರ್ಗ ಬದಲಾಗಿದೆ. ಜಾಗತೀಕರಣದ ಪ್ರಭಾವಗಳು ಸಮಾಜದಲ್ಲಾಗುತ್ತಿರುವ ಪರಿಣಾಮಗಳನ್ನು ಗ್ರಹಿಸಬೇಕಾಗಿದೆ.

ಹೀಗೆ ಕನ್ನಡ ಸಾಹಿತ್ಯದಲ್ಲಿ ಕಥಾಸಾಹಿತ್ಯವು ನಿಧಾನವಾಗಿ ಬೆಳೆದು ಹೆಮ್ಮರವಾದಂತೆ ಅದರ ಅಂತರಂಗದ ತಲ್ಲಣಗಳು ವಿಭಿನ್ನ ಮಾದರಿಯನ್ನು ಅನುಸರಿಸಿವೆ ಎಂದು ಹೇಳಬಹುದು. ಹೊಸತಲೆಮಾರು ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಸೃಜನಶೀಲವಾಗಿ ತಮ್ಮನ್ನು ತಾವು ತೊಡಗಿಸಿಕೊಂಡು ಬರಹ ರೂಪವನ್ನು ಪಡೆಯಲೆತ್ನಿಸುತ್ತಿದೆ. ಪ್ರತಿ ಕಾಲಘಟ್ಟದಲ್ಲಿಯೂ ಒಂದಲ್ಲ ಒಂದು ರೀತಿಯ ವೈರುಧ್ಯಗಳು ಇದ್ದೇ ಇರುತ್ತವೆ, ಹಾಗೆಯೇ ಇಲ್ಲಿಯೂ ಕೂಡ ಜಾಗತೀಕರಣದ ಸೆಳೆತಕ್ಕೆ ಬಲಿಯಾಗಿ ತಳಸಮುದಾಯಗಳ ಬದುಕನ್ನು ತಲ್ಲಣಗೊಳಿಸುವಂತೆ ಕಥೆಗಾರರು ಬರೆಯುತ್ತಿದ್ದಾರೆ. ಜೊತೆಗೆ ಬೇರೆ ಬೇರೆ ವೃತ್ತಿಯಲ್ಲಿದ್ದು ತಮ್ಮ ಅನುಭವಲೋಕವನ್ನು ಕಟ್ಟುವತ್ತ ಬೆರಗು ಮೂಡಿಸುತ್ತಿದ್ದಾರೆ. ಈ ತಲೆಮಾರು ಬಂಡಾಯದ ಕಾವನ್ನು, ನವ್ಯದ ಕುಲುಮೆಯಲ್ಲಿ ಬೆಂದು ಹೊರ ಬಂದಂತೆ ಹೊಸ ಹೊಸ ಪರಿಭಾಷೆಯಲ್ಲಿ ಸಾಹಿತ್ಯ ಫಸಲನ್ನು ಕಟ್ಟಿಕೊಡುತ್ತಿದ್ದಾರೆ. ಪ್ರತಿಯೊಬ್ಬ ಕಥೆಗಾರನೊಳಗಿನ ಮುಗ್ಧತೆ, ಪ್ರೀತಿ, ವಿಶ್ವಾಸ, ನಂಬಿಕೆ, ಜಿಜ್ಞಾಸೆ, ಶ್ರದ್ಧೆ, ಅನುಭವ, ಆದರ್ಶ ಪ್ರಾಯವಾದ ಅಂಶಗಳು ವ್ಯಕ್ತವಾಗುತ್ತಿವೆ. ಹೀಗೆ ಒಟ್ಟಾರೆಯಾಗಿ ಹೇಳುವುದಾದರೆ ಜಾಗತೀಕರಣದ ಶುಕ್ರದೆಸೆಯಲ್ಲಿ ಹಲವಾರು ಹೊಸತಲೆಮಾರಿನ ಕಥೆಗಾರರು ತಮ್ಮದೇ ಆದಂತಹ ತಲ್ಲಣಗಳನ್ನು ತಮ್ಮ ಬರಹದ ಮುಖೇನ ಅಭಿವ್ಯಕ್ತಪಡಿಸುವ ಪ್ರಯತ್ನ ಮಾಡುತ್ತಿದ್ದಾರೆನ್ನಬಹುದು.

**ಕೊನೆಟಿಪ್ಪಣಿಗಳು**

1. ರಹಮತ್ ತರೀಕೆರೆ. (ಸಂ.) (2008). *ಹೊಸ ತಲೆಮಾರಿನ ತಲ್ಲಣ.* ಪುಟ. ಸಂಪಾದಕರ ಮಾತು.
2. ಗೊರವರ, ಟಿ.ಎಸ್. (ಸಂ.). (2020). *ಸಂಗಾತ ಪುಸ್ತಕ. ಸಂಚಿಕೆ–8.* ಪುಟ. 6.
3. ಶೇಷಗಿರಿರಾವ್, ಎಲ್.ಎಸ್. (2022). *ಆಧುನಿಕ ಕನ್ನಡ ಸಾಹಿತ್ಯ ನಡೆದು ಬಂದ ದಾರಿ.* ಪುಟ. 182.
4. ಅದೇ. ಪುಟ.185
5. ತಿಪ್ಪೇಸ್ವಾಮಿ, ಜಿ.ಆರ್. (2022). *ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ 4 ಸಣ್ಣಕಥೆ.* ಪುಟ.301.

**ಪರಾಮರ್ಶನ ಗ್ರಂಥಗಳು**


- ಬಸವರಾಜ ಸಬರದ (ಸಂ.). (2019). *ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯ ಘಟ್ಟಗಳು.* ಕರ್ನಾಟಕ ವಿದ್ಯಾವರ್ಧಕ ಸಂಘ.
- ಗೊರವರ, ಟಿ.ಎಸ್. (ಸಂ.). (2020). *ಸಂಗಾತ ಪುಸ್ತಕ. ಸಂಚಿಕೆ–8.* ಸಂಗಾತ ಪುಸ್ತಕ ಪ್ರಕಟಣೆ.
- ನಿಜಲಿಂಗಪ್ಪ ಮಟ್ಟಿಹಾಳ, ರಾಜೇಂದ್ರ ನಾಯಕ ಮತ್ತು ನಿಂಗಪ್ಪ ಮುದೆನೂರು (ಸಂ.). (2022). *ಕನ್ನಡ ಭಾರತಿ* 1 (1). *ಕನ್ನಡ ಸಂಶೋಧನಾ ಸಂಘ.* ಕರ್ನಾಟಕ ವಿಶ್ವವಿದ್ಯಾಲಯ.
- ರಹಮತ್ ತರೀಕೆರೆ. (ಸಂ.) (2008). *ಹೊಸ ತಲೆಮಾರಿನ ತಲ್ಲಣ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ರಾಘವೇಂದ್ರ ಪಾಟೀಲ. (2022). *ಮಾತು ಮಾತು ಮಥಿಸಿ ಸಾಹಿತ್ಯಕ ಸ್ಪಂದನ.* ಸಪ್ನ ಬುಕ್‌ಹೌಸ್.
- ರಾಘವೇಂದ್ರರಾವ್, ಎಚ್.ಎಸ್. (2020). *ನೀರಿಗೆ ಮೂಡಿದ ಆಕಾರ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ಶೇಷಗಿರಿರಾವ್, ಎಲ್.ಎಸ್. (2022). *ಆಧುನಿಕ ಕನ್ನಡ ಸಾಹಿತ್ಯ ನಡೆದು ಬಂದ ದಾರಿ.* ಅಂಕಿತ ಪುಸ್ತಕ.
- ತಿಪ್ಪೇಸ್ವಾಮಿ, ಜಿ.ಆರ್. (2022). *ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ–4 ಸಣ್ಣಕಥೆ.* ಕನ್ನಡ ಸಾಹಿತ್ಯ ಪರಿಷತ್ತು.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 150-155
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಮಾಸ್ತಿಯವರ ನಾಟಕಗಳು : ಪುರಾಣ ಮತ್ತು ಚರಿತ್ರೆಯ ಅನುಸಂಧಾನ

**ರಾಘವೇಂದ್ರ ಕೆ. ಆರ್[1] ಮತ್ತು ಡಾ. ಶಾಂತರಾಜು ಹೆಚ್. ವಿ[2]**

[1]ಸಂಶೋಧನಾ ವಿದ್ಯಾರ್ಥಿ, [2]ಸಹಾಯಕ ಪ್ರಾಧ್ಯಾಪಕರು

ಕನ್ನಡ ಅಧ್ಯಯನ ವಿಭಾಗ ಮತ್ತು ಸಂಶೋಧನಾ ಕೇಂದ್ರ, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ

**Abstract:**

*ಮಾಸ್ತಿಯವರು ನಾಟಕ ಸಾಹಿತ್ಯ ಪ್ರಕಾರದಲ್ಲಿ ಸಾಕಷ್ಟು ಫಲವತ್ತಾದ ಬೆಳೆ ಬೆಳೆದಿದ್ದಾರೆ. ಮಾಸ್ತಿಯವರು ಹದಿಮೂರು ಸ್ವತಂತ್ರ ನಾಟಕಗಳನ್ನು ರಚಿಸಿದ್ದಾರೆ. ಎಂಟು ಅನುವಾದ ನಾಟಕಗಳಾಗಿವೆ. ಅವರ ನಾಟಕಗಳನ್ನು ಸಾಮಾಜಿಕ, ಪೌರಾಣಿಕ ಹಾಗೂ ಐತಿಹಾಸಿಕ ನಾಟಕಗಳಾಗಿ ವಿಂಗಡಿಸಬಹುದಾಗಿದೆ. ಅನುವಾದಿತ ಕೃತಿಗಳಲ್ಲಿ ರವೀಂದ್ರನಾಥ ಠಾಕೂರರ "ಚಿತ್ರಾಂಗಧ" ಎಂಬ ನಾಟಕ ಬಿಟ್ಟು ಉಳಿದೆಲ್ಲಾ ನಾಟಕಗಳು ಷೇಕ್ಸಪಿಯರ್‌ನ ನಾಟಕಗಳಿಂದ ಅನುವಾದಿತಗೊಂಡಿವೆ. ಪ್ರಸ್ತುತ ಈ ಲೇಖನದಲ್ಲಿ ನಾಟಕಗಳಲ್ಲಿ ಕಂಡುಬರುವ ಪುರಾಣ ಮತ್ತು ಚರಿತ್ರೆಯ ಅನುಸಂಧಾನ ಕುರಿತು ಅಧ್ಯಯನ ಮಾಡಲಾಗಿದೆ.*

**Keywords:** *ಕನ್ನಡ ಸಾಹಿತ್ಯ, ಕನ್ನಡ ನಾಟಕಗಳು, ಪುರಾಣ ಮತ್ತು ಚರಿತ್ರೆ ಅನುಸಂಧಾನ.*

**ಪೀಠಿಕೆ**

ಮಾಸ್ತಿಯವರ ಸಾಹಿತ್ಯ ದ್ರವ್ಯ ಸಾಮಾಜಿಕ, ಐತಿಹಾಸಿಕ ಮತ್ತು ಪುರಾಣ ಮೂಲಗಳಿಂದ ಬಂದದ್ದು. ಅವರ ನಾಟಕಗಳು, ಪುರಾಣ ಮತ್ತು ಐತಿಹಾಸಿಕ ಘಟನೆಗಳ ಪುನರ್ ಸೃಷ್ಟಿಯಾಗಿವೆ. ಪೌರಾಣಿಕ ನಾಟಕಗಳಾದ ಶಾಂತ, ಸಾವಿತ್ರಿ, ಉಷಾ, ಪುರಂದರದಾಸ, ಕನಕಣ್ಣ ಇನ್ನೂ ಮುಂತಾದ ಪುರಾಣ ಕಥೆಗಳನ್ನೊಳಗೊಂಡ ಕಿರುನಾಟಕಗಳನ್ನು ಅವರು ರಚನೆ ಮಾಡಿದ್ದಾರೆ. ನಾಟಕಕಾರರಾಗಿ ಮಾಸ್ತಿಯವರು ತಮ್ಮ ನಾಟಕಗಳಲ್ಲಿ ವಸ್ತುವಿನ ಆಯ್ಕೆಯಲ್ಲಿ ಗತಕಾಲಕ್ಕೆ ಮೊರೆ ಹೋಗಿರುವುದರ ಗುಟ್ಟೇನು ಎಂಬ ಕುತೂಹಲ ಉಂಟಾಗುತ್ತದೆ. ಆದರೆ ತಾವು ಒಬ್ಬ ಕಥೆಗಾರರಾಗಿ ಸಂಪೂರ್ಣವಾಗಿ ತಮ್ಮ ಕೃತಿಗಳಲ್ಲಿ ಸಾಮಾಜಿಕ ವಸ್ತುಗಳನ್ನು ಆಯ್ಕೆಮಾಡಿಕೊಂಡು ಯಶಸ್ವಿಯಾದದ್ದೇ ಮೇಲು. ಆದರೆ ಅವರು ತಮ್ಮ ನಾಟಕಗಳಿಗಾಗಿ ಪುರಾಣ ಮತ್ತು ಇತಿಹಾಸಗಳತ್ತ ಮುಖ ಮಾಡಲು ಏನು ಕಾರಣವಿರಬಹುದು? ಅವರನ್ನು ಏನು ಆಕರ್ಷಿಸಿರಬಹುದು? ಇತಿಹಾಸ ಪುರಣಗಳಿಂದ ಸಾಮಗ್ರಿಯನ್ನೆತ್ತಿಕೊಂಡಾಗ ಇದರ ಹಿಂದಿನ ಉದ್ದೇಶವೇನು? ಇವುಗಳ ಪುನರ್‌ಸೃಷ್ಟಿ ಯಾವ ಬಗೆಯದು? ಇವುಗಳ ವೈಶಿಷ್ಟ್ಯವೇನು? ಇವು ಕೇವಲ ಆ ಮೌಲ್ಯಗಳ ಪುನರ್ ಜೀವನದ ಪ್ರಯತ್ನವೇ? ಅಥವಾ ಹೊಸ ಶೋಧ ಏನಾದರೂ ಇದೆಯೇ? ಇಂಥಹ ಪುನರ್‌ಸೃಷ್ಟಿಯನ್ನು ವಿಮರ್ಶಕನಾದವನು ಯಾವ ಮಾನದಂಡದಿಂದ ನೋಡಬೇಕು? ಇಂತಹ ಹಲವಾರು ಪ್ರಶ್ನೆಗಳು ಹುಟ್ಟುತ್ತವೆ.

***Please cite this article as:*** ರಾಘವೇಂದ್ರ, ಕೆ. ಆರ್ ಮತ್ತು ಹೆಚ್.ವಿ ಶಾಂತರಾಜು. (2024). ಮಾಸ್ತಿಯವರ ನಾಟಕಗಳು: ಪುರಾಣ ಮತ್ತು ಚರಿತ್ರೆಯ ಅನುಸಂಧಾನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 3(3), 150–155

ಇತಿಹಾಸ ಹಾಗೂ ಪೌರಾಣಿಕ ವಸ್ತುಗಳ ಸಾಹಿತ್ಯಿಕ ಪುನರ್ ಸೃಷ್ಟಿ ನಮ್ಮ ಸಾಹಿತ್ಯದಲ್ಲಿ ಹೊಸತೇನಲ್ಲ. ಬಿ.ಎಂ.ಶ್ರೀ, ಗೋವಿಂದ ಪೈ, ಡಿ.ವಿ.ಜಿ, ಕುವೆಂಪು, ಕೈಲಾಸಂ, ಶ್ರೀರಂಗರು ಇನ್ನೂ ಅನೇಕರು ಈ ವಿಷಯದಲ್ಲಿ ಪ್ರಯತ್ನ ಮಾಡಿದ್ದಾರೆ. ಅದರಲ್ಲಿ ಬಿ.ಎಂ.ಶ್ರೀ ಯವರ 'ಗದಾಯುದ್ದ', 'ಅಶ್ವತ್ಥಾಮನ್', ಗೋವಿಂದ ಪೈ ಅವರ 'ಹೆಬ್ಬೆರಳು', ಡಿ.ವಿ.ಜಿ.ಯವರ 'ಶ್ರೀವಿದ್ಯಾರಣ್ಯವಿಜಯ', ಕುವೆಂಪು ಅವರ 'ಸ್ಮಶಾನ ಕುರುಕ್ಷೇತ್ರ', 'ಬೆರಳ್ಗೆ ಕೊರಳ್', 'ಯಮನ ಸೋಲು', 'ಮಹಾರಾತ್ರಿ', ಕೈಲಾಸಂ ಅವರ 'ಕೀಚಕ', 'ಕರ್ಣ', ಶ್ರೀರಂಗರ 'ಸಂಜೀವಿನಿ', 'ಸಾವಿತ್ರಿ', ಗಿರೀಶ್ ಕಾರ್ನಾಡ್‌ರ 'ಯಯಾತಿ', 'ತುಘಲಕ್', ಇಂತಹ ಪ್ರಯತ್ನಗಳಿಗೆ ಈ ಮೇಲಿನ ಎಲ್ಲಾ ಕೃತಿಗಳು ನಿದರ್ಶನವಾಗಿ ಕಾಣಬಹುದಾಗಿದೆ. ಪುರಾಣ ಮತ್ತು ಇತಿಹಾಸ ಪ್ರಸಿದ್ಧರಾದ ವ್ಯಕ್ತಿಗಳ ವ್ಯಕ್ತಿತ್ವ ಶೋಧ, ಈ ವ್ಯಕ್ತಿಗಳಲ್ಲಿನ ಗುಣಾವಗುಣಗಳನ್ನು ಗುರುತಿಸುವುದು. ವಸ್ತುವಿನ ಮಹತ್ವ ಮತ್ತು ಅವುಗಳನ್ನು ಪ್ರಶ್ನಿಸುವ ಮೌಲ್ಯಗಳು ಇವರಲ್ಲಿದ್ದು ಹಾಗೂ ಸತ್ಯದ ಹೊಸ ಪದರುಗಳ ಅನ್ವೇಷಣಾ ಕಾರ್ಯ ಮಾಡಿದರು. ಹೀಗೆ ಇತಿಹಾಸ ಮತ್ತು ಪುರಾಣಗಳ ವಸ್ತುಗಳನ್ನು ಸಮರ್ಥವಾಗಿ ತಮ್ಮ ಕೃತಿಗಳಲ್ಲಿ ಬಳಸಿಕೊಂಡಿದ್ದಾರೆ.

**ಮಾಸ್ತಿಯವರ ಪೌರಾಣಿಕ ನಾಟಕಗಳು**

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಪೌರಾಣಿಕ ವಸ್ತುವನ್ನು ತೆಗೆದುಕೊಂಡು ಅನೇಕ ಕೃತಿಗಳು ರಚನೆಗೊಂಡಿರುವುದನ್ನು ತಿಳಿಯಬಹುದು, ಆದರೆ ಆಧುನಿಕ ಕನ್ನಡ ಸಾಹಿತ್ಯದಲಿಯೂ ಪುರಾಣದ ವಸ್ತುವನ್ನಿಟ್ಟುಕೊಂಡು ಕೃತಿಗಳನ್ನು ರಚನೆ ಮಾಡಿದವರಲ್ಲಿ ಗೋವಿಂದ ಪೈ, ಶ್ರೀರಂಗರು, ಟಿ.ಪಿ.ಕೈಲಾಸಂ, ಕುವೆಂಪು, ಮಾಸ್ತಿ, ಗಿರೀಶ್ ಕಾರ್ನಾಡ್ ಮೊದಲ ಸಾಲಿನಲ್ಲಿ ನಿಲ್ಲುತ್ತಾರೆ.

ಪುರಾಣ ಎಂಬುದು ಪುರಾತನದ ಆಚಾರ–ವಿಚಾರಗಳ ಭಾಷೆ ಎಂಬುದಾಗಿ ಪರಿಗಣಿಸಲ್ಪಡುವ ಪುರಾಣವು ಒಂದು ಪುರಾತನವಾದುದ್ದಾಗಿದೆ. ಪುರಾಣಗಳು ಹಳೆಯ ಕಥೆಗಳನ್ನು, ಐತಿಹ್ಯಗಳನ್ನು ಸೂಚಿಸುತ್ತದೆ. ಪುರಾಣಗಳು ವೇದಗಳ ಕಾಲದಿಂದಲೂ ಇರುವುದರಿಂದ ಇದೊಂದು ಪ್ರಾಚೀನವಾದ ಸಾಹಿತ್ಯವೆಂದು ಗುರುತಿಸಲಾಗಿದೆ. ಕನ್ನಡ ಸಾಹಿತ್ಯದಲ್ಲಿ ಪುರಾಣಗಳು ಕಥೆ, ಕಾದಂಬರಿ, ಕಾವ್ಯ, ನಾಟಕ ಇನ್ನೂ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಮೈಚಾಚಿಕೊಂಡಿರುವುದನ್ನು ನೋಡಬಹುದು.

ಭಾರತೀಯ ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ನಾಟಕವು ಪುರಾಣಗಳಿಂದಲೇ ಪ್ರೇರಣೆಯನ್ನು ಪಡೆದುಕೊಂಡಿದೆ. ನಾವು ಹೊಸಗನ್ನಡದ ಸಾಹಿತ್ಯದ ಆರಂಭದಲ್ಲಿ ನಮಗೆ ಕಂಡು ಬರುವ ಪೌರಾಣಿಕ ನಾಟಕಗಳು ಮೊದಲಿಗೆ ಭಾಷಾಂತರಗಳ ಮೂಲಕ ಬಂದವುಗಳಾಗಿವೆ. ನಮ್ಮ ಪ್ರಾಚೀನ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತದಂತಹ ಬೃಹತ್ತಾದ ಕಥೆಗಳು ನಾಟಕದ ವಸ್ತುಗಳಿಗೆ ಉಗಮ ಸ್ಥಾನವಾಗಿವೆ ಎಂದು ಹೇಳಬಹುದು. ನಮ್ಮ ಭಾರತೀಯ ಪರಂಪರೆಯನ್ನು ಪ್ರಾಚೀನ ಕಾಲದಲ್ಲಿ ನಾಲ್ಕು ಘಟ್ಟಗಳಲ್ಲಿ ಕಾಣಬಹುದು. ಅವುಗಳಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದ, ಇವುಗಳಲ್ಲಿ ಕೊನೆಯ ವೇದವಾದ ಅಥರ್ವಣ ವೇದದಲ್ಲಿ ಪುರಾಣವನ್ನು ಮೊದಲಿಗೆ ಬಳಸಿದ್ದಾರೆ.

ನವೋದಯ ನಾಟಕಕಾರರಲ್ಲಿ ಪುರಾಣದ ವಸ್ತುವನ್ನಿಟ್ಟುಕೊಂಡು ನಾಟಕಗಳನ್ನು ರಚಿಸಿರುವ ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಅವರು ವಿಶಿಷ್ಟ ಮಾರ್ಗದ ಮೂಲಕ ಪುರಾಣಗಳ ಮೂಲ ಸ್ವರೂಪಕ್ಕೆ ದಕ್ಕೆ ಬಾರದಂತೆ ನಾಟಕಗಳನ್ನು ರಚಿಸಿದ್ದಾರೆ. ಇವರ ಪೌರಾಣಿಕ ನಾಟಕಗಳಲ್ಲಿ ವಾಸ್ತವತೆಯ ಕಲ್ಪನೆ ಇರುತ್ತದೆ. ಮಾಸ್ತಿಯವರು ಒಟ್ಟು ಹದಿಮೂರು ಸ್ವತಂತ್ರ ನಾಟಕಗಳಿವೆ. ಬೇರೆ ಬೇರೆ ಭಾಷೆಗಳಿಂದ ಕನ್ನಡಕ್ಕೆ ಎಂಟು ನಾಟಕಗಳನ್ನು ಅನುವಾದ ಮಾಡಿದ್ದಾರೆ. ಅವರು ಅನುವಾದ ಮಾಡಿದ ಕೃತಿಗಳಲ್ಲಿ ರವೀದ್ರನಾಥ್ ಠಾಗೂರರ 'ಚಿತ್ರಾಂಗಧ' ಎಂಬ ನಾಟಕ ಬಿಟ್ಟರೆ ಉಳಿದ ಎಲ್ಲಾ

ನಾಟಕಗಳು ಷೇಕ್ಸ್‌ಪಿಯರ್ ನಾಟಕಗಳಿಂದ ಅನುವಾದಗೊಂಡವುಗಳಾಗಿವೆ. ಶಾಂತಾ, ಸಾವಿತ್ರಿ, ಉಷಾ, ಪುರಂದರದಾಸ, ಕನಕಣ್ಣ ಇವು ಮಾಸ್ತಿಯವರು ರಚಿಸಿದ ಪೌರಾಣಿಕ ನಾಟಕಗಳಾಗಿವೆ.

**ಶಾಂತಾ**

ಮಾಸ್ತಿಯವರ ನಾಟಕಗಳಲ್ಲಿ ಮೊದಲನೆ ಪೌರಾಣಿಕ ನಾಟಕ 'ಶಾಂತಾ'. ಈ ನಾಟಕವು ವಾಲ್ಮೀಕಿ ರಾಮಾಯಣದಲ್ಲಿ ಬರುವ ಋಷ್ಯಶೃಂಗೋಪಾಖ್ಯಾನದಿಂದ ನಾಟಕದ ಮೂಲ ಕಥೆಯಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿದ್ದಾರೆ. ಈ ನಾಟಕದಲ್ಲಿ ಕಾವ್ಯಸೌಂದರ್ಯ, ಪಾತ್ರ ರಚನಾ ಕೌಶಲ್ಯ, ಹೃದಯಸ್ಪರ್ಶಿ, ಸಂವಾದದ ಸದಭಿರುಚಿಯ ಶೃಂಗಾರ ಓದುಗರ ಪ್ರಶಂಸೆಗೆ ಪಾತ್ರವಾಗಿರುವ ನಾಟಕವಾಗಿದೆ. ರಾಮಾಯಣದ ಬಾಲಕಾಂಡದಲ್ಲಿ ಋಷ್ಯಶೃಂಗನ ಕಥೆ ಬರುತ್ತದೆ, ಸುಮಂತ್ರನು ದಶರಥನಿಗೆ ಈ ಕಥೆಯನ್ನು ಸಿಂಹಾವಲೋಕದ ಕ್ರಮದಿಂದ ಹೇಳುತ್ತಾನೆ. ಅಂಗ ದೇಶದ ದೊರೆ ರೋಮಪಾದರಾಮ ಇವನು ಅಯೋಧ್ಯೆಯ ರಾಜ ದಶರಥನ ಗೆಳೆಯ ರೋಮಪಾದನ ಮಗಳು ಶಾಂತಾ. ಒಮ್ಮೆ ಅಂಗ ದೇಶದಲ್ಲಿ ಭಯಾನಕವಾದ ಕ್ಷಾಮ ಬರುತ್ತದೆ. ಪ್ರಜೆಗಳು ಕಂಗಾಲಾಗುತ್ತಾರೆ. ವಿಭಾಂಡಕ ಮುನಿಯ ಪುತ್ರ ಋಷ್ಯಶೃಂಗ ಅಂಗ ದೇಶದ ನೆಲದಲ್ಲಿ ಕಾಲಿಟ್ಟರೆ ಧಾರಾಕಾರವಾಗಿ ಕ್ಷಾಮ ನಿವಾರಣೆಯಾಗುತ್ತದೆ ಎಂದು ಬ್ರಾಹ್ಮಣೋತ್ತರ ರಾಜನಿಗೆ ಹೇಳುತ್ತಾರೆ. ಋಷ್ಯಶೃಂಗ ಹುಟ್ಟಿದಾಗಿನಿಂದ ಹೆಣ್ಣನ್ನೆ ಕಾಣದವನು. ಕಠಿಣವಾದ ಬ್ರಹ್ಮಚಾರ್ಯ ವ್ರತವನ್ನು ಕೈಗೊಂಡು ಅದನ್ನು ಪಾಲಿಸುವಂತೆ ಮಹಾಕೋಪಿಷ್ಟರಾದ ವಿಭಾಂಡಕ ಮುನಿಗಳು ಅಂತಹ ಕಟ್ಟುನಿಟ್ಟಿನ ವ್ಯವಸ್ಥೆಯನ್ನು ಮಾಡಬೇಕೆಂದು ಮಗನಿಗೆ ಹೇಳುತ್ತಾರೆ.

**ಉಷಾ**

ಮಾಸ್ತಿಯವರ ಉಷಾ ನಾಟಕದಲ್ಲಿ, ಉಷಾ ಅನಿರುದ್ಧರ ಪ್ರಣಯ ಕಥೆ ಮತ್ತು ಶ್ರೀಕೃಷ್ಣ ಬಾಣಾಸುರರ ಕಾಳಗದ ಪುರಾಣ ಕಥೆಯನ್ನಾಧರಿಸಿ ರಚಿಸಿರುವ ನಾಟಕವಾಗಿದೆ. ಉಷಾ ಎಂಬುವಳು ಬಾಣಾಸುರನ ಮಗಳು, ಅನಿರುದ್ಧ ಎಂಬುವನು ಶ್ರೀಕೃಷ್ಣರ ಮೊಮ್ಮಗ. ಇವರಿಬ್ಬರ ಪ್ರೇಮ ಪ್ರಕರಣವೇ ನಾಟಕದ ವಸ್ತುವಾಗಿದೆ. ಬಾಣಾಸುರನು ಮಯೂರ ಎಂಬುವನನ್ನು ಕರೆತಂದು ಅವನನ್ನು ವರಿಸುವಂತೆ ಉಷಾಗೆ ಒತ್ತಾಯ ಮಾಡುತ್ತಾನೆ, ಆದರೆ ಶ್ರೀಕೃಷ್ಣ ಹೇಳುವಂತೆ ಅನಿರುದ್ಧನ ಹುಡುಗತನದಿಂದಾಗಿ ಉಷಾ ಅನಿರುದ್ಧರ ವಿವಾಹವಾಗುತ್ತದೆ. ಅದು ಹೇಗೆಂದರೆ ಕನಸಿನಲ್ಲಿ ಕಾಣಿಸಿಕೊಂಡ ಅನಿರುದ್ಧ ಕನಸಿನಲ್ಲೇ ಉಷೆಯನ್ನು ಗಾಂಧರ್ವ ರೀತಿಯಲ್ಲಿ ಉಷೆಯನ್ನು ಮದುವೆಯಾಗಿದ್ದಾನೆ. ದ್ವಾರಕೆಗೆ ಸಂಬಂದಿಸಿದ ಮಲ್ಲಿಗೆ-ಸಂಪಿಗೆ ಹಾಡನ್ನು ಹೇಳಿದರೆ ಕೆರಳುವ ಬಾಣಾಸುರ ಈ ಮದುವೆಗೆ ಒಪ್ಪುವನೇ. ಮಗಳನ್ನು ಕಡಿದು ತುಂಡು ಮಾಡುವಷ್ಟು ಕೋಪ. ಆ ವೇಳೆಗೆ ಅನುರಕ್ತೆ ಉಷೆಯ ಪ್ರಾರ್ಥನೆಯಿಂದ ಅನಿರುದ್ಧ ಪ್ರತ್ಯಕ್ಷನಾಗಿ ಪತ್ನಿಯಾದ ಉಷೆಯನ್ನು ಮತ್ತು ಅವಳ ಸಖಿಯರನ್ನು ರಕ್ಷಿಸುತ್ತಾನೆ. ಖಳನಾಯಕನಾದ ಮಯೂರನ ಕೈಯಲ್ಲಿ ಸಾಯಲು ಬಂಧಿತನಾಗುತ್ತಾನೆ. ಕಳವಳಗೊಂಡ ಉಷೆಗೆ ಅನಿರುದ್ಧ ಸಮಾದಾನ ಮಾಡುತ್ತಾನೆ. ಪರಿಸ್ಥಿತಿಯ ಇಕ್ಕಟ್ಟಿನಿಂದ ಪಾರಾಗಲು ಕೃಷ್ಣನಿಗೆ ಪ್ರಾರ್ಥನೆ ಮಾಡುತ್ತಾನೆ. ಆಗ ಶ್ರೀಕೃಷ್ಣ ಆಗಮಿಸಿದಾಗ ಬಾಣಾಸುರನ ಅಹಂ ಮಣ್ಣು ಮುಕ್ಕುತ್ತದೆ. ಪ್ರಹ್ಲಾದನ ಮರಿಮಗನಾದ ಬಾಣಾಸುರ ನನಗೆ ವೈರಿಯಲ್ಲವೆಂದು ಅವನನ್ನು ಕ್ಷಮಿಸಿಬಿಡುತ್ತಾನೆ. ಇಲ್ಲಿಗೆ ಈ ನಾಟಕವು ಮಲ್ಲಿಗೆ-ಸಂಪಿಗೆ ಎಂಬ ಗಾಯನದೊಂದಿಗೆ ಈ ನಾಟಕ ಸುಖಾಂತ್ಯವಾಗುತ್ತದೆ. ಅಂದರೆ ಈ ನಾಟಕದಲ್ಲಿ ಮಾಸ್ತಿಯವರು ಪ್ರೇಮಿಗಳ ವಿರಹ, ಕನಸು, ತಳಮಳ, ಹಿರಿಯರ ಕೋಪ, ಸಖಿಯರ ಮೋಜು, ಪವಾಡಗಳಿಂದ ಕೂಡಿದ ಘಟನೆಗಳು ಇವುಗಳಿಂದ ಉಷಾ ನಾಟಕವು ಭ್ರಮಾಲೋಕದ ಒಂದು ಅದ್ಭುತ ಚಮತ್ಕಾರದಂತೆ ನಡೆಯುತ್ತದೆ. ಉಷಾ ಅನಿರುದ್ಧರ ಪ್ರೇಮ ಪ್ರಕರಣವು ಇಲ್ಲಿನ ಜೀವಾಳವಾಗಿದೆ. ಇವರ ಪ್ರೇಮ ಪ್ರಕರಣದ

ಮುಂದೆ ಬಾಣಾಸುರನ ಮುಂದೆ ಕೋಪ ಹಗೆತನಗಳು ನಿಲ್ಲುವುದಿಲ್ಲ. ಒಟ್ಟಿನಲ್ಲಿ ಈ ನಾಟಕವು ಒಂದು ಪುರಾಣ ಪ್ರತಿಮೆಯಂತಿರುವ ರಮ್ಯ ನಾಟಕವಾಗಿ ಹೊರ ಹೊಮ್ಮಿದೆ.

**ಸಾವಿತ್ರಿ**

ಮಾಸ್ತಿಯವರ ಸಾವಿತ್ರಿ ನಾಟಕದಲ್ಲಿ ಸಾವು ಮತ್ತು ಬದುಕುಗಳ ಸಂಘರ್ಷ. ಆದರೆ ವಸ್ತು ನಿರ್ವಹಣೆಯಲ್ಲಿ ಮನುಷ್ಯನ ಮನಸ್ಸಿನ ಆಳವಾದ ಅದಮ್ಯ ಬಯಕೆಗಳತ್ತ ಗಮನ ಸೆಳೆಯುತ್ತಾರೆ. ಬಹುಶಃ ಮಾಸ್ತಿಯವರ ನಾಟಕಗಳಲ್ಲಿ ಕಂದ, ವೃತ್ತ, ಹಾಡುಗಳು ವೃತ್ತಿರಂಗಭೂಮಿಯನ್ನು ನೆನಪಿಸುತ್ತವೆ. ಆದರೆ ಸಾವಿತ್ರಿ ನಾಟಕವು ವಿಶಿಷ್ಟವಾಗಿದ್ದು ಈ ನಾಟಕದಲ್ಲೂ ಸ್ವಲ್ಪ ಮೂಲದಿಂದ ಬದಲಾವಣೆಯನ್ನು ಮಾಡಿದ್ದಾರೆ. ಹಾಗಾಗಿ ನಾಟಕ ಕ್ರಿಯೆಗೆ ತೊಡಕಾಗದೆ ವಸ್ತು ಪೋಷಣೆಗೆ, ತಾಂತ್ರಿಕ ನಿರ್ವಹಣೆಗೆ ಸಹಾಯಕವಾಗಿದೆ. ಮೂಲ ಕಥೆಯಲ್ಲಿ ನಾರದರು ಒಂದು ರೀತಿಯ ಹಿನ್ನೆಲೆ ಪಾತ್ರವಾಗಿ ಬಂದರೆ, ಇಲ್ಲಿ ನಾಟಕದ ಆರಂಭದಲ್ಲಿಯೇ ಕಾಣಿಸುತ್ತಾರೆ. ಮಾಸ್ತಿಯವರು ಈ ನಾಟಕದಲ್ಲಿ ಮತ್ತೊಂದು ಮಾರ್ಪಾಡು ಮಾಡಿಕೊಂಡಿದ್ದಾರೆ. ಮೂಲದಲ್ಲಿ ಸತ್ಯವಾನನ ಸಾವು ಮತ್ತು ಸಾವಿತ್ರಿ ಯಮನಿಂದ ಬಿಡಿಸಿಕೊಂಡ ವಿಷಯ ಎಲ್ಲಾ ಮುಗಿದ ನಂತರ ಸತ್ಯವಾನನ ಮತ್ತು ಸಾವಿತ್ರಿಯರ ತಂದೆ ತಾಯಿಗಳಿಗೆ ತಿಳಿಯುತ್ತದೆ. ಇಡೀ ನಾಟಕವು ಒಂದು ದಟ್ಟ ಕಾಡಿನಲ್ಲಿ ನಡೆಯುತ್ತದೆ. ಮಾಸ್ತಿಯವರು ಒಟ್ಟಾರೆ ಈ ನಾಟಕಗಳಲ್ಲಿ ಅಲ್ಪ ಸ್ವಲ್ಪ ಬದಲಾವಣೆ ಮಾಡಿಕೊಂಡರೂ ಪುರಾಣದ ವಸ್ತು ವಿನ್ಯಾಸ, ಪ್ರಜ್ಞೆ ನಿಷ್ಠವಾಗಿ ಬಳಸಿಕೊಂಡಿದ್ದಾರೆ. ಈ ನಾಟಕದಲ್ಲಿ ಮೌಲ್ಯಗಳನ್ನು ಒರೆಗೆ ಹಚ್ಚುವ ಪ್ರಯತ್ನವಾಗಲೀ ಹೊಸ ಸಾಧ್ಯತೆಯನ್ನಾಗಲೀ ಪರಿಶೀಲಿಸುವ ವಸ್ತುಶೋಧವಾಗಲಿ ಕಂಡು ಬರುವುದಿಲ್ಲ. ಅದೇ ರೀತಿಯಾಗಿ ಮಾಸ್ತಿಯವರ ಇನ್ನೆರಡು ನಾಟಕಗಳಾದ ಪುರಂದರದಾಸರು, ಕನಕಣ್ಣ ಇವುಗಳಲ್ಲಿ ಹರಿದಾಸ ದೀಕ್ಷೆ, ಹರಿದಾಸ ಸಾಧನ, ಹರಿದಾಸ ಸಿದ್ಧಿ ಮತ್ತು ಅಂತ್ಯಮಂಗಲ ಎಂದು ನಾಲ್ಕು ಭಾಗಗಳಾಗಿ ರಚಿತವಾಗಿರುವ ಪುರಂದರದಾಸರು ನಾಟಕದಲ್ಲಿ ಶೀನಪ್ಪನಾಯಕ ಎಂಬ ಹರಿದಾಸನು ದೀಕ್ಷೆಯನ್ನು ಪಡೆದ ಪ್ರಕರಣದಿಂದ ಹಿಡಿದು ದಾಸರ ಜೀವನದ ಕೊನೆಯ ಘಟ್ಟದವರೆಗಿನ ಅವರ ವ್ಯಕ್ತಿತ್ವವನ್ನು ವಿವಿಧ ಘಟ್ಟಗಳಲ್ಲಿ ಅವರು ಈ ನಾಟಕಗಳಲ್ಲಿ ನಿರೂಪಿಸಿದ್ದಾರೆ.

**ಮಾಸ್ತಿಯವರ ಚಾರಿತ್ರಿಕ ನಾಟಕಗಳು**

ಮಾಸ್ತಿಯವರು ಚಾರಿತ್ರಿಕ ಅಂಶಗಳನ್ನುಳ್ಳ ನಾಟಕಗಳನ್ನು ರಚಿಸಿದ್ದಾರೆ. ಅದರಲ್ಲಿ ಬಹುಮುಖ್ಯವಾಗಿ ತಾಳಿಕೋಟೆ, ಕಾಕನಕೋಟೆ, ಯಶೋಧರ, ಶಿವಛತ್ರಪತಿ, ಅನಾರ್ಕಳಿ, ಭಟ್ಟರ ಮಗಳು, ಮಾಸತಿ, ತಿರುಪಾಣಿಯಲ್ಲಿ ಚಾರಿತ್ರಿಕ ಅಂಶಗಳು ಇರುವುದನ್ನು ಗಮನಿಸಬಹುದು. ಅದರಲ್ಲಿ ತಾಳಿಕೋಟೆ ನಾಟಕದಲ್ಲಿ ವಿಜಯನಗರದ ಇತಿಹಾಸ ಕುರಿತಾದ ನಾಟಕವಾಗಿದೆ. ಇಲ್ಲಿ ಒಬ್ಬ ಮುಸ್ಲಿಂ ಸರದಾರನ ವಿಶ್ವಾಸಘಾತದಿಂದ ತಾಳಿಕೋಟೆ ಯುದ್ಧದಲ್ಲಿ ಅಲ್ಲಿನ ರಾಜ ರಾಮರಾಯ ಅಂತ್ಯವಾಗಿ ವಿಜಯನಗರ ಸಾಮ್ರಾಜ್ಯ ವಿನಾಶವಾಗುತ್ತದೆ ಎಂಬುದು ಒಂದು ಐತಿಹಾಸಿಕ ಸತ್ಯವಾಗಿದೆ. ಆದರೆ ಈ ಯುದ್ಧದ ದುರಂತ ಪರಿಣಾಮ ನಾಟಕದ ವಸ್ತುವಾಗದೆ ಇದಕ್ಕೆ ಕಾರಣವಾದ ರಾಮರಾಯನ ಪ್ರಣಯ ಜೀವನದ ಹಿನ್ನೆಲೆಯ ಮೇಲೆ ನಾಟಕ ಮೂಡಿ ಬಂದಿದೆ. ಈ ನಾಟಕವು ಏಳು ಅಂಕಗಳಲ್ಲಿ ಮೂಡಿಬಂದಿರುವ ನಾಟಕವಾಗಿದೆ ಇಲ್ಲಿ ವಿವಿಧ ಪರಿಸರಗಳಲ್ಲಿ ದೃಶ್ಯಗಳಾಗಿ ಮೂಡಿ ಬಂದಿದೆ. ವಿಜಯನಗರದ ಕೊನೆಯ ಅರಸನ ಪ್ರೇಮ ಪ್ರಣಯವೇ ಈ ನಾಟಕದ ಕೇಂದ್ರಬಿಂದುವಾಗಿದೆ. ಇವರ ಪ್ರೇಮ ಒಬ್ಬ ಮುಸ್ಲಿಂ ಹೆಣ್ಣು ಮಗಳಿಂದ ಪ್ರಾರಂಭವಾಗಿ ಇನ್ನೊಬ್ಬ ಹೆಣ್ಣು ಮಗಳ ಸೇಡಿನಿಂದ ನಾಟಕ ಕೊನೆಗೊಳ್ಳುತ್ತದೆ. ಇಲ್ಲಿ ವೈಯಕ್ತಿಕ ಸೇಡು ತಾಳಿಕೋಟೆಯ ದುರಂತದಲ್ಲಿ ಕೊನೆಗೊಳ್ಳುವುದು ನೋಡಬಹುದು.

ಇತಿಹಾಸ ಹೇಳುವಂತೆ ಈ ನಾಟಕದಲ್ಲಿ ರಾಮರಾಯನಇಬ್ಬರು ಹಿರಿಯ ಮುಸ್ಲಿಂ ಅಧಿಕಾರಿಗಳು ರಕ್ಕಸತಂಗಡಿಯಲ್ಲಿ ನಡೆದ ಯುದ್ಧದ ಕೊನೆಯ ಲಕ್ಷಣಗಳಲ್ಲಿ ಶತ್ರು ಪಕ್ಷಕ್ಕೆ ಸೇರಿ ವಿಶ್ವಾಸಘಾತ ಮಾಡಿ ಗೋಲ್ಕಂಡ ಸುಲ್ತಾನನೇ ರಾಮರಾಯನ ಶಿರಶ್ಛೇದ ಮಾಡಿದುದರ ಪರಿಣಾಮವಾಗಿ ರಾಮರಾಯನ ಸಾಮ್ರಾಜ್ಯ ಅಂತ್ಯವಾಗುತ್ತದೆ. ಇಂತಹ ಚಾರಿತ್ರಿಕ ಅಂಶಗಳನ್ನು ಈ ನಾಟಕದಲ್ಲಿ ಗಮನಿಸಬಹುದು ಹಾಗೆಯೇ ಶಿವಛತ್ರಪತಿ ನಾಟಕದಲ್ಲೂ ಐತಿಹಾಸಿಕ ಅಂಶಗಳನ್ನು ಈ ಕೆಳಗಿನಂತೆ ಗಮನಿಸಬಹುದು. ಈ ನಾಟಕವು ಒಂದು ಸಿದ್ದ ನಾಟಕೀಯ ಲಕ್ಷಣಗಳನ್ನು ಮೈಗೂಡಿಸಿಕೊಂಡಿದೆ. ಒಂದು ಐತಿಹಾಸಿಕ ಸಂದರ್ಭವನ್ನು ಈ ನಾಟಕ ಕೇಂದ್ರವಾಗಿ ನಿರೂಪಿಸಿದೆ ಇದರಲ್ಲಿ ಮರಾಠ ಸಾಮ್ರಾಜ್ಯದ ಶಿವಾಜಿಯು ಈ ನಾಟಕದ ಪ್ರಮುಖ ನಾಯಕನಾಗುತ್ತಾನೆ. ಈ ನಾಟಕದ ವಸ್ತು ಏನೆಂದರೆ ಶಿವಾಜಿಯು ಔರಂಗಜೇಬನಿಂದ ಮಹಾರಾಷ್ಟ್ರದ ದೊರೆಯೆಂದು ಮಾನ್ಯತೆಗಳಿಸಲು ಹೊಗಿ ಅವನಿಗೆ ಅವನೇ ತೊಂದರೆಗಿಡಾಗುವುದೇ ಈ ನಾಟಕದ ವಸ್ತುವಾಗಿದೆ. ಈ ನಾಟಕವು ಐದು ಅಂಕಗಳಿಂದ ಕೂಡಿದ್ದು ಶಿವಾಜಿಯ ಕಡೆಯವರು ಕಲ್ಯಾಣ ಗೆದ್ದರೆಂಬ ವಿಜಯದಿಂದ ಈ ನಾಟಕವು ಪ್ರಾರಂಭವಾಗುತ್ತದೆ. ಇದರ ಜೊತೆಯಲ್ಲಿ ಯುದ್ಧದಲ್ಲಿ ತಮ್ಮ ಆಡಳಿತದಲ್ಲಿದ್ದ ವಜ್ರಗಡ ಎಂಬ ಪ್ರದೇಶವನ್ನು ಮಹಮ್ಮದಿಯರು ಕೈವಶ ಮಾಡಿಕೊಂಡರು ಎಂಬ ಸುದ್ದಿಯು ಬರುತ್ತದೆ.

ಈ ನಾಟಕದ ಪ್ರಾರಂಭದಲ್ಲಿ ಶಿವಾಜಿಯು ಉದಾತ್ತನಾಗಿ ವಿಜೃಂಭಿಸುತ್ತಾನೆ ಕಲ್ಯಾಣ ದುರ್ಗದ ರಕ್ಷಕನಾದ ಮುಲಾನ ಸಾಹೇಬನ ವಿಚಾರಣೆಯಿಂದಲೂ ಈ ನಾಟಕ ಆರಂಭವಾಗುತ್ತದೆ. ಈ ನಾಟಕದ ಪ್ರಮುಖ ವಸ್ತುವೆಂದರೆ ಶಿವಾಜಿಯು ಮಹಾರಾಷ್ಟ್ರದ ಸ್ವಯಂ ರಾಜನಾಗಿ ಘೋಷಿಸಿಕೊಳ್ಳುವುದು ಒಟ್ಟಿನಲ್ಲಿ ಮಾಸ್ತಿಯವರು ಶಿವಛತ್ರಪತಿ ನಾಟಕದಲ್ಲಿ ಅವರಿಗೆ ಸರಿ ತೋರಿದ ರೀತಿಯಲ್ಲಿ ಶಿವಾಜಿಯ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ.

ಮಾಸ್ತಿಯವರ ನಾಟಕ ಸಾಹಿತ್ಯದಲ್ಲಿ ಪ್ರಮುಖ ಚಾರಿತ್ರಿಕ ಅಂಶಗಳುಳ್ಳ ನಾಟಕ ಎಂದರೆ ಕಾಕನಕೋಟೆ ಇದನ್ನ ಐತಿಹಾಸಿಕ ಎನ್ನುವುದು ಔಪಚಾರಿಕ ವಿಚಾರ ಆದರೆ ಇದೊಂದು ಪ್ರಾದೇಶಿಕ ನಾಟಕ ಎಂದು ಕರೆಯಬಹುದು. ಈ ನಾಟಕದಲ್ಲಿ ಲೇಖಕರೇ ಹೇಳುವಂತೆ ರಣಧೀರ ಕಂಠೀರವ ನರಸರಾಜ ಒಡೆಯರೊಬ್ಬರೇ ಇಲ್ಲಿ ನಮಗೆ ಕಂಡುಬರುವ ಐತಿಹಾಸಿಕ ವ್ಯಕ್ತಿಯಾಗಿದ್ದಾನೆ. ಉಳಿದಿದ್ದೆಲ್ಲ ಆ ಕಾಲದಲ್ಲಿ ನಡೆದಿರಬಹುದಾದ ಘಟನೆಯಿಂದ ಕಲ್ಪಿತವಾಗಿದೆ. ಮೈಸೂರು ಜಿಲ್ಲೆಯಲ್ಲಿ ಬರುವಂತಹ ಹೆಗ್ಗಡದೇವನಕೋಟೆ ತಾಲೂಕಿನಲ್ಲಿ ಕಾಕನಕೋಟೆ ಕಾಡು ಎಂಬುದು ಈಗಲೂ ಪ್ರಸಿದ್ಧವಾಗಿದೆ. ಇಲ್ಲಿ ಮಾಸ್ತಿಯವರು ಮೊದಲ ಬಾರಿಗೆ ಮೈಸೂರು ಸಬ್ ಡಿವಿಷನ್ ಆಫೀಸರ್ ಆಗಿದ್ದಾಗ ಅಲ್ಲಿನ ಕಾಡುಕುರುಬರನ್ನು ಹತ್ತಿರದಿಂದ ಕಂಡಿದ್ದರು. ಹಾಗಾಗಿ ಮಾಸ್ತಿಯವರು ಈ ನಾಟಕವನ್ನು ರಚಿಸಲು ಸುಲಭ ದಾರಿಯಾಯಿತು. ಅಂದರೆ ಮಾಸ್ತಿಯವರು ಅಲ್ಲಿನ ಕಾಡುಕುರುಬ ಬುಡಕಟ್ಟು ಸಮುದಾಯದ ಸಾಂಸ್ಕೃತಿಕ ವಿವರಗಳು ಈ ನಾಟಕದ ಸೃಷ್ಟಿಗೆ ಕಾರಣವಾಗಿದೆ.

ಮೈಸೂರು ಅರಸರ ಬಗೆಗೆ ಇದ್ದಂತಹ ಅಭಿಮಾನದ ಗೌರವಗಳು ಹಾಗೂ ಅರಸರ ಸಾಹಸಗಳು ಈ ನಾಟಕದ ಪ್ರಮುಖ ಸೂತ್ರವಾಗಿ ಕಾಡು ಮತ್ತು ನಾಡಿನ ಮಧ್ಯದ ಬದುಕಿನ ಸಂಘರ್ಷದ ಚಿತ್ರವೊಂದು ಇಲ್ಲಿ ಅರ್ಥಪೂರ್ಣವಾಗಿ ಕಟ್ಟಿಕೊಟ್ಟಿದ್ದಾರೆ. ಇಲ್ಲಿ ಕಾಡುಕುರುಬರು ಮತ್ತು ನಾಡಕುರುಬರ ನಡುವಿನ ಸಂಘರ್ಷಕ್ಕೆ ಕಾರಣಿಕರಂತೆ ಮಧ್ಯವರ್ತಿಗಳು ತಮ್ಮ ದಾಳಗಳನ್ನು ಇವರಿಬ್ಬರ ನಡುವೆ ಉರುಳಿಸಿದಾಗ ಹುಟ್ಟಿಕೊಳ್ಳುವ ಸಮಸ್ಯೆಗಳು ಎಷ್ಟು ಅಪಾಯಕಾರಿಯಾಗಿವೆ ಎಂಬುದು ಈ ನಾಟಕದಲ್ಲಿ ಚಿತ್ರತವಾಗಿದೆ. ಈ ನಾಟಕದ ವಸ್ತು ಏನೆಂದರೆ ಇಲ್ಲಿ ವಾಸಿಸುವ ಕಾಡುಕುರುಬರು ಎಂದು

ಕರೆಸಿಕೊಳ್ಳುವ ಇವರು ಹಿಂದೆ ಹೆಚ್ಚಿನ ಸಂಖ್ಯೆಯಲ್ಲಿದ್ದರೆಂದೂ, ಇವರಿಗೆ ತಮ್ಮದೇ ಆದ ಸಂಸ್ಕೃತಿ ಇತ್ತೆಂದು ರಣಧೀರ ಕಂಠೀರವ ನರಸರಾಜರ ಆಳ್ವಿಕೆಯಲ್ಲಿದ್ದ ಜನರಿಗೂ ಹೆಗ್ಗಡದೇವನಕೋಟೆಯ ಹೆಗ್ಗಡಗೂ ಇವರು ಕೊಡಬೇಕಾದ ಕಪ್ಪದ ವಿಷಯದಲ್ಲಿ ವಿವಾದ ಬಂದಿತ್ತೆಂದು ಈ ಪೋಡಿನ ಪ್ರಮುಖ ನಾಯಕನಾದ ಕಾಚ ಎಂಬವನು ಮೈಸೂರಿನಲ್ಲಿದ್ದ ರಾಜರನ್ನು ಬಲ್ಲವರೆಂಬುದಾಗಿ ಮತ್ತು ಅವರಿಂದ ಈ ಪೋಡಿನ ಜನರನ್ನು ಕಷ್ಟದಿಂದ ಪಾರು ಮಾಡಿಸಿದನೆಂದು ಇಲ್ಲಿಯ ಕಥಾ ವಸ್ತುವಾಗಿದೆ.

'ಯಶೋಧರ' ಇನ್ನೊಂದು ಐತಿಹಾಸಿಕ ಅಂಶವಿರುವ ನಾಟಕ. ಇದು ಬುದ್ಧನ ಕುರಿತಾದ ನಾಟಕವಾಗಿದೆ. ಬುದ್ಧನ ಪತ್ನಿ ಯಶೋಧರೆಯ ಒಳನೋಟಗಳನ್ನು ಈ ನಾಟಕದಲ್ಲಿ ಮಾಸ್ತಿಯವರು ಚಿತ್ರಿಸಿದ್ದಾರೆ. ಇತರೆ ನಾಟಕಗಳಿಂದ ಯಶೋಧರ ನಾಟಕ ಬೇರೆ ತರನಾದ ಕಥಾವಸ್ತುವನ್ನುಳ್ಳದ್ದಾಗಿದೆ. ಇಲ್ಲಿ ಯಶೋಧರಿಗೆ ಬುದ್ಧನಿಂದ ಆದಂತಹ ಅನ್ಯಾಯವನ್ನು ಅವಳ ಬಾಳಿನ ಸಫಲತೆಯನ್ನು ಚಿತ್ರಸುತ್ತದೆ. ಯಶೋಧರೆ ದೃಷ್ಟಿಯಿಂದ ಇಡೀ ಪ್ರಕರಣವನ್ನು ಶೋಧಿಸುವ ಪ್ರಯತ್ನವಾಗಿದೆ.

ಇತಿಹಾಸಕಾರರು ಬುದ್ದನ ಚರಿತ್ರೆಯನ್ನು ಸಾವಿರಾರು ಘಟನೆಗಳಿಂದ ಚಿತ್ರಿಸಲು ಸಾಧ್ಯವಾಗಿದ್ದರೂ ಮಾಸ್ತಿಯವರ ಈ ಒಳನೋಟ ಅತ್ಯಂತ ಹೃದಯಸ್ಪರ್ಶಿಯಾಗಿ ಮೂಡಿಬಂದಿರುವುದನ್ನು ಕಾಣಬಹುದು. ಈ ನಾಟಕ ಐತಿಹಾಸಿಕ ನಾಟಕಗಳಿಗಿಂತ ಭಿನ್ನವಾಗಿದೆ. ಈ ನಾಟಕವು ಸರಳ ರಗಳೆಯಲ್ಲಿಯೇ ರಚಿತವಾದ ಕೃತಿಯಲ್ಲಿ ತುಡಿಯುತ್ತಿರುವುದು ಒಂದು ಹೆಣ್ಣಿನ ಹೃದಯ ಎಂಬುದು ಗಮನಿಸಬೇಕಾದ ಅಂಶ. ಎಲ್ಲರೂ ಬುದ್ಧನ ಹಿರಿಮೆಯನ್ನು ಹೊಗಳುವವರಾದರೆ ಬಡಪಾಯಿ ಯಶೋಧರೆಯನ್ನು ಕೇಳುವವರು ಯಾರು? ಎಂದು ಭಾವಿಸಿ ಆಕೆಯ ತ್ಯಾಗ, ದಿಟ್ಟತನಗಳನ್ನು ಗುರುತಿಸುವ ನಾಟಕವಾಗಿ ಯಶೋಧರ ನಾಟಕ ರೂಪತಾಳಿದೆ.

ಅನಾರ್ಕಳಿ ಎಂಬುದು ಮಾಸ್ತಿಯವರ ಐತಿಹಾಸಿಕ ನಾಟಕಗಳಲ್ಲಿ ಒಂದಾಗಿದೆ ಇಲ್ಲಿ ನಾಟಕದ ವಸ್ತು ಪ್ರಸಿದ್ಧವಾದದ್ದು. ಅಕ್ಬರನ ಮಗ ಸಲೀಂ ಪ್ರೀತಿಸಿದ ಮುಗ್ಧ ಹೆಣ್ಣು ಮಗಳೊಬ್ಬಳ ದುರಂತ ಕಥೆ ಮೊಘಲರ ಚರಿತ್ರೆಯಲ್ಲಿ ಬರುವ ಈ ಕಥೆ ಅನೇಕ ರೂಪಾಂತರಗಳನ್ನು ಪಡೆಯುತ್ತಾ ಬಂದಿದೆ. ಇಲ್ಲಿ ಮಾಸ್ತಿಯವರು ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ಕಲಾತ್ಮಕವಾಗಿ ನಾಟಕ ರೂಪದಲ್ಲಿ ನೀಡಿದ್ದಾರೆ. ಇತಿಹಾಸದ ವಸ್ತುವನ್ನು ಕಥೆಯ ಕಾಲದ ಜೀವನಕ್ಕೆ ವಿರುದ್ಧವಾಗದಂತೆ ಕಲ್ಪನೆಗಳನ್ನು ಇದರಲ್ಲಿ ಹೇಳಿದ್ದಾರೆ.

ಹೀಗೆ ಮಾಸ್ತಿಯವರ ನಾಟಕಗಳಲ್ಲಿ ಪೌರಾಣಿಕ ಮತ್ತು ಚಾರಿತ್ರಿಕ ಅಂಶಗಳು ಇರುವುದನ್ನು ಈ ಮೇಲಿನಂತೆ ಗಮನಿಸಬಹುದಾಗಿದೆ.

**ಆಕರ ಗ್ರಂಥ**


- ಮಾಸ್ತಿ ವೆಂಕಟೇಶ ಅಯ್ಯಂಗಾರ್. (2012). *ಮಾಸ್ತಿ ನಾಟಕ ಸಮಗ್ರ.* ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್.


**ಪರಾಮರ್ಶನ ಗ್ರಂಥಗಳು**


- ಲಕ್ಷ್ಮೀನಾರಾಯಣ, (2007). *ಮಾಸ್ತಿ.* ಕರ್ನಾಟಕ ಸಾಹಿತ್ಯ ಅಕಾಡೆಮಿ.
- ಮಾವಿನಕೆರೆ ರಂಗನಾಥನ್ (ಸಂ.). (2010). *ಮಾಸ್ತಿ ಸಮಗ್ರ ಸಾಹಿತ್ಯ ಅವಲೋಕನ.*
- ರಮಾಮಣಿ,ಟಿ.ಎನ್. (2010). *ನಾಟಕಕಾರ ಮಾಸ್ತಿ.*
- ರಂಗನಾಥ್, ಸಿ. ಎನ್. (2017). *ಕನ್ನಡ ವೃತ್ತಿ ರಂಗಭೂಮಿ ಮತ್ತು ನಾಟಕ ಸಾಹಿತ್ಯ.*
- ರಂಗನಾಥರಾವ್, ಜಿ.ಎನ್. (1999). *ಮಾಸ್ತಿಯವರ ನಾಟಕಗಳು.* ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
- ತಾರಾಮಣಿ, ಆರ್. (2019). *ಆಧುನಿಕ ಕನ್ನಡ ನಾಟಕಗಳಲ್ಲಿ ಪುರಾಣ ಮತ್ತು ಚರಿತ್ರೆಯ ಪ್ರತಿನಿಧೀಕರಣ.* ಬೆಂಗಳೂರು ವಿಶ್ವವಿದ್ಯಾಲಯ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 156-162
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಪ್ರಧಾನ ಮಂತ್ರಿ ಜನ್‌ಧನ್ ಯೋಜನೆಯ (PMJDY) ಇತಿಹಾಸ ಮತ್ತು ಪ್ರಸ್ತುತ ಸ್ಥಿತಿಗತಿಗಳು: ಒಂದು ಅಧ್ಯಯನ

**ಶಿವರಾಜಕುಮಾರ್ ಕೆ[1] ಮತ್ತು ಡಾ. ಪಾಂಡುರಂಗ ಆರ್[2]**

[1]ಸಹಾಯಕ ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ಎಸ್‌ಜೆಎಂವಿ ಕಲಾ ಮತ್ತು ವಾಣಿಜ್ಯ ಮಹಿಳಾ ಮಹಾವಿದ್ಯಾಲಯ, ರಾಣೆಬೆನ್ನೂರು.

[2]ಸಹಾಯಕ ಪ್ರಾಧ್ಯಾಪಕರು, ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾನಿಲಯ, ಬಳ್ಳಾರಿ.

***Abstract:***

*ಪ್ರಧಾನ ಮಂತ್ರಿ ಜನ್‌ಧನ್ ಯೋಜನೆಯನ್ನು ಭಾರತದಲ್ಲಿ 28 ಆಗಸ್ಟ್ 2014 ರಂದು ಆರ್ಥಿಕ ಸೇರ್ಪಡೆಯ ಪರಿಕಲ್ಪನೆಯಾಗಿ ಪ್ರಾರಂಭಿಸಲಾಯಿತು. ಗರಿಷ್ಠ ಜನರನ್ನು ಬ್ಯಾಂಕ್‌ಗಳಿಗೆ ಸಂಪರ್ಕಿಸುವುದು ಮತ್ತು ಅವರ ಸಣ್ಣ ಉಳಿತಾಯದಿಂದ ಗರಿಷ್ಠ ಲಾಭವನ್ನು ಪಡೆಯಲು ಅವರಿಗೆ ಆರ್ಥಿಕ ಸಾಕ್ಷರತೆಯನ್ನು ಒದಗಿಸುವುದು ಮುಖ್ಯ ಉದ್ದೇಶವಾಗಿತ್ತು. ಈ ಯೋಜನೆಗಳನ್ನು ಆರ್ಥಿಕ ಸೇರ್ಪಡೆಗೆ ಹೊಸ ಅಡಿಪಾಯವೆಂದು ಪರಿಗಣಿಸಲಾಗಿದೆ. ಆರ್ಥಿಕವಾಗಿ ಹೊರಗಿಡಲ್ಪಟ್ಟ ಜನರನ್ನು ಅಭಿವೃದ್ಧಿ ಮುಖ್ಯವಾಹಿನಿಗೆ ಸೇರಿಸುವ ಉದ್ದೇಶದಿಂದ PMJDY ಅನ್ನು ಪ್ರಾರಂಭಿಸಲಾಗಿದೆ. ಈ ಯೋಜನೆಯು ಗ್ರಾಮೀಣ ಪ್ರದೇಶಗಳಲ್ಲಿ ದೊಡ್ಡ ಯಶಸ್ಸನ್ನು ಕಂಡಿದೆ. ಇದು ಹೆಚ್ಚಾಗಿ ಸಾರ್ವಜನಿಕ ವಲಯದ ಬ್ಯಾಂಕುಗಳ ಮೇಲೆ ಅವಲಂಬಿತವಾಗಿದೆ ಏಕೆಂದರೆ ಅವು ಗ್ರಾಮೀಣ ಪ್ರದೇಶಗಳಲ್ಲಿ ಉತ್ತಮ ವ್ಯಾಪ್ತಿಯನ್ನು ಹೊಂದಿದ್ದವು. PMJDY ಅನ್ನು ಹಣಕಾಸು ಸಚಿವಾಲಯದ ಹಣಕಾಸು ಸೇವೆಗಳ ಇಲಾಖೆ ನಡೆಸುತ್ತಿದೆ. PMJDY ಉದ್ಘಾಟನೆಯ ದಿನದಂದು 15 ಮಿಲಿಯನ್ ಬ್ಯಾಂಕ್ ಖಾತೆಗಳನ್ನು ತೆರೆಯಲಾಗಿದೆ. ಈ ಯೋಜನೆಯು ಕಡಿಮೆ ಆದಾಯ ಹೊಂದಿರುವ ಜನರಿಗೆ ಸಹಾಯಕವಾಗಿದೆ ಏಕೆಂದರೆ ಅವರು ಸುಲಭವಾಗಿ ಬ್ಯಾಂಕ್ ಖಾತೆಯನ್ನು ತೆರೆಯಬಹುದು ಮತ್ತು ಬ್ಯಾಂಕಿಂಗ್ ಸೇವೆಗಳ ಪ್ರಯೋಜನವನ್ನು ಪಡೆಯಬಹುದು. PMJDY ಬ್ಯಾಂಕ್ ಖಾತೆದಾರರಿಗೆ ರುಪೇ ಡೆಬಿಟ್ ಕಾರ್ಡ್ ಅನ್ನು ಸಹ ಒದಗಿಸಲಾಗಿದೆ, ಇದನ್ನು ಪಾವತಿ ಮತ್ತು ಖರೀದಿಗೆ ಬಳಸಬಹುದು. ಪ್ರಸ್ತುತ ಲೇಖನದಲ್ಲಿ PMJDY ಯೋಜನೆಯ ಇತಿಹಾಸ ಮತ್ತು ಪ್ರಸ್ತುತ ಸ್ಥಿತಿಗತಿ ಕುರಿತು ವಿಶ್ಲೇಷಿಸುತ್ತದೆ. ಮಾಡಲಾಗಿದೆ.*

***Keywords:*** *ಪ್ರಧಾನ ಮಂತ್ರಿ ಜನ್ ಧನ್ ಯೋಜನೆ, PMJDY, ಆರ್ಥಿಕ ಒಳಗೊಳ್ಳುವಿಕೆ, ಆರ್ಥಿಕ ಸುಧಾರಣೆ.*

## ಪೀಠಿಕೆ

ಭಾರತದಲ್ಲಿ ಬಡತನ ಮತ್ತು ನಿರುದ್ಯೋಗ ಪ್ರಮುಖ ಸಮಸ್ಯೆಯಾಗಿದೆ. ಇದರ ನಿವಾರಣೆಗಾಗಿ ಸ್ವಾತಂತ್ರ್ಯದ ನಂತರ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಹಲವಾರು ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುತ್ತಿವೆ. ಈ ಯೋಜನೆಗಳ ಫಲಾನುಭವಿಯನ್ನು ತಲುಪಿದಾಗ ಮಾತ್ರ

***Please cite this article as:*** ಶಿವರಾಜಕುಮಾರ್, ಕೆ ಮತ್ತು ಆರ್. ಪಾಂಡುರಂಗ. (2024). ಪ್ರಧಾನ ಮಂತ್ರಿ ಜನ್‌ಧನ್ ಯೋಜನೆಯ (ಕಜಎಆಜಙ) ಇತಿಹಾಸ ಮತ್ತು ಪ್ರಸ್ತುತ ಸ್ಥಿತಿಗತಿಗಳು: ಒಂದು ಅಧ್ಯಯನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 156–162

ಸಫಲತೆಯನ್ನು ಕಾಣುತ್ತವೆ. ಈ ಯೋಜನೆಗಳ ಪರಿಣಾಮಕಾರಿ ಅನುಷ್ಠಾನದಲ್ಲಿ ಬ್ಯಾಂಕುಗಳು ಮತ್ತು ಹಣಕಾಸು ಸಂಸ್ಥೆಗಳ ಪಾತ್ರ ಮಹತ್ವವಾದವು. ಭಾರತದಲ್ಲಿ ಹಣಕಾಸು ಸೇರ್ಪಡೆಯ ಪರಿಕಲ್ಪನೆ ಹೊಸದೇನಲ್ಲ. ಸರ್ಕಾರವು ಈ ದಿಕ್ಕಿನಲ್ಲಿ ನಿರಂತರವಾಗಿ ಕ್ರಮಗಳನ್ನು ತೆಗೆದುಕೊಳ್ಳುತ್ತಿದೆ, ಅದರಡಿಯಲ್ಲಿ 1969 ಮತ್ತು 1980 ರಲ್ಲಿ ವಾಣಿಜ್ಯ ಬ್ಯಾಂಕ್‌ಗಳ ರಾಷ್ಟ್ರೀಕರಣ, 1975 ಮತ್ತು 1991 ಗ್ರಾಮೀಣ ಬ್ಯಾಂಕ್‌ಗಳ ಸ್ಥಾಪನೆ ಪ್ರಮುಖವಾದವುಗಳು. 1969ರಲ್ಲಿ 8,826 ವಾಣಿಜ್ಯ ಬ್ಯಾಂಕುಗಳ ಶಾಖೆಗಳ ಸಂಖ್ಯೆ 2020ರ ವೇಳೆಗೆ 1,53,102 ಕ್ಕೇರಿದೆ.

ಯೋಜನಾ ಆಯೋಗದ ಪ್ರಕಾರ, ಆರ್ಥಿಕ ಸೇರ್ಪಡೆಯು ಸಮಂಜಸವಾದ ವೆಚ್ಚದಲ್ಲಿ ವ್ಯಾಪಕ ಶ್ರೇಣಿಯ ಹಣಕಾಸು ಸೇವೆಗಳಿಗೆ ಸಾರ್ವತ್ರಿಕ ಪ್ರವೇಶವನ್ನು ಸೂಚಿಸುತ್ತದೆ. ಚಕ್ರವರ್ತಿ ಪ್ರಕಾರ, "ಹಣಕಾಸಿನ ಸೇರ್ಪಡೆಯು ದುರ್ಬಲ ವರ್ಗಗಳು ಮತ್ತು ಕಡಿಮೆ ಆದಾಯದ ಗುಂಪುಗಳಂತಹ ದುರ್ಬಲ ವರ್ಗಗಳನ್ನು ಒಳಗೊಂಡಂತೆ ಸಮಾಜದ ಎಲ್ಲಾ ವರ್ಗಗಳಿಗೆ ಅಗತ್ಯವಿರುವ ಸೂಕ್ತವಾದ ಹಣಕಾಸು ಉತ್ಪನ್ನಗಳು ಮತ್ತು ಸೇವೆಗಳಿಗೆ ಮುಖ್ಯವಾಹಿನಿಯ ಸಾಂಸ್ಥಿಕ ಆಟಗಾರರಿಂದ ನ್ಯಾಯಯುತ ಮತ್ತು ಪಾರದರ್ಶಕ ರೀತಿಯಲ್ಲಿ ಕೈಗೆಟುಕುವ ವೆಚ್ಚದಲ್ಲಿ ಪ್ರವೇಶವನ್ನು ಖಾತ್ರಿಪಡಿಸುವ ಪ್ರಕ್ರಿಯೆಯಾಗಿದೆ. ಹಣಕಾಸಿನ ಸೇರ್ಪಡೆ ಎಂದರೆ ಒಂದು ನಿರ್ದಿಷ್ಟ ಸಮಾಜದಲ್ಲಿ ಅನಾನುಕೂಲಕರ ಮತ್ತು ಕಡಿಮೆ–ಆದಾಯದ ಗುಂಪುಗಳ ವಿಶಾಲ ವಿಭಾಗಗಳಿಗೆ ಕೈಗೆಟುಕುವ ವೆಚ್ಚದಲ್ಲಿ ಹಣಕಾಸು ಸೇವೆಗಳ ವಿತರಣೆಯನ್ನು ಒಳಗೊಂಡಿರುತ್ತದೆ. ಯಾವುದೇ ಆರ್ಥಿಕ ವ್ಯವಸ್ಥೆಯಲ್ಲಿ ಅಂತರ್ಗತ ಬೆಳವಣಿಗೆಯನ್ನು ಸಾಧಿಸಲು ಬಡ ಮತ್ತು ದುರ್ಬಲ ಗುಂಪುಗಳಿಂದ ಹಣಕಾಸಿನ ಪ್ರವೇಶವು ಪೂರ್ವಾಪೇಕ್ಷಿತವಾಗಿದೆ. ಆಗಸ್ಟ್ 15, 2014 ರಂದು ಪ್ರಧಾನಿ ನರೇಂದ್ರ ಮೋದಿ ಅವರು 'ಪ್ರಧಾನ ಮಂತ್ರಿ ಜನ್ ಧನ್ ಯೋಜನೆ'ಯನ್ನು ಘೋಷಿಸಿದರು. ಇದನ್ನು ಆರ್ಥಿಕ ಸೇರ್ಪಡೆಗೆ ಒಂದು ಮಾರ್ಗವೆಂದು ಪರಿಗಣಿಸಲಾಗಿದೆ. ಆಗಸ್ಟ್ 28, 2014 ರಂದು ಈ ಯೋಜನೆಯನ್ನು ಪ್ರಾರಂಭಿಸಲಾಯಿತು. ಈ ಕಾರ್ಯಕ್ರಮದ ಮುಖ್ಯ ಉದ್ದೇಶವೆಂದರೆ, ಭಾರತದ ಪ್ರತಿಯೊಬ್ಬ ಪ್ರಜೆ ಬ್ಯಾಂಕ್ ಖಾತೆಯನ್ನು ತೆರೆಯಬೇಕಾಗಿತ್ತು. ಆಗಸ್ಟ್ 28, 2014 ರಂದು ಯೋಜನೆಯ ಉದ್ಘಾಟನೆಯ ದಿನದಂದು ಭಾರತದಾದ್ಯಂತ ಎಲ್ಲಾ ಬ್ಯಾಂಕುಗಳಿಂದ ಸುಮಾರು 60,000 ಶಿಬಿರಗಳನ್ನು ಏಕ ಕಾಲದಲ್ಲಿ ಆಯೋಜಿಸಲಾಗಿತ್ತು, ಇದರ ಪರಿಣಾಮವಾಗಿ ಯೋಜನೆಯ ಮೊದಲ ದಿನವೇ 1.5 ಕೋಟಿ ಬ್ಯಾಂಕ್ ಖಾತೆಗಳನ್ನು ತೆರೆಯಲಾಯಿತು. ಅಕ್ಟೋಬರ್ 2, 2014 ರವರೆಗೆ, PMJDY ಯೋಜನೆಡಿ ಗ್ರಾಮೀಣ ಪ್ರದೇಶದಲ್ಲಿ 3.12 ಕೋಟಿ ಮತ್ತು ನಗರ ಪ್ರದೇಶಗಳಲ್ಲಿ 2.17 ಕೋಟಿ ಸೇರಿದಂತೆ ಒಟ್ಟು 5.29 ಕೋಟಿ ಖಾತೆಗಳನ್ನು ತೆರೆಯಲಾಯಿತು.

**ಸಂಶೋಧನಾ ಪ್ರಬಂಧದ ಉದ್ದೇಶಗಳು**

- PMJDY ಯ ಪ್ರಯೋಜನಗಳನ್ನು ಅಧ್ಯಯನ ಮಾಡುವುದು.
- PMJDY ಯೋಜನೆಯ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವುದು.

**ಸಂಶೋಧನಾ ವಿಧಾನ**

ಪ್ರಸ್ತುತ ಅಧ್ಯಯನವು ಆನುಷಂಗಿಕ ಮಾಹಿತಿ ಮೂಲವನ್ನು ಅವಲಂಬಿಸಿದೆ. ಮಾಹಿತಿಯನ್ನು ವರದಿಗಳು, ಲೇಖನಗಳು, ಗ್ರಂಥಗಳು, ನಿಯತಕಾಲಿಕೆಗಳು, ಪ್ರೌಢಪ್ರಬಂಧಗಳು ಹಾಗೂ ಅಂತರ್ಜಾಲದಿಂದ ಸಂಗ್ರಹಿಸಲಾಗಿದೆ.

**ಸಾಹಿತ್ಯದ ವಿಮರ್ಶೆ**

ಸಿಂಗ್, ಹೆಚ್. ಮತ್ತು ಸಿಂಗ್ ರವರು ತಮ್ಮ ಅಧ್ಯಯನದಲ್ಲಿ ಹಣಕಾಸು ಸೇರ್ಪಡೆ ಯಶಸ್ವಿಯಾಗಲು PMJDY ಯಶಸ್ಸನ್ನು ಕಂಡಿದೆ. ಈ ಯೋಜನೆಯು ಆರ್ಥಿಕ ಒಳಗೊಳ್ಳುವಿಕೆಯನ್ನು ಉತ್ತೇಜಿಸುತ್ತದೆ ಮತ್ತು ರಾಷ್ಟ್ರದ ಅಂತರ್ಗತ

ಬೆಳವಣಿಗೆಗೆ ಕೊಡುಗೆ ನೀಡುತ್ತದೆ ಎಂದು ಹೇಳಿದ್ದಾರೆ.

ಬಿರ್ಲಾ, ಎ. ತಮ್ಮ ಸಂಶೋಧನಾ ಪ್ರಬಂಧದಲ್ಲಿ PMJDY ಯೋಜನೆಯು ಸಕಾರಾತ್ಮಕ ದಿಕ್ಕಿನಲ್ಲಿ ಸಾಗುತ್ತಿದೆ ಎಂದು ಹೇಳಿದ್ದಾರೆ. PMJDY ದೇಶದ ಎಲ್ಲಾ ಕುಟುಂಬಗಳನ್ನು ಬ್ಯಾಂಕಿಂಗ್ ವ್ಯವಸ್ಥೆಗೆ ಸೇರಿಸಲು ರಾಷ್ಟ್ರೀಯ ಯೋಜನೆ ಇದಾಗಿದೆ. ಪ್ರಧಾನ ಮಂತ್ರಿ ಜನ್‌ಧನ್ ಯೋಜನೆಯು ಬ್ಯಾಂಕ್ ಇಲ್ಲದ, ವಂಚಿತ ಮತ್ತು ಸಮಾಜದ ದುರ್ಬಲ ವರ್ಗವನ್ನು ಆರ್ಥಿಕ ವ್ಯವಸ್ಥೆಯಲ್ಲಿ ಸೇರಿಸಿಕೊಳ್ಳುವಲ್ಲಿ ಸಹಾಯಕವಾಗಿದೆ. ಈ ಯೋಜನೆಯಿಂದಾಗಿ ಆರ್ಥಿಕ ಸಾಕ್ಷರತೆಯ ಮಟ್ಟ ಹೆಚ್ಚಾಗಿದೆ. ಇದರಿಂದಾಗಿ ಬ್ಯಾಂಕ್ ಖಾತೆಗಳ ಸಂಖ್ಯೆಯೂ ಹೆಚ್ಚುತ್ತಿದೆ. PMJDY ಗ್ರಾಮೀಣ ಪ್ರದೇಶಗಳು ಮತ್ತು ನಗರ ಪ್ರದೇಶಗಳಲ್ಲಿ ಹೊಸ ಶಾಖೆಗಳನ್ನು ತೆರೆಯಲು ಬ್ಯಾಂಕ್‌ಗಳನ್ನು ಪ್ರೇರೇಪಿಸಿದೆ. ಈ ಬದಲಾವಣೆಯು ಜಾಗತಿಕ ವೇದಿಕೆಯಲ್ಲಿ ಭಾರತದ ಹಣಕಾಸು ವ್ಯವಸ್ಥೆಯ ಮೇಲೆ ತೀವ್ರ ಪರಿಣಾಮ ಬೀರುತ್ತದೆ ಎಂದು ಹೇಳಿದ್ದಾರೆ.

ಇವರಲ್ಲದೆ ಸಾಹು, ಎಸ್.ಕೆ. ಅವರು ಇದೊಂದು ಯಶಸ್ವಿ ಯೋಜನೆಯಾಗಿದ್ದು, ಗ್ರಾಮೀಣ ಪ್ರದೇಶದಲ್ಲಿ ಯೋಜನೆ ಕುರಿತು ಹೆಚ್ಚಿನ ಅರಿವು ಮೂಡಿಸಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ. ಪನ್ವಾ ಮತ್ತು ಸಿಂಗ್, ಎಸ್. ರವರು ವಿಶ್ವಬ್ಯಾಂಕ್ ಸಮೀಕ್ಷೆಯ ಪ್ರಕಾರ ಕೇವಲ 40% ಭಾರತೀಯ ಬ್ಯಾಂಕ್ ಖಾತೆದಾರರು "ಸಕ್ರಿಯ" ಖಾತೆ ಬಳಕೆದಾರರಾಗಿದ್ದಾರೆ, ಈ ಸಂಖ್ಯೆಯು ಗುರಿಯನ್ನು ಸಾಧಿಸಲು ಮಾತ್ರ ಜನ್‌ಧನ್ ಖಾತೆಗಳನ್ನು ತೆರೆಯಲಾಗಿದೆ ಎಂದು ತೋರಿಸುತ್ತದೆ. ಆದ್ದರಿಂದ, PMJDY ಹಣಕಾಸಿನ ಒಳಗೊಳ್ಳುವಿಕೆಯ ಮೂಲಭೂತ ಅಡಿಪಾಯವನ್ನು ಹಾಕಿದೆ ಎಂದು ನಾವು ಹೇಳಬಹುದು ಆದರೆ ಹೆಚ್ಚಿನ ಸೌಲಭ್ಯಗಳನ್ನು ನೀಡಬೇಕಾಗಿದೆ ಮತ್ತು ಖಾತೆದಾರರಿಗೆ ಆರ್ಥಿಕ ಸೇರ್ಪಡೆಯ ನಿಜವಾದ ಶಕ್ತಿಯನ್ನು ನೀಡಲು ಅವರಿಗೆ ಹೆಚ್ಚಿನ ಜಾಗೃತಿಯನ್ನು ಮೂಡಿಸಬೇಕಿದೆ ಎಂದು ಹೇಳಿದ್ದಾರೆ. ಖಂಡೇಲ್ವಾಲ್, ವಿ. (2017) ಈ ಯೋಜನೆಯು ದೇಶದ ಆರ್ಥಿಕ ಅಭಿವೃದ್ಧಿಯನ್ನು ಹೆಚ್ಚಿಸಲು ಮತ್ತು ಬಡತನವನ್ನು ಕಡಿಮೆ ಮಾಡಲು ಪ್ರಯೋಜನಕಾರಿಯಾಗಿದೆ ಎಂದು ಹೇಳಿದ್ದಾರೆ. ಪಟ್ನಾಯಕ್, ಸತ್ಪತಿ ಮತ್ತು ಸುಪ್ಕಾರ್, (2015) ಇವರ ಸಂಶೋಧನೆಗಳ ಪ್ರಕಾರ ಭುವನೇಶ್ವರದ ಶೇ.13.8 ರಷ್ಟು ಜನರು ಮಾತ್ರ ಜನ್‌ಧನ್ ಖಾತೆಗಳನ್ನು ಹೊಂದಿದ್ದಾರೆ. ಇಲ್ಲಿನ ಶೇ. 78.9 ಪುರುಷರು ಮತ್ತು ಶೇ.98.05 ಮಹಿಳೆಯರಿಗೆ ಈ ಯೋಜನೆಯ ಬಗ್ಗೆ ತಿಳಿದಿರುವುದಿಲ್ಲ ಎಂದು ಅಧ್ಯಯನವು ತೀರ್ಮಾನಿಸಿದೆ.

### ಪ್ರಧಾನ ಮಂತ್ರಿ ಜನ್ ಧನ್ ಯೋಜನೆ PMJDY ಪರಿಕಲ್ಪನೆ

ಪ್ರಧಾನ ಮಂತ್ರಿ ಜನ್-ಧನ್ ಯೋಜನೆ (PMJDY) ಹಣಕಾಸಿನ ಸೇವೆಗಳಿಗೆ ಪ್ರವೇಶವನ್ನು ಖಚಿತಪಡಿಸಿಕೊಳ್ಳಲು ಹಣಕಾಸಿನ ಸೇರ್ಪಡೆಗಾಗಿ ರಾಷ್ಟ್ರೀಯ ಮಿಷನ್ ಆಗಿದೆ, ಅವುಗಳೆಂದರೆ, ಬ್ಯಾಂಕಿಂಗ್ / ಉಳಿತಾಯ ಮತ್ತು ಠೇವಣಿ ಖಾತೆಗಳು, ರವಾನೆ, ಕ್ರೆಡಿಟ್, ಇನ್ಸೂರ್ನಲ್ಲಿ ಕೈಗೆಟುಕುವ ರೀತಿಯಲ್ಲಿ PMJDY ಖಾತೆಯನ್ನು ಯಾವುದೇ ಬ್ಯಾಂಕ್ ಮತ್ತು ಪೋಸ್ಟ್ ಆಫೀಸ್ ಶಾಖೆಯಲ್ಲಿ ತೆರೆಯಬಹುದು. ಈ ಖಾತೆಗಳನ್ನು ಶೂನ್ಯ ಉಳಿತಾಯದೊಂದಿಗೆ ತೆರೆಯಬಹುದಾಗಿರುತ್ತದೆ.

### PMJDY ಯ ಪ್ರಯೋಜನಗಳು

PMJDY ಯೋಜನೆಯಡಿಯಲ್ಲಿ, ಯಾವುದೇ ವ್ಯಕ್ತಿ ಕನಿಷ್ಠ ಸಂಖ್ಯೆಯ ದಾಖಲೆಗಳೊಂದಿಗೆ ಬ್ಯಾಂಕ್ ಖಾತೆಯನ್ನು ತೆರೆಯಬಹುದಾಗಿರುತ್ತದೆ. PMJDY ಖಾತೆಗಳಲ್ಲಿ ಯಾವುದೇ ಕನಿಷ್ಠ ಬ್ಯಾಲೆನ್ಸ್ ನಿರ್ವಹಿಸುವ ಅಗತ್ಯವಿಲ್ಲ ಆದರೆ ಗ್ರಾಹಕರು ಚೆಕ್‌ಬುಕ್ ಮತ್ತಿತರ ಹೆಚ್ಚುವರಿ ಸೌಲಭ್ಯಗಳನ್ನು ಪಡೆಯಲು ಬಯಸಿದರೆ ಕನಿಷ್ಠ ಬ್ಯಾಲೆನ್ಸ್ ಅಗತ್ಯವಿರುತ್ತದೆ.

ರೂಪಾಯಿ ಡೆಬಿಟ್ ಕಾರ್ಡ್ ಅನ್ನು PMJDY ಖಾತೆದಾರರಿಗೆ ಒದಗಿಸಲಾಗುತ್ತದೆ. ಇದನ್ನು ಭಾರತದ ಎಲ್ಲಾ ಎಟಿಎಂಗಳಲ್ಲಿ ಹಣವನ್ನು ಹಿಂಪಡೆಯಲು ಬಳಸಬಹುದು. 33 ಕೋಟಿ ರೂಪಾಯಿ ಡೆಬಿಟ್ ಕಾರ್ಡ್‌ಗಳನ್ನು ಏಪ್ರಿಲ್ 2023 ರವರೆಗೆ ನೀಡಲಾಗಿದೆ. 2018 ರ ನಂತರ ತೆರೆಯಲಾದ ಹೊಸ PMJDY ಖಾತೆಗಳಿಗೆ ರೂ. 2 ಲಕ್ಷ ಅಪಘಾತ ವಿಮೆಯನ್ನು ನೀಡಲಾಗುತ್ತದೆ. 26ನೇ ಜನವರಿ 2015 ರ ಮೊದಲು ಬ್ಯಾಂಕ್ ಖಾತೆಯನ್ನು ತೆರೆದಿದ್ದರೆ 30,000 ರೂಗಳನ್ನು ಜೀವವಿಮೆ ಪಡೆಯಲು ಅರ್ಹತೆಯನ್ನೊಂದಿರುತ್ತಾರೆ. ಪ್ರಧಾನ ಮಂತ್ರಿ ಜನ್‌ಧನ್ ಯೋಜನೆಯಡಿಯಲ್ಲಿ ಖಾತೆಯನ್ನು ತೆರೆದ 6 ತಿಂಗಳ ನಂತರ, ಖಾತೆದಾರರು 10,000 ರೂವರೆಗಿನ ಓವರ್ಡ್ರಾಫ್ಟ್ ಸೌಲಭ್ಯವನ್ನು ಪಡೆಯಬಹುದಾಗಿರುತ್ತದೆ.

PMJDY ಖಾತೆಗಳು ನೇರ ಲಾಭ ವರ್ಗಾವಣೆಗೆ (DBT) ಅರ್ಹವಾಗಿವೆ. ಈ ವ್ಯವಸ್ಥೆಯಿಂದ ಮಧ್ಯವರ್ತಿಗಳಿಂದ ಫಲಾನುಭವಿಗಳನ್ನು ರಕ್ಷಿಸಬಹುದು ಹಾಗೂ ಪಾರದರ್ಶಕತೆಯನ್ನು ಕಾಪಾಡಿಕೊಳ್ಳಬಹುದಾಗಿದೆ.

PMJDY ಬಡ ಜನರಿಗೆ ಬಹಳ ಪ್ರಯೋಜನಕಾರಿ ಯೋಜನೆಯಾಗಿದೆ. ಈ ಯೋಜನೆಯ ಮುಖ್ಯ ಉದ್ದೇಶವು ಮೂಲ ಉಳಿತಾಯ ಬ್ಯಾಂಕ್ ಖಾತೆಯ ಲಭ್ಯತೆ, ಅಗತ್ಯ ಆಧಾರಿತ ಸಾಲದ ಪ್ರವೇಶ, ಹಣ ರವಾನೆ ಸೌಲಭ್ಯ, ವಿಮೆ ಮತ್ತು ಪಿಂಚಣಿ ಹೊರತುಪಡಿಸಿದ ವಿಭಾಗಗಳು, ದುರ್ಬಲ ವರ್ಗಗಳು ಮತ್ತು ಕಡಿಮೆ ಆದಾಯದ ಗುಂಪಿನಂತಹ ವಿವಿಧ ಹಣಕಾಸು ಸೇವೆಗಳಿಗೆ ಪ್ರವೇಶವನ್ನು ಖಚಿತಪಡಿಸಿಕೊಳ್ಳುವುದು.

**ಕೋಷ್ಟಕ 1. ಪ್ರಧಾನ ಮಂತ್ರಿ ಜನ್‌ಧನ್ ಯೋಜನೆ ಫಲಾನುಭವಿಗಳ ವಿವರ (ಕೋಟಿಗಳಲ್ಲಿ)**

**29/05/2024 ರಂತೆ ಫಲಾನುಭವಿಗಳು**

| ಬ್ಯಾಂಕ್ ಹೆಸರು | ಗ್ರಾಮೀಣ/ಸೆಮಿ ಅರ್ಬನ್ ಬ್ಯಾಂಕ್ ಶಾಖೆಗಳ ಫಲಾನುಭವಿಗಳ ಸಂಖ್ಯೆ | ನಗರ/ಮೆಟ್ರೋ ಸೆಂಟರ್ ಬ್ಯಾಂಕ್ ಶಾಖೆಗಳ ಫಲಾನುಭವಿಗಳ ಸಂಖ್ಯೆ | ಮಹಿಳಾ ಫಲಾನುಭವಿಗಳ ಸಂಖ್ಯೆ | ಒಟ್ಟು ಫಲಾನುಭವಿಗಳ ಸಂಖ್ಯೆ | ಖಾತೆಗಳಲ್ಲಿ ಠೇವಣಿ (ಕೋಟಿಗಳಲ್ಲಿ) | ರುಪೇ ಡೆಬಿಟ್ ಕಾರ್ಡ್ ಪಡೆದವರ ಸಂಖ್ಯೆ |
|---|---|---|---|---|---|---|
| ಸಾರ್ವಜನಿಕ ವಲಯದ ಬ್ಯಾಂಕುಗಳು | 25.57 | 15.24 | 22.48 | 40.81 | 175080.47 | 30.81 |
| ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು | 8.36 | 1.39 | 5.67 | 9.75 | 44570.11 | 3.48 |
| ಖಾಸಗಿ ವಲಯದ ಬ್ಯಾಂಕುಗಳು | 0.72 | 0.87 | 0.86 | 1.60 | 6868.58 | 1.32 |
| ಗ್ರಾಮೀಣ ಸಹಕಾರ ಬ್ಯಾಂಕುಗಳು | 0.19 | 0.00 | 0.10 | 0.19 | 0.01 | 0.00 |
| ಒಟ್ಟು | 34.85 | 17.50 | 29.11 | 52.35 | 226519317 | 35.60 |

ಕೋಷ್ಟಕ 1 ರಲ್ಲಿ ಪ್ರಧಾನ ಮಂತ್ರಿ ಜನ್‌ಧನ್ ಯೋಜನೆ ಫಲಾನುಭವಿಗಳ ವಿವರವನ್ನು ನೀಡಲಾಗಿದೆ. ಕೋಷ್ಟಕದ ಪ್ರಕಾರ 52.35 ಕೋಟಿ ಫಲಾನುಭವಿಗಳು ಒಟ್ಟು 226519.17 ಕೋಟಿ ರೂಗಳನ್ನು ಉಳಿತಾಯ ಮಾಡಿದ್ದಾರೆ. ಬ್ಯಾಂಕುವಾರು ನೋಡಿದಾಗ ಅತ್ಯಂತ ಹೆಚ್ಚು ಜನರು ಸಾರ್ವಜನಿಕ ವಲಯದ ಬ್ಯಾಂಕುಗಳಲ್ಲಿ ಹೆಚ್ಚಿನ ಜನ್‌ಧನ್ ಖಾತೆಗಳನ್ನು ಹೊಂದಿದ್ದು, 175080.47 ಕೋಟಿಗಳನ್ನು ಉಳಿತಾಯ ಮಾಡಿದ್ದಾರೆ.

**ಕೋಷ್ಟಕ 2: ರಾಜ್ಯವಾರು ಜನ್‌ಧನ್ ಯೋಜನೆಯ ಪ್ರಗತಿ ವರದಿ (29/05/2024)**

| ಕ್ರಮ ಸಂಖ್ಯೆ | ರಾಜ್ಯಗಳು | ಗ್ರಾಮೀಣ/ಸೆಮಿ ಅರ್ಬನ್ ಬ್ಯಾಂಕ್ ಶಾಖೆಗಳ ಫಲಾನುಭವಿಗಳ ಸಂಖ್ಯೆ | ನಗರ/ಮೆಟ್ರೋ ಸೆಂಟರ್ ಬ್ಯಾಂಕ್ ಶಾಖೆಗಳ ಫಲಾನುಭವಿಗಳ ಸಂಖ್ಯೆ | ಒಟ್ಟು ಫಲಾನುಭವಿಗಳ ಸಂಖ್ಯೆ | ಖಾತೆಗಳಲ್ಲಿ ಠೇವಣಿ (ಕೋಟಿಗಳಲ್ಲಿ) | ರುಪೇ ಡೆಬಿಟ್ ಕಾರ್ಡ್ ಪಡೆದವರ ಸಂಖ್ಯೆ |
|---|---|---|---|---|---|---|
| 1 | ಅಂಡಮಾನ್ ಮತ್ತು ನಿಕೋಬಾರ್ | 42,185 | 17,293 | 59,478 | 33.47 | 36,994 |
| 2 | ಆಂದ್ರಪ್ರದೇಶ | 7,811,370 | 7,027,350 | 14,838,720 | 4,890.06 | 9,380,018 |
| 3 | ಅರುಣಚಲ ಪ್ರದೇಶ | 323,051 | 131,512 | 454,563 | 278.06 | 309,935 |
| 4 | ಅಸ್ಸಾಂ | 18,731,047 | 5,139,155 | 23,870,202 | 6,163.36 | 13,130,016 |
| 5 | ಬಿಹಾರ | 42,757,562 | 16,695,272 | 59,452,834 | 22,074.72 | 42,697,686 |
| 6 | ಚಂಡಿಗಡ | 44,668 | 282,377 | 327,045 | 178.45 | 211,472 |
| 7 | ಛತ್ತಿಸ್‌ಗಡ್ | 12,310,094 | 5,261,441 | 17,571,535 | 7,319.82 | 10,716,823 |
| 8 | ದೆಹಲಿ | 585,375 | 5,800,113 | 6,385,488 | 2,961.34 | 4,859,415 |
| 9 | ಗೋವಾ | 170,995 | 34,987 | 205,982 | 167.3 | 144,155 |
| 10 | ಗುಜರಾತ್ | 11,123,221 | 7,398,432 | 18,521,653 | 9,431.38 | 14,025,198 |
| 11 | ಹರಿಯಾಣ | 5,053,535 | 4,903,959 | 9,957,494 | 6,395.16 | 6,802,900 |
| 12 | ಹಿಮಾಚಲ ಪ್ರದೇಶ | 1,735,888 | 154,975 | 1,890,863 | 1,362.18 | 1,256,746 |
| 13 | ಜಮ್ಮು ಕಾಶ್ಮೀರ | 2,133,758 | 443,717 | 2,577,475 | 1,644.13 | 1,948,728 |
| 14 | ಜಾರ್ಖಂಡ್ | 15,306,132 | 3,175,576 | 18,481,708 | 8,019.02 | 12,574,361 |
| 15 | ಕರ್ನಾಟಕ | 11,328,627 | 7,918,632 | 19,247,259 | 9,034.31 | 11,707,894 |
| 16 | ಕೇರಳ | 3,683,962 | 2,555,379 | 6,239,341 | 2,688.80 | 3,454,420 |
| 17 | ಲಡಾಖ್ | 15,055 | 4,682 | 19,737 | 24.46 | 15,889 |
| 18 | ಲಕ್ಷದ್ವೀಪ | 7,881 | 1,867 | 9,748 | 17.4 | 7,579 |
| 19 | ಮದ್ಯಪ್ರದೇಶ | 26,178,256 | 17,040,037 | 43,218,293 | 13,866.57 | 32,249,473 |
| 20 | ಮಹಾರಾಷ್ಟ್ರ | 18,938,455 | 15,320,485 | 34,258,940 | 14,449.31 | 23,762,291 |
| 21 | ಮಣಿಪುರ | 678,185 | 410,608 | 1,088,793 | 269.72 | 673,735 |
| 22 | ಮೇಘಾಲಯ | 705,303 | 81,545 | 786,848 | 439.53 | 478,519 |
| 23 | ಮೀಜೋರಾಂ | 233,905 | 150,856 | 384,761 | 170.53 | 160,809 |
| 24 | ನಾಗಲ್ಯಾಂಡ್ | 182,610 | 212,209 | 394,819 | 128.89 | 298,097 |
| 25 | ಒಡಿಸ್ಸಾ | 16,927,992 | 4,696,979 | 21,624,971 | 9,780.47 | 15,332,641 |

| | | | | | | |
|---|---|---|---|---|---|---|
| 26 | ಪುದುಚೆರಿ | 107,024 | 110,262 | 217,286 | 100.45 | 146,305 |
| 27 | ಪಂಜಾಬ್ | 5,149,354 | 3,933,167 | 9,082,521 | 4,327.90 | 6,446,798 |
| 28 | ರಾಜಸ್ಥಾನ | 22,856,874 | 12,482,176 | 35,339,050 | 18,368.67 | 26,355,811 |
| 29 | ಸಿಕ್ಕಿಂ | 61,123 | 29,707 | 90,830 | 53.78 | 66,765 |
| 30 | ತಮಿಳುನಾಡು | 8,023,773 | 7,523,073 | 15,546,846 | 5,156.61 | 11,241,832 |
| 31 | ತೆಲಂಗಾಣ | 6,591,647 | 5,225,298 | 11,816,945 | 4,453.35 | 8,658,578 |
| 32 | ದಾದ್ರಾ ಮತ್ತು ನಗರ್ ಹಾವೇಲಿ, ಡಮನ್ ಡಿಯು | 205,002 | 27,341 | 232,343 | 145.74 | 160,533 |
| 33 | ತ್ರಿಪುರಾ | 846,683 | 213,735 | 1,060,418 | 580.38 | 521,531 |
| 34 | ಉತ್ತರ ಪ್ರದೇಶ | 67,178,705 | 26,187,560 | 93,366,265 | 47,427.21 | 61,439,064 |
| 35 | ಉತ್ತರ್ಖಾಂಡ್ | 2,410,778 | 1,202,594 | 3,613,372 | 2,251.33 | 2,405,052 |
| 36 | ಪಶ್ಚಿಮ ಬಂಗಾಳ | 38,014,411 | 13,241,340 | 51,255,751 | 21,865.34 | 32,312,740 |
| 37 | ಒಟ್ಟು | 348,454,486 | 175,035,691 | 523,490,177 | 226,519.17 | 355,990,803 |

ಕೋಷ್ಟಕ 2 ರಲ್ಲಿ ರಾಜ್ಯವಾರು ಜನ್‌ಧನ್ ಯೋಜನೆಯ ಫಲಾನುಭವಿಗಳ ವಿವರವನ್ನು ನೀಡಲಾಗಿದೆ. ಕೋಷ್ಟಕದ ಪ್ರಕಾರ ಒಟ್ಟು 523,490,177 ಫಲಾನುಭವಿಗಳಿದ್ದು, 226,519.17 ಕೋಟಿ ರೂಪಾಯಿಗಳನ್ನು ಉಳಿತಾಯ ಮಾಡಲಾಗಿದೆ. ಹಾಗೂ 355,990,803 ಜನರಿಗೆ ರುಪೇ ಡೇಬಿಟ್ ಕಾರ್ಡ್‌ಗಳನ್ನು ವಿತರಿಸಲಾಗಿದೆ. ಪ್ರದೇಶವಾರು ನೋಡಿದಾಗ ಗ್ರಾಮೀಣ ಪ್ರದೇಶದಲ್ಲಿ (348,454,486) ಹೆಚ್ಚಿನ ಫಲಾನುಭವಿಗಳಿದ್ದಾರೆ.

**ಉಪಸಂಹಾರ**

ಒಟ್ಟಾರೆಯಾಗಿ ಹೇಳುವುದಾದರೆ ಪ್ರಧಾನ ಮಂತ್ರಿ ಜನ್‌ಧನ್ ಯೋಜನೆಯು ಆರ್ಥಿಕ ಸೇರ್ಪಡೆಯ ಪ್ರಮುಖ ಸಾಧನವಾಗಿದೆ. ಈ ಯೋಜನೆಯಿಂದ ಫಲಾನುಭವಿಗಳಿಗೆ ನೇರ ಹಣ ವರ್ಗಾವಣೆ ಮಾಡಲು ಹಾಗೂ ಉಳಿತಾಯ ಮನೋಭಾವ ಹೆಚ್ಚಿಸುವಲ್ಲಿ ಸಹಾಯಕವಾಗಿದೆ. ಸಮಾಜದ ಬಡಜನರ ಆರ್ಥಿಕ ಅಭಿವೃದ್ಧಿಗೆ ಹಾಗೂ ಆರ್ಥಿಕ ಒಳಗೊಳ್ಳುವಿಕೆ ಹಾಗೂ ಅಂತರ್ಗತ ಬೆಳವಣಿಗೆಗೆ ಸಹಾಯಕವಾಗಿದೆ. ಈ ಯೋಜನೆಯ ಬಗ್ಗೆ ಇನ್ನೂ ಹೆಚ್ಚಿನ ಅರಿವು ಮೂಡಿಸುವುದು ಅವಶ್ಯಕವಾಗಿದೆ. DBT (ನೇರ ಲಾಭ ವರ್ಗಾವಣೆ) ಗೆ ಜನ್‌ಧನ್ ಯೋಜನೆಯು ಸಹಾಯಕವಾಗಿರುವುದ್ದರಿಂದ ಸಮಾಜ ಕಲ್ಯಾಣ ಯೋಜನೆಗಳಲ್ಲಿನ ಸೋರಿಕೆಗಳನ್ನು ಕಡಿಮೆ ಮಾಡುವಲ್ಲಿ ಹಾಗೂ ಭ್ರಷ್ಟಚಾರವನ್ನು ನಿರ್ಮೂಲನೆ ಮಾಡಲು ಸಹಾಯಕವಾಗಿದೆ.

**ಪರಾಮರ್ಶನ ಗ್ರಂಥಗಳು**


- ಬಾರ್ಹತೆ, ಜಿ.ಹೆಚ್. & ಜಗ್ತಾಪ್. (2015). ಪ್ರಧಾನ್ ಮಂತ್ರಿ ಜನ ಧನ ಯೋಜನಾ: ನ್ಯಾಷನಲ್ ಮಿಷನ್. *ಇಂಡಿಯನ್ ಜರ್ನಲ್ ಆ ಅಪ್ಲೈಡ್ ರಿಸರ್ಚ್,* 4(12).
- ಬೆಹೆರೆ, ಕೆ.ಸಿ. (2014). ಪ್ರಧಾನ್ ಮಂತ್ರಿ ಜನ ಧನ ಯೋಜನಾ: ವಿಷನ್ ಎ ಎಕನಾಮಿಕ್ ಪವರ್ ಥ್ರೂ ಫೈನಾನ್ಸಿಯಲ್ ಇನ್‌ಕ್ಲೂಷನ್. *ಇಂಡಿಯನ್ ಬ್ಯಾಂಕರ್.* 2(5).
- ದಾಸ್, ಎಂ.ಆರ್. "ಫೈನಾನ್ಸಿಯಲ್ ಇನ್ಕ್ಲೂಷನ್ ಅಂಡ್ ಪಿಎಂಜೆಡ್ಯ್: ಆ ಮ್ಯಾಕ್ರೋ ಅನಾಲಿಸಿಸ್", *ಇಂಡಿಯನ್ ಬ್ಯಾಂಕರ್,* 2(10).
- ಇರ್ರಿನ್ಕಿ, ಎಮ್. ಕೆ., & ಬರ್ಲಕಂಟಿ, ಕೆ. (2017). ಪೆರ್ಸ್ಪೆಕ್ಟಿವ್ಸ್ ಆನ್ ಪ್ರಧಾನ್ ಮಂತ್ರಿ ಜನಧನ್ ಯೋಜನಾ – ಆ ಸ್ಟಡಿ ವಿಥ್

ರೆಫರೆನ್ಸ್ ಟು ಥಲ್ಲಾರೆವು ಮಂಡಲ್. *ಇಂಟರ್ನ್ಯಾಷನಲ್ ಜರ್ನಲ್ ಆ ರಿಸರ್ಚ್ – ಗ್ರಂಥಾಲಯ್.* 5(6), 129–146.

- ಕೌರ್,ಹೆಚ್. & ಸಿಂಗ್,ಕೆ.ಎನ್. (2015). ಪ್ರಧಾನ್ ಮಂತ್ರಿ ಜನ ಧನ ಯೋಜನಾ (PMJDY): ಎ ಲೀಪ್ ಟಾವರ್ಡ್ಸ್ ಫೈನಾನ್ಸಿಯಲ್ ಇನ್ಕ್ಲೂಷನ್ ಇನ್ ಇಂಡಿಯಾ, ಇಂಟರ್ನ್ಯಾಷನಲ್ ಜರ್ನಲ್ ಆ ಎಮರ್ಜಿಂಗ್ ರಿಸರ್ಚ್ ಇನ್ ಮ್ಯಾನೇಜ್ಮೆಂಟ್ & ಟೆಕ್ನಾಲಜಿ, 4 (1), 25–29.
- ಪಟೇಲ್, ಜೆ. (2021). ಆ ಡೆಸ್ಕ್ರಿಪ್ಟಿವ್ ಸ್ಟಡಿ ಟು ಅಸ್ಸೆಸ್ಸ್ ದಿ ನಾಲೆಜ್ ಆ ಪ್ರಧಾನಮಂತ್ರಿ ಜನಧನ್ ಯೋಜನಾ ಅಮೊನ್ಗ್ ಯಂಗ್ ಅಡಲ್ಟ್ ಪೀಪಲ್ ಭಂದು ವಿಲೇಜ್ ಆ ಮೆಹಸಾನಾ ಡಿಸ್ಟ್ರಿಕ್ಟ್. *ಇಂಟರ್ನ್ಯಾಷನಲ್ ಜರ್ನಲ್ ಆ ಅಡ್ವಾನ್ಸಸ್ ಇನ್ ನರ್ಸಿಂಗ್ ಮ್ಯಾನೇಜ್ಮೆಂಟ್*, 322–324.